ಶ್ರೀರಸ್ತು.

ಜಯ ಶ್ರೀನಿವಾಸ.

ಶ್ರೀಮದ್ಭವಿಷ್ಯೋತ್ತರ ಪುರಾಣಾಂತರ್ಗತ

# ವೆಂಕಟೇಶಮಾಹಾತ್ಮ್ಯೆ.

ಉತ್ತರಭಾಗವು.

ಮೊದಲನೇ ಛಾಪಾ ೧೦೦೦ ಪ್ರತಿ.

ಟೀಕು, ತಾತ್ಪರ್ಯ, ಸಹಿತವಾಗಿ

ಉ॥ ದಕ್ಷಿಣಾಮೂರ್ತಿಶಾಸ್ತ್ರಿಗಳಿಂದ

ರಚಿಸಲ್ಪಟ್ಟ

ಬೆಂಗಳೂರಲ್ಲಿರುವ

ಸ್ವಕೀಯಶ್ರೀರಾಜರಾಜೇಶ್ವರೀಮುದ್ರಾ

ಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟು

ಪ್ರಚುರಪಡಿಸಲ್ಪಟ್ಟಿದೆ.

ಶಾಲೀವಾಹನ ಶಕ॥ ೧೮೧೦ನೇ ಸರ್ವಧಾರಿ ಸಂವತ್ಸರ॥

೧೮೮೮.

ಶ್ರೀರಸ್ತು.

ಜಯಶ್ರೀಕೃಷ್ಣ.

# ಅ ವ ತ ರ ಣಿ ಕೆ.

---

ಅಖಿಲಾಂಡಕೋಟಿಬ್ರಹ್ಮಾಂಡನಾಯಕನಾದ ಶ್ರೀಮನ್ನಾರಾಯಣಮೂರ್ತಿಯು ಕೃತಯುಗಾದಿಯಲ್ಲಿ ಚತುರ್ಮುಖಬ್ರಹ್ಮನಾಗಿ, ತಾನೇ ಸೃಷ್ಟಿಕರ್ತನೆನಿಸಿ, ಇಂದ್ರಾದಿದೇವತೆಗಳಿಗೆ ಬ್ರಹ್ಮಗೀತೆಯನ್ನು ತ್ರೇತಾಯುಗದಲ್ಲಿರಾಮಮೂರ್ತಿಯಾಗಿ, ಆಂಜನೇಯಾದಿಗಳಿಗೆ ರಾಮಗೀತಾದಿಗಳನ್ನು ದ್ವಾಪರಯುಗದಲ್ಲಿ ಕೃಷ್ಣಮೂರ್ತಿಯಾಗಿ ಅವತರಿಸಿ, ಅರ್ಜುನನಿಗೆ ಭಗವದ್ಗೀತೆಯನ್ನು ಕಲಿಯುಗದ ಆದಿಯಲ್ಲಿ ಶ್ರೀನಿವಾಸಮೂರ್ತಿಯಾಗಿ ವೆಂಕಟಪರ್ವತದಲ್ಲಿ ವೈಖಾನಸಮುನಿಗೆ ಶ್ರೀನಿವಾಸಗೀತೆಯನ್ನು ಉಪದೇಶಿಸಿದನು. ಈ ಶಾಸ್ತ್ರರಹಸ್ಯವನ್ನು ವ್ಯಾಸಮಹಾಮುನಿಯು ಕಲಿಯುಗದಲ್ಲಿ ಜನಿಸುವ ಜನರಿಗೆ ಐಹಿಕಾಮುಷ್ಮಿಕಫಲಪ್ರದವಾಗುವಂತೆ ಸ್ಕಾಂದಭಾರತ ಭವಿಷ್ಯತ್ಪುರಾಣಗಳಲ್ಲಿ ತೋರ್ಪಡಿಸಿರುವದ್ದರಿಂದ, ಅವುಗಳೊಳಗೆ ಭವಿಷ್ಯತ್ಪುರಾಣದಲ್ಲಿ ಹೇಳಲ್ಪಟ್ಟಿರುವದಾಗಿಯೂ, ಕಲಿತಾರಕೋಪಾಯಗಳಿಂದ ಕೂಡಿರುವದಾಗಿಯೂ, ಇರುವ ವೆಂಕಟೇಶಮಾಹಾತ್ಮ್ಯೆಯ ಉತ್ತರಭಾಗದಲ್ಲಿ ಇರುವ ರಹಸ್ಯಗಳು ಸುಲಭವಾಗಿ ತಿಳಿಯಲು, ಪ್ರತಿಪದಟೀಕಾ ತಾತ್ಪರ್ಯದಿಂದ ಕೂಡಿರುವಂತೆ ಮುದ್ರಿಸಲ್ಪಟ್ಟಿತು. ಇದನ್ನು ಓದುವದ್ದರಿಂದ ಉಂಟಾಗುವ ಪ್ರಯೋಜನವು ವಾಚಕರಿಗೆ ಸ್ವತಃ ಗೊತ್ತಾಗುವದ್ದರಿಂದ ವಿಶೇಷವಾಗಿ ಇಲ್ಲಿ ಬರೆಯಲು ಅವಶ್ಯವಾಗಿ ತೋರಲಿಲ್ಲ.

ಶ್ರೀನಿವಾಸಃ ಸತಾಂಗತಿಃ॥ ಅನನ್ಯಾಶ್ಚಿಂತಯಂತೋಮಾಂ
ಯೇಜನಾಃ ಪರ್ಯುಪಾಸತೇ। ತೇಷಾಂನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂವಹಾಮ್ಯಹಂ ॥

ಎಂಬದಾಗಿ ವಿಷ್ಣುಸಹಸ್ರನಾಮಗೀತೆಗಳೊಳು ಇರುವಂತೆ ನಂಬಿದವರಿಗೆ ಸಕಲೇಷ್ಟಾರ್ಥಗಳನ್ನು ಕೊಡುವದರಲ್ಲಿ ಸಂದೇಹವಿಲ್ಲವು. ಇದು ಕಲಿಧರ್ಮಗಳನ್ನು ಮುಖ್ಯವಾಗಿ ಬೋಧಿಸುವದ್ದರಿಂದ ಆಸ್ತಿಕರೆಲ್ಲರೂ ನೋಡತಕ್ಕದ್ದಾಗಿರುವದು.

ಜಯಶ್ರೀನಿವಾಸ.

# ವಿಷಯಸೂಚನೆ.

ಶ್ರೀರಸ್ತು.

ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.

# ವೆಂಕಟೇಶ ಮಾಹಾತ್ಮ್ಯೆ.

## ಉತ್ತರ ಭಾಗ ಪ್ರಾರಂಭಃ.

ಋಷಯಊಚುಃ ॥ ಸೂತಸೂತಮಹಾಭಾಗಗದಿತಂಪರ
ಮಾದ್ಭುತಂ । ಕೃಷ್ಣಸ್ಯಶ್ರೀನಿವಾಸಸ್ಯಪದ್ಮಾವತ್ಯಾಸ್ತ
ಥಾಶ್ರಿಯಃ ॥ ೧ ॥ ಬಕುಳಾಯಾಃಯಶೋದಾಯಾಃತೊಂ

ಋಷಯಃ ಊಚುಃ-ಋಷಿಗಳು ಹೇಳುತ್ತಲಿದ್ದಾರೆ॥ ಮಹಾಭಾಗ-ಮಹನೀಯ್ಯನಾದ, ಸೂತಸೂತ-ಎಲೈ ಸೂತ ಮುನಿಯೇ ಸೂತಮುನಿಯೇ, ಪರಮ-ಅತ್ಯಂತವಾಗಿ, ಅದ್ಭುತಂ-ಆಶ್ಚರ್‍ಯಕರವಾದ, ಶ್ರೀನಿವಾಸಸ್ಯ-ಲಕ್ಷ್ಮೀ ನಿವಾಸ ಭೂತನಾದ, ಕೃಷ್ಣಸ್ಯ-ಶ್ರೀ ಕೃಷ್ಣಮೂರ್ತಿಯ, ತಥಾ-ಹಾಗೆ, ಶ್ರಿಯಃ-ಲಕ್ಷ್ಮೀ ಸ್ವರೂಪಳಾದ, ಪದ್ಮಾವತ್ಯಾಃ-ಪದ್ಮಾವತಿಯ, ಚರಿತಂ-ಚರಿತ್ರೆಯು, ಗದಿತಂ-ನಿನ್ನಿಂದ ಹೇಳಲ್ಪಟ್ಟಿತು ॥ ತಾ ॥ ಮಹನೀಯ್ಯನಾದ ಎಲೈ ಸೂತ ಪುರಾಣೀಕನೇ, ಲಕ್ಷ್ಮಿಗೆ ಆಶ್ರಯ ಭೂತನಾದ ಶ್ರೀ ಕೃಷ್ಣನ ಮತ್ತು ಲಕ್ಷ್ಮೀ ಸ್ವರೂಪಿಣಿಯಾದ ಪದ್ಮಾವತೀ ದೇವಿಯ ಅತ್ಯಾಶ್ಚರ್‍ಯಕರವಾದ ಚರಿತ್ರೆಯನ್ನು ನೀನು ನಮಗೆ ಹೇಳಿದವನಾಗಿದ್ದೀ ॥ ॥೧॥

ಯಶೋದಾಯಾಃ-ಯಶೋದಾ ದೇವಿಯ ಅಪರಜನ್ಮವಾಗಿರುವವಳಾದ, ಬಕುಳಾಯಾಃ-ಬಕುಳಾ ದೇವಿಯ, ತೊಂಡಮಾನಸ್ಯ-ತೊಂಡಮಾನನೆಂಬ. ಭೂಪತೇಃ-ಧೊರೆಯ, ವಿಯನ್ನೃಪಸ್ಯ-ಆಕಾಶರಾಯನ.

ಡವಮಾನಸ್ಯಭೂಪತೇಃ।ವಿಯನ್ನೃಪಸ್ಯತತ್ಸೂನೋಃವೈಖಾ
ನಸರುಷೇಸ್ತಥಾ ॥ ೧ ॥ ಸ್ವಾಮಿತೀರ್ಥಸ್ಯಚರಿತಂಶೇಷವಾ
ಯ್ವೋರ್ಮಹಾತ್ಮನೋಃ । ವೆಂಕಟಾದ್ರೇಶ್ಚಮಹಿಮಾ ತ್ವ
ಯೋಕ್ತಂಸರ್ವಮಿವತತ್ ॥೨॥ ಜನಕಾಯಶತಾನಂದಃ
ತತ್ಪರಂಯದುವಾಚಹ। ಕಿಮಕಾರ್ಷೀತ್ಸರಾಜರ್ಷಿಃಭ್ರಾ
ತೃಶೋಕಾಭಿಪೀಡಿತಃ ॥ ॥೪॥

ತತ್ಸೂನೋಃ-ಆ ಆಕಾಶರಾಯನ ಮಗನ, ತಥಾ-ಹಾಗೆ, ವೈಖಾನಸ ರುಷೇಃ-ವೈಖಾನಸ ಮುನಿಯ. ಚರಿತಂ-ಚರಿತ್ರವು ಗಪಿತಂ-ಹೇಳಲ್ಪಟ್ಟಿತು॥ ತಾ ॥ ಯಶೋದಾ ದೇವಿಯ ಅಪರ ಜನ್ಮವಾದ ಬಕುಳಾ ದೇವಿಯು, ಮತ್ತು ತೊಂಡಮಾನರಾಯನ, ಮತ್ತು ಆಕಾಶರಾಯನ, ಆಕಾಶರಾಯನ ಮಗನ, ವೈಖಾನಸ ಮುನಿಯ, ವೃತ್ತಾಂತವು ಹೇಳಲ್ಪಟ್ಟಿತು ॥ ॥ ೧ ॥

ಸ್ವಾಮಿತೀರ್ಥಸ್ಯ-ಸ್ವಾಮಿ ಪುಷ್ಕರಣೀ ತೀರ್ಥದ, ಚರಿತಂ-ಚರಿತ್ರವು, ಮಹಾತ್ಮನೋಃ-ಮಹಾ ಬುದ್ಧಿ ಶಾಲಿಗಳಾದ, ಅಥವಾ ಮಹಾ ಧೈರ್ಯ ಶಾಲಿಗಳಾದ. ಶೇಷವಾಯ್ವೋಃ-ಆದಿಶೇಷ ಮಾರುತರ, ಚರಿತಂ-ಚರಿತ್ರವು, ವೆಂಕಟಾದ್ರೇಃ-ವೆಂಕಟ ಪರ್ವತದ, ಮಹಿಮಾಚ-ಮಾಹಾತ್ಮ್ಯವು, ತ್ವಯಾ-ನಿನ್ನಿಂದ, ಸರ್ವಂ-ಸಮಸ್ತವಾದ, ತತ್-ಅದೆಲ್ಲವು, ಉಕ್ತಮೇವ-ಹೇಳಲ್ಪಟ್ಟಿತು॥ ತಾ॥ಸ್ವಾಮಿ ತೀರ್ಥದ ಮತ್ತು ಧೈರ್ಯಶಾಲಿಗಳಾದ ವಾಯುಶೇಷರ ಚರಿತ್ರವು ವೆಂಕಟಾದ್ರಿಯ ಮಹಿಮೆಯು ಇವೆಲ್ಲವು ನಿನ್ನಿಂದ ಹೇಳಲ್ಪಟ್ಟಿತು॥ ॥೨॥

ತತ್ಪರಂ-ಆ ಬಳಿಕ, ಶತಾನಂದಃ-ಶತಾನಂದ ಮುನಿಯು, ಜನಕಾಯ-ಜನಕ ಮಹಾರಾಯನಿಗೆ, ಯತ್-ಯಾವದನ್ನು, ಉವಾಚಾಹ-ಹೇಳಿದನು, ಸಃ-ಆ, ರಾಜರ್ಷಿಃ-ರಾಜ ರುಷಿಯಾದ ಜನಕರಾಯನು, ಭ್ರಾತೃ-ತಮ್ಮನಾದ ಕುಶಧ್ವಜನ, ಶೋಕ-ದುಃಖದಿಂದ. ಕಿಂ-ಯಾವದನ್ನು. ಅಕಾರ್ಷೀತ್-ಮಾಡಿದನು ॥ ತಾ ॥ ಆ ಬಳಿಕ ಶತಾನಂದ ಖುಷಿಯು ಜನಕರಾಯನಿಗೆ ಯಾವ ಸಮಾಚಾರವನ್ನು ಹೇಳಿದನು. ಆ ರಾಜ ಶ್ರೇಷ್ಠನಾದ ಜನಕರಾಯನು ಸತ್ತು ಹೋದಕುಶಧ್ವಜನ ದುಃಖದಿಂದ ಪೀಡಿತನಾಗಿ ಯಾವಕೆಲಸವನ್ನು ಮಾಡಿದನು॥೪॥

ಕಥಂ ಸೇವಾಂಚಕ್ರೇಕವಾಸ್ವೆಂಕಟೆ ವೆಂಕಟೇಶ್ವರಂ । ಕಥಂ
ಸಮರ್ಚಯಾಮಾಸಕಥಂಭ್ರಾತಾಸ್ಯಜೀವಿತಃ ॥೫॥ ಕಥಂ
ಜಾಮಾತೃತಾಂ ಪ್ರಾಪ್ತಃಹರಿರ್ನಾರಾಯಣೋವ್ಯಯಃ ।
ಪ್ರವೃದ್ಧೇತುಕಲೌಸೂತಶ್ರೀನಿವಾಸಸ್ಸತಾಂಗತಿಃ ॥ ೬ ॥
ಭಕ್ತಾನಾಂಕಾರ್ಯಸಿದ್ಧ್ಯರ್ಥಂ ವೆಂಕಟೇಕಥಮರ್ಚಿತಃ ।
ಯುಗೆಯುಗೇಚಯೇಧರ್ಮಾಃಯೇತುವೈಚಕ್ರವರ್ತಿನಃ ॥ ೭ ॥

ವೆಂಕಟೇ-ವೆಂಕಟಗಿರಿಯಲ್ಲಿ, ವೆಂಕಟೇಶ್ವರಂ-ವೆಂಕಟಾಚಲಪತಿಯನ್ನು, ಉದ್ದಿಶ್ಯ-ಕುರಿತು, ಸೇವಾಂ-ಸೇವೆಯನ್ನು, ಕಥಂ—ಹ್ಯಾಗೆ, ಕೃತವಾನ್-ಮಾಡಿದನು, ಕಥಂ-ಹ್ಯಾಗೆ ಸಮರ್ಚಯಾಮಾಸ—ವೆಂಕಟೇಶ್ವರನಿಗೆ ಅರ್ಚನೆಯನ್ನು ಮಾಡಿದನು, ಅಸ್ಯ-ಜನಕರಾಯನ, ಭ್ರಾತಾ—ತಮ್ಮನಾದ ಕುಶಧ್ವಜನು, ಕಥಂ-ಹ್ಯಾಗೆ, ಜೀವಿತಃ-ಬದುಕಿಸಲ್ಪಟ್ಟನು॥ ತಾ॥ವೆಂಕಟೇಶ್ವರನನ್ನು ಕುರಿತು ಹ್ಯಾಗೆಸೇವೆಯನ್ನು ಮಾಡಿದನು ಮತ್ತು ಹ್ಯಾಗೆ ಪೂಜಿಸಿದನು. ಸತ್ತು ಹೋದ ಕುಶಧ್ವಜನೆಂಬಜನಕರಾಯನತಮ್ಮನು ಹ್ಯಾಗೆ ಬದುಕಿದವನಾದನು॥ ॥ ೫ ॥

ಅವ್ಯಯಃ-ನಾಶರಹಿತನಾದ. ನಾರಾಯಣಃ-ಕ್ಷೀರಸಮುದ್ರವೇ ಆಲಯವಾಗುಳ್ಳವನಾದ, ಹರಿಃ—ವಿಷ್ಣುವು, ಕಥಂ-ಹ್ಯಾಗೆ, ಜಾಮಾತೃತಾಂ ಅಳಿಯಾತನವನ್ನು, ಕಥಂ-ಹ್ಯಾಗೆ, ಪ್ರಾಪ್ತಃ-ಪಡೆದವನಾದನು, ಹೇ ಸೂತ-ಎಲೈ ಸೂತಮುನಿಯೆ, ಕಲೌ-ಕಲಿಯುಗವು, ಪ್ರವೃದ್ಧೇಸತಿ—ಅಭಿವೃದ್ಧಿಯನ್ನೈದುತ್ತಿರಲು, ಸತಾಂ-ಸತ್ಪುರುಷರಿಗೆ, ಗತಿಃ—ದಿಕ್ಕಾಗಿರುವವನಾದ, ಶ್ರೀನಿವಾಸಃ-ಶ್ರೀನಿವಾಸನು ॥ ತಾ ॥ ನಾಶರಹಿತನಾಗಿಯೂ ಕ್ಷೀರಾಬ್ಧಿಶಾಯಿಯಾಗಿಯೂ ಇರುವ ಮಹಾ ವಿಷ್ಣುವು ಜನಕರಾಯನಿಗೆ ಹ್ಯಾಗೆ ಅಳಿಯನಾದನು. ಸತ್ಪುರುಷರಿಗೆ ಆಶ್ರಯಭೂತನಾದ ಶ್ರೀನಿವಾಸನು ಕಲಿಯು ವೃದ್ಧಿಯಾಗುತ್ತಿರಲು , ॥೬॥

ವೆಂಕಟೇ-ವೆಂಕಟಗಿರಿಯಲ್ಲಿ, ಭಕ್ತಾನಾಂ-ಸೇವಕರ, ಕಾರ್ಯಸಿದ್ಧ್ಯರ್ಥಂ-ಕೆಲಸವಾಗುವದಕ್ಕಾಗಿ, ಕಥಂ—ಹ್ಯಾಗೆ, ಅರ್ಚಿತಃ-ಪೂಜಿಸಲ್ಪಟ್ಟನು, ಯುಗೆ ಯುಗೆತು—ಪ್ರತಿ ಯುಗದಲ್ಲಿಯೂ. ಧರ್ಮಾಃ—ಧರ್ಮಗಳು. ಯೇ-ಯಾವವು, ಚಕ್ರವರ್ತಿನಃ-ಚಕ್ರವರ್ತಿಗಳಾದ ಮಹಾ ರಾ

ಭವಿಷ್ಯಂತಿತದಾಚಕ್ಷ್ವಕಲಿಧರ್ಮಾನ್ವಿಶೇಷತಃ ॥ ಕಲಿವ
ರ್ಜ್ಯಾಂಸ್ತಥಾ ಬ್ರೂಹಿಕಸ್ಮಿನ್ಕಾಲೇವಿಶೇಷತಃ ॥ ಕುಬೇರದ
ತ್ತಂಯದ್ದ್ರವ್ಯಂ ಕದಾಕೃಷ್ಣೇನದೀಯತೇ ॥೪॥ ಅಧರ್ಮೇ
ಧರ್ಮತಾಂಪ್ರಾಪ್ತೇಪಾಪಾಚಾರಯುತೇಕಲೌ।ರಾಜನ್ಯಾಃ
ಕೇಭವಿಷ್ಯಂತಿ ಕಥಂಮುಕ್ತಿಃಕಲೌಯುಗೇ ॥ ೯ ॥

ಜರುಗಳು, ಯೇ-ಯಾರು ಭವಿಷ್ಯಂತಿ-ಆಗುತ್ತಲಿದ್ದಾರೆ ॥ ತಾ ॥ ಪ್ರತಿಯುಗದಲ್ಲಿಯೂ ಯಾವ ಯಾವಧರ್ಮಗಳು ನಡೆಯ ಬೇಕಾದವುಗಳು, ಆಯಾಯ ಯುಗದಲ್ಲಿ ಯಾರು ಯಾರುಚಕ್ರವರ್ತಿಗಳಾಗಿರುತ್ತಾರೆ॥೭॥

ತತ್-ಅದನ್ನು, ವಿಶೇಷತಃ-ಅತಿಶಯವಾಗಿ, ಕಲಿಧರ್ಮಾನ್-ಕಲಿಯುಗದಲ್ಲಿ ಮನುಷ್ಯರು ನಡಿಯಬೇಕಾದ ಧರ್ಮಗಳನ್ನು, ಆಚಕ್ಷ್ವ-ಹೇಳು ॥ ಕಲಿವರ್ಜ್ಯಾನ್-ಕಲಿಯುಗದಲ್ಲಿ ಮಾಡಬಾರದವುಗಳಾದ ಧರ್ಮಗಳನ್ನು, ತಥಾ-ಹಾಗೆ, ಬ್ರೂಹಿ-ಹೇಳು, ಕಸ್ಮಿನ್ಕಾಲೇ-ಯಾವಸಮಯದಲ್ಲಿ, ವಿಶೇಷತಃ-ಅತಿಶಯವಾಗಿ, ಕುಬೇರ-ಕುಬೇರನಿಂದ, ದತ್ತಂ-ಪದ್ಮಾವತಿಯ ವಿವಾಹಕಾಲದಲ್ಲಿ ಕೊಡಲ್ಪಟ್ಟ; ಯತ್-ದ್ರವ್ಯಂ-ಯಾವಧನವುಂಟೋ, (ಅದು,) ಕದಾ-ಯಾವಾಗ, ಕೃಷ್ಣೇನ-ಕೃಷ್ಣನಿಂದ, ದೀಯ್ಯತೇ-ಕೊಡಲ್ಪಡುತ್ತೆ॥ತಾ॥ ಅದನ್ನು ನನಿಗೆ ತಿಳಿಸುವದಲ್ಲದೆ ಕಲಿಯುಗದಲ್ಲಿ ಜನರು ನಡಿಸಬೇಕಾದ ಧರ್ಮಗಳನ್ನು, ಮತ್ತು ಮಾಡಬಾರದೇ ಇರುವ ಧರ್ಮಗಳನ್ನು, ಹಾಗೆಯೇ ಹೇಳುವವನಾಗು ॥ ಪದ್ಮಾವತಿಯ ವಿವಾಹಕ್ಕೋಸ್ಕರವಾಗಿ ಕುಬೇರನು ಕೊಟ್ಟದ್ದು ಹದಿನಾಲ್ಕುಕೋಟಿ ರಾಮಟಂಕಿ ವರಹಗಳ ರೂಪವಾದಧನಕ್ಕೆ ಪ್ರತಿನಿಧಿಯಾದ ದ್ರವ್ಯವನ್ನು ಯಾವಾಗ ಶ್ರೀನಿವಾಸನು ಕೊಡುತ್ತಲಿದ್ದಾನೆ ॥೪॥

ಅಧರ್ಮೇ-ಅಧರ್ಮವು, ಧರ್ಮತಾಂ-ಧರ್ಮಭಾವವನ್ನು, ಪ್ರಾಪ್ತೇ-ಹೊಂದುತ್ತಿರಲು, ಕಲೌ-ಕಲಿಯುಗದಲ್ಲಿ. (ಜನೇ-ಜನವು) ಪಾಪಾಚಾರಯುತೇ-ಪಾಪ-ಪಾಪಕರವಾದ, ಆಚಾರ-ನಡತೆಯಿಂದ, ಯುತೇ-ಕೂಡಿರಲು, ರಾಜನ್ಯಾಃ-ಧೊರೆಗಳು, ಕೇ-ಯಾರು. ಭವಿಷ್ಯಂತಿ-ಆಗುತ್ತಾರೆ, ಮುಕ್ತಿಃ-ಮೋಕ್ಷವು, ಕಥಂ-ಹ್ಯಾಗೆ ಆಗುವದು ॥ತಾ॥ ಕಲಿಯುಗದಲ್ಲಿ ಅಧರ್ಮವು ಧರ್ಮವಾಗಿ ಜನರು ಪಾಪಕೆಲಸಗಳಲ್ಲಿ ಆಸಕ್ತರಾಗಲು, ಯಾರು ಯಾರು ಧೊರೆಗಳಾಗಿರುತ್ತಾರೆ; ಕಲಿಯುಗದಲ್ಲಿ ಜನರಿಗೆಮೋಕ್ಷವು ಹ್ಯಾಗೆ ಆಧೀತು ॥೯॥

ಏತತ್ಸರ್ವಂವಿಶೇಷೇಣಅಸ್ಮಾಕಂಬ್ರೂಹಿವಿಸ್ತರಾತ್ ॥೧೦॥
ಶ್ರೀಸೂತಃ॥ ಚತುರ್ಯುಗೇಷುನಾಮಾನಿಮಹಿಮಾಂವೆಂಕ
ಟೇಶಿತುಃ। ಶ್ರುತ್ವಾತುಮಿಥಿಲಾಧೀಶಶ್ಶತಾನಂದಮಥಾಬ್ರ
ವೀತ್ ॥೧೧॥ಜನಕಉವಾಚ ॥ ಭ್ರಾತೃದುಃಖಾಭಿಭೂತಸ್ಯ
ಮುನೇಮಮನಿರಂತರಂ। ಶ್ರೀನಿವಾಸಸ್ಯಚರಿತ ಶ್ರವಣಾ
ತ್ಸುಖಮುದ್ಭವೇತ್ ॥ ॥೧೨॥

ಏತತ್ಸರ್ವಂ-ಇದೆಲ್ಲವನ್ನು,ವಿಶೇಷೇಣ-ಅತಿಶಯವಾಗಿ, ಅಸ್ಮಾಕಂ-ನಮ್ಮಗಳಿಗೆ, ವಿಸ್ತರಾತ್-ವಿಸ್ತಾರವಾಗಿ, ಬ್ರೂಹಿ-ಹೇಳು॥ತಾ॥ ಇವೆಲ್ಲವನ್ನೂ ನಮಗಳಿಗೆ ವಿಸ್ತಾರವಾಗಿ ಹೇಳುವವನಾಗು ॥೧೦॥

ಶ್ರೀಸೂತಃ ॥ ಸೂತಮಹರ್ಷಿಯು ಹೇಳುತ್ತಲಿದ್ದಾನೆ ॥ ಮಿಥಿಲಾಧೀಶಃ-ಮಿಥಿಲಾಪಟ್ಟಣಕ್ಕೆ ಅರಸನಾದ ಜನಕರಾಯನು, ಚತುರ್ಯುಗೇ-ನಾಲ್ಕು ಯುಗವಲ್ಲಿಯೂ, ನಾಮಾನಿ-ವೆಂಕಟಪರ್ವತಕ್ಕೆ ಬರುವ ಹೆಸರುಗಳನ್ನು,ವೆಂಕಟೇಶಿತುಃ-ಶ್ರೀನಿವಾಸನ, ಮಹಿಮಾಂ-ಮಾಹಾತ್ಮ್ಯವನ್ನು, ಶ್ರುತ್ವಾ-ಕೇಳಿ, ಅಥ-ಆಬಳಿಕ, ಶತಾನಂದಂ-ಶತಾನಂದರುಷಿಯನ್ನು ಕುರಿತು, ಅಬ್ರವೀತ್-ಹೇಳಿದನು ॥ತಾ॥ ನಾಲ್ಕು ಯುಗದಲ್ಲಿಯೂ ವೆಂಕಟಪರ್ವತಕ್ಕೆ ಇರುವ ಹೆಸರುಗಳನ್ನು ವೆಂಕಟೇಶ್ವರನ ಮಹಿಮೆಯನ್ನೂ ಜನಕಮಹಾರಾಯನು ಕೇಳಿ ಆ ಬಳಿಕ ಶತಾನಂದ ರುಷಿಯನ್ನು ಕುರಿತು ಹೇಳುವವನಾದನು॥೧೧॥

ಜನಕಉವಾಚ ॥ ಜನಕ ರಾಯನು ಹೇಳುತ್ತಲಿದ್ದಾನೆ ॥

ಮುನೇ-ಮನನಶೀಲನಾದ ಶತಾನಂದಮುನಿಯೆ, ಭ್ರಾತೃದುಃಖಾಭಿಭೂತಸ್ಯ-ಭ್ರಾತೃ-ತಮ್ಮನಾದ ಕುಶಧ್ವಜನ, ದುಃಖ-ದುಃಖದಿಂದ, ಅಭಿಭೂತಸ್ಯ-ತಿರಸ್ಕರಿಸಲ್ಪಟ್ಟವನಾದ, ಮಮ-ನನಗೆ, ನಿರಂತರಂ-ಯಾವಾಗಲೂ, ಶ್ರೀನಿವಾಸಸ್ಯ-ಶ್ರೀನಿವಾಸದೇವರ,ಚರಿತಂ-ಚರಿತ್ರೆಯನ್ನು, ಶ್ರವಣಾತು-ಕೇಳುವದ್ದರಿಂದ, ಸುಖಂ-ಕ್ಷೇಮವು, ಉದ್ಭವೇತ್-ಹುಟ್ಟುವದಾದೀತು. ॥ತಾ॥ ಎಲೈ ಶತಾನಂದ ಮುನಿಯೆ ಯಾವಾಗಲೂ ಸತ್ತುಹೋದ ನನ್ನ ತಮ್ಮನಾದ ಕುಶಧ್ವಜನ ದುಃಖದಿಂದ ಪೀಡಿತನಾದ ನನಗೆ ಶ್ರೀನಿವಾಸಮೂರ್ತಿಯ ಕಥೆಯನ್ನು ಕೇಳಿದ್ದರಿಂದ ಸುಖ ಉಂಟಾದೀತು॥

ಇದಾನೀಂಶ್ರೋತುಮಿಚ್ಛಾಮಿ ಮಯಾಕಿಂಕಾರ್ಯಮದ್ಯವೈ
ಭ್ರಾತೃಲಾಭಾಯತದ್ಬ್ರೂಹಿ ಶ್ರೀನಿವಾಸಾರ್ಚನವಿಧಿಂ
॥೧೩॥ ಜನಕಸ್ಯವಚಃ ಶ್ರುತ್ವಾಶತಾನಂದೋಬ್ರವೀದ್ವಚಃ।
ರಾಜರ್ಷೇಶೃಣುಮೇವಾಕ್ಯಂಗಚ್ಛತ್ವಂವೆಂಕಟಾಚಲಂ ॥
॥೧೪॥ಭೂಮಿಶಾಯೀನಿರಾಹಾರೀಜಿತ ಕ್ರೋಧೋಜಿತೇಂದ್ರಿ
ಯಃ। ಪ್ರಾತರುತ್ಥಾಯದೇವೇಶಂಧ್ಯಾತ್ವಾಭಕ್ತಿಸಮ

ಅದ್ಯ–ಈಗ, ಮಯಾ–ನನ್ನಿಂದ ಕಿಂಕಾರ್ಯಂ–ಯಾವ ಕೆಲಸವು ಮಾಡಲ್ಪಡಬೇಕು, ಇದಾನೀಂ–ಈಗ, ಶ್ರೋತುಂ–ಕೇಳುವದಕ್ಕೆ, ಇಚ್ಛಾಮಿ–ಅಪೇಕ್ಷಿಸುತ್ತಲಿದ್ದೇನೆ, ಭ್ರಾತೃಲಾಭಾಯ–ಆ ಕುಶಧ್ವಜನನ್ನು ಪಡೆಯುವದಕ್ಕೆ, ತತ್–ಮಾಡಬೇಕಾದ ಆ ಕೆಲಸವನ್ನು, ಶ್ರೀನಿವಾಸಾರ್ಚನೆ–ಶ್ರೀನಿವಾಸ–ಶ್ರೀನಿವಾಸನ, ಅರ್ಚನೆ–ಸೇವೆಮಾಡುವದರಲ್ಲಿ, ವಿಧಿಂ–ವಿಧಾನವನ್ನು, ಬ್ರೂಹಿ–ಹೇಳು ॥ತಾ॥ ಈಗ ನಾನು ಏನು ಮಾಡಬೇಕೋ ಅದನ್ನು ಕೇಳುವದಕ್ಕೆ ಅಪೇಕ್ಷಿಸುತ್ತೇನೆ. ಭ್ರಾತೃಲಾಭವಾಗುವದಕ್ಕಾಗಿ ಮಾಡಬೇಕಾದ ಆ ಕೆಲಸವನ್ನು, ಮತ್ತು ಶ್ರೀನಿವಾಸನನ್ನು ಪೂಜಿಸುವ ವಿಧಿಯನ್ನು ಹೇಳುವವನಾಗು ॥ ॥೧೩॥

ಜನಕಸ್ಯ–ಜನಕಮಹಾರಾಯನ, ವಚಃ–ಮಾತನ್ನು, ಶ್ರುತ್ವಾ–ಕೇಳಿ, ಶತಾನಂದಃ–ಶತಾನಂದಮುನಿಯು, ವಚಃ–ಮಾತನ್ನು, ಅಬ್ರವೀತ್–ಹೇಳಿದನು, ರಾಜರ್ಷೇ–ಧೊರೆಯಾದ ಜನಕರಾಯನೆ, ಮೇ–ನನ್ನ, ವಾಕ್ಯಂ–ಮಾತನ್ನು, ಶೃಣುಷ್ವ–ಕೇಳು, ತ್ವಂ–ನೀನು, ವೆಂಕಟಾಚಲಂ–ವೆಂಕಟಗಿರಿಯನ್ನು ಕುರಿತು, ಗಚ್ಛ–ಹೋಗು ॥ತಾ॥ ಶತಾನಂದಮುನಿಯು ಜನಕರಾಯನ ಮಾತನ್ನು ಕೇಳಿ ಒಂದು ಮಾತನ್ನು ಹೇಳಿದವನಾದನು. ಎಲೈ ಜನಕರಾಯನೇ ನನ್ನ ಮಾತನ್ನು ಕೇಳು, ವೆಂಕಟಪರ್ವತವನ್ನು ಕುರಿತು ಹೋಗುವವನಾಗು ॥ ॥೧೪॥

ಭೂಮಿಶಾಯೀ–ನೆಲದಮೇಲೆ ಮಲಗುವವನಾಗಿ, ನಿರಾಹಾರೀ–ನಿಶಶನವ್ರತ ಮಾಡುವವನಾಗಿ, ಜಿತಕ್ರೋಧಃ–ಕೋಪವನ್ನುಜಯಿಸಿದವನಾಗಿ: ಜಿತೇಂದ್ರಿಯಃ–ಇಂದ್ರಿಯಜಯವುಳ್ಳವನಾಗಿ, ಪ್ರಾತಃ–ಬೆಳಿಗ್ಯೆ, ಉತ್ಥಾಯ–ಎದ್ದು, ಭಕ್ತಿಸಮನ್ವಿತಃ–ಭಕ್ತಿಯಿಂದ ಕೂಡಿದವನಾಗಿ, ದೇವೇಶಂ–ದೇವತೆಗಳಿಗೆ ಸ್ವಾಮಿಯಾದ ವೆಂಕಟೇಶ್ವರನನ್ನು, ಧ್ಯಾತ್ವಾ–

ಸ್ಥಿತಃ ॥ ೧೫ ॥ ಕರ್ಣೇ ಧೃತ್ವಾ ಯಜ್ಞಸೂತ್ರಂಶಿರೋವೆ
ಷ್ಟನಸಂಯುತಃ । ಜಲಕುಂಭಂಸಮಾದಾಯ ನೈರು
ತ್ಯಾಂಸಮವಸ್ಥಿತಃ ॥ ೧೬ ॥ ತೃಣೈರಾಚ್ಛಾದ್ಯಪೃಥಿವೀಂ
ರಾತ್ರೌಚೇ ದ್ದಕ್ಷಿಣಾಮುಖಃ।ಉದಙ್ಮುಖೋಹ್ನಿಮನುಜಃ
ಮಲನಿರ್ಮೋಚನಂಚರೇತ್ ॥ । ॥೧೭॥

ಧ್ಯಾನಮಾಡಿ ॥ತಾ॥ ನೆಲದಮೇಲೆ ಮಲಗುವವನಾಗಿಯೂ, ಕೋಪವಿಲ್ಲದವನಾಗಿಯೂ, ಅಯೋಗ್ಯಾಹಾರವಿಲ್ಲದವನಾಗಿಯೂ, ಇಂದ್ರಿಯಗಳನ್ನುಜಯಿಸಿರುವವನಾಗಿಯೂ, ಭಕ್ತಿಯುಳ್ಳವನಾಗಿಯೂ ಇದ್ದುಕೊಂಡು, ಬೆಳಿಗ್ಯೆ ಎದ್ದು ಇಂದ್ರಾದಿ ದೇವತೆಗಳಿಗೆ ಸ್ವಾಮಿಯಾದ ವೆಂಕಟೇಶ್ವರನನ್ನು ಧ್ಯಾನಿಸಿ ॥ ॥೧೫॥

ಯಜ್ಞಸೂತ್ರಂ-ಯಜ್ಞೋಪವೀತವನ್ನು, ಕರ್ಣೆ-ಕಿವಿಯಮೇಲೆ, ಧೃತ್ವಾ-ಇರಿಸಿಕೊಂಡು, ಶಿರೋವೇಷ್ಟನ-ತಲೆಗೆ ಬಟ್ಟೆಯನ್ನು ಸುತ್ತುವದರಿಂದ, ಸಂಯುತಃ-ಕೂಡಿದವನಾಗಿ, ಜಲಕುಂಭಂ-ನೀರಿನಿಂದ ಸಹಿತ ತಂಬಿಗೆಯನ್ನು, ಸಮಾದಾಯ-ತೆಗದುಕೊಂಡು, ನೈರುತ್ಯಾಂ-ನೈರುತಿ ದಿಕ್ಕಿನಲ್ಲಿ, ಸಮವಸ್ಥಿತಃ-ಇರುವವನಾಗಿ ॥ ತಾ ॥ ಆಬಳಿಕ ಕಿವಿಗೆ ಯಜ್ಞೋಪವೀತವಂನು ತಗಲಿಸಿಕೊಂಡು, ತಲೆಗೆ ಬಟ್ಟೆಯನ್ನು ಸುತ್ತಿಕೊಂಡವನಾಗಿ, ನೀರಿನಿಂದ ತುಂಬಿರುವ ತಂಬಿಗೆಯನ್ನು ತೆಗದುಕೊಂಡು ರಾಕ್ಷಸದಿಕ್ಕಿಗೆ ಹೋಗಿ ಅಲ್ಲಿ ಇರುವವನಾಗಿ ॥ ॥೧೬॥

ಪೃಥಿವೀಂ-ಭೂಮಿಯಂನು, ತೃಣೈಃ-ಹುಲ್ಲು ಕಡ್ಡಿಗಳಿಂದ, ಆಚ್ಛಾದ್ಯ-ಮುಚ್ಚಿ, ರಾತ್ರೌಚೇತ್-ರಾತ್ರಿಯಾಗಿದ್ದರೆ, ದಕ್ಷಿಣಾ ಮುಖಃ-ದಕ್ಷಿಣದಿಕ್ಕಿಗೆ ಎದುರಾಗಿರುವವನಾಗಿ, ಅಹ್ನಿ-ಹಗಲಾಗಿದ್ದರೆ, ಮನುಜಃ-ಮನುಷ್ಯನು, ಉದಙ್ಮುಖಃ-ಉತ್ತರಾಭಿಮುಖನಾಗಿರುವವನಾಗಿ, ಮಲನಿರ್ಮೋಚನಂ-ಮಲೋತ್ಸರ್ಜನೆಯಂನು,ಚರೇತ್-ಮಾಡಬೇಕು ॥ ತಾ ॥ ಭೂಮಿಯಮೇಲೆ ಹುಲ್ಲುಕಡ್ಡಿಗಳನ್ನು ಹರಡಿ, ರಾತ್ರಿಕಾಲದಲ್ಲಿ ದಕ್ಷಿಣಮುಖನಾಗಿಯೂ, ಹಗಲು ಉತ್ತರಾಭಿಮುಖನಾಗಿಯೂ ಇದ್ದುಕೊಂಡು ಮನುಷ್ಯನು ಮಲನಿವೃತ್ತಿಯಂನು ಮಾಡಬೇಕು ॥೧೭॥

ಲಿಂಗೆಯೇಕಂಗುದೇಪಂಚ ಪಾದಪಾಣ್ಯೋಃದಶಕ್ರಮಾತ್ ।
ನಿರ್ವರ್ತ್ಯಮೃತ್ತಿಕಾ ಶೌಚಂಮುಖ ಪ್ರಕ್ಷಾಳನಂ ಚರೇ
ತ್॥೧೮॥ದಂತಶುದ್ಧಿಂತತಃಕೃತ್ವಾಗಂಡೂಷೈರರ್ಕಸಂಮಿ
ತೈಃ । ಸ್ನಾನಂಕುರ್ಯಾನ್ಮಂತ್ರಜಲೈಃಅಘಮರ್ಷಣಸೂ

ಲಿಂಗೆ-ಪ್ರಧಾನದಲ್ಲಿ, ಏಕಂ-ಒಂದು ಮೃತ್ತಿಕೆಯಂನ್ನು, ಗುದೇ-ಆಸನ ಸ್ಥಾನಕ್ಕೆ, ಪಂಚ-ಐದು ಮೃತ್ತಿಕೆಗಳಂನು, ಪಾದಪಾಣ್ಯೋಃ-ಕಾಲು ಕೈಗಳಿಗೆ, ಕ್ರಮಾತ -ಪರ್ಯಾಯಾಗಿ, ದಶ-ಹತ್ತು ಮೃತ್ತಿಕೆಗಳಂನು, (ಅಂದರೆ ಕೈಗಳಿಗೆ ೧೦ಮೃತ್ತಿಕೆಗಳನ್ನು, ಕಾಲುಗಳಿಗೆ ಹತ್ತುಮೃತ್ತಿಕೆಗಳಂನು, (ಕೃತ್ವಾ-ಮಾಡಿಕೊಂಡು) ಮೃತ್ತಿಕಾಶೌಚಂ-ಮಣ್ಣಿನಿಂದ ಮಾಡಬೇಕಾದ ಶುದ್ಧಿಕಾರ್ಯವನ್ನು, ನಿರ್ವರ್ತ್ಯ-ತೀರಿಸಿ, ಮುಖ-ಮೋರೆಯನ್ನು, ಪ್ರಕ್ಷಾಳನಂ-ತೊಳೆಯುವದರಂನು, ಚರೇತ್-ಮಾಡಬೇಕು ॥ ತಾ ॥ ಮಲನಿವೃತ್ತಿಯಂನು ಮಾಡಿಕೊಂಡು ಗುದಪ್ರಕ್ಷಾಳನಾದಿಗಳಂನು ಮಾಡಿದಬಳಿಕ ಲಿಂಗದಲ್ಲಿ ಒಂದು ಮೃತ್ತಿಕೆಯನ್ನು ಗುದಸ್ಥಾನದಲ್ಲಿ ಐದು ಮೃತ್ತಿಕೆಗಳಂನು, ಕೈಕಾಲುಗಳಿಗೆ ಒಂದೊಂದಕ್ಕೆ ಹತ್ತರಂತೆ ಮೃತ್ತಿಕೆಗಳಂನು ಜಲಸಹಿತವಾಗಿ ಇಟ್ಟುಕೊಂಡು ತೊಳೆಯುತಾ ಈರೀತಿಯಾಗಿ ಮೃತ್ತಿಕಾಶೌಚವಂನು ಮಾಡಿಕೊಂಡು ಆ ಮೇಲೆ ಮುಖವಂನು ತೊಳೆಯಬೇಕು ॥ ॥೧೮॥

ಅರ್ಕಸಂಮಿತೈಃ-ಹನ್ನೆರಡಾದ, ಗಂಡೂಷೈಃ-ಬಾಯಿ ಮುಕ್ಕಳಿಸುವಿಕೆಗಳಿಂದ, ದಂತಶುದ್ಧಿಂ-ಹಲ್ಲಿನ ಶುದ್ಧಿಯಂನು; ಕೃತ್ವಾ-ಮಾಡಿಕೊಂಡು, ಸಾಘಮರ್ಷಣಸೂಕ್ತೈಃ-ಅಘಮರ್ಷಣ ಸೂಕ್ತಗಳಿಂದಕೂಡಿರುವದಾದ, ಮಂತ್ರಜಲೈಃ-ಮಂತ್ರೋದಕಗಳಿಂದ, ಸ್ನಾನಂ-ಸ್ನಾನವಂನು, ಕುರ್ಯಾತ್-ಮಾಡಬೇಕು ॥ ತಾ ॥ ದಂತಕಾಷ್ಠಮುಂತಾದವುಗಳಿಂದ ಹಲ್ಲಂನು ಉಜ್ಜಿಕೊಂಡು, ದಂತಕಾಷ್ಠಾದಿಗಳಂನು ಉಪಯೋಗಿಸಲು ಅನರ್ಹಗಳಾದ ಕಾಲಗಳಲ್ಲಿ, ದಂತಶುದ್ಧಿಗಾಗಿ ೧೨ಗಂಡೂಷಗಳಂನು ನೀರಿನಿಂದಲೇ ಮಾಡಿದವನಾಗಿ ಆಬಳಿಕಮುಖವನ್ನುತೊಳಕೊಂಡು, ಅಘಮರ್ಷಣಸೂಕ್ತ ಮುಂತಾದ ಮಂತ್ರಗಳಿಂದ

ಕ್ತ್ರಕ್ತೈಃ॥೧೯॥ ಧೌತವಸ್ತ್ರಂತತೋಧೃತ್ವಾಗೋಪೀಚಂದನ
ಮೃತ್ಸ್ನಯಾ । ಊರ್ಧ್ವಪುಂಡ್ರಂತತೋಧೃತ್ವಾ ಸಪವಿ
ತ್ರೋದ್ವಿಜೋತ್ತಮಃ॥೨೦॥ ಭೂಶುದ್ಧಿಂ ಭೂತಶುದ್ಧಿಂಚ
ಪಾಪಶೋಧನಮೇವಚ । ಪ್ರಾಣಾದೀನಾಂವಿಲಾಪಂಚಪ್ರ
ತಿಷ್ಠಾಂಚಸಮಾಚರೇತ್॥೨೧॥ ಮಾತೃಕಾದ್ವಯತೋನ್ಯಾ

ಅಭಿಮಂತ್ರಿತವಾದ ನೀರಿನಿಂದ ಸ್ನಾನವನ್ನು ಮಾಡ ಬೇಕು ॥ ೧೯ ॥

ತತಃ-ಆಬಳಿಕ, ಧೌತವಸ್ತ್ರಂ-ಒಗೆದ ಮಡಿಯಾದ ಬಟ್ಟೆಯನ್ನು, ಧೃತ್ವಾ-ಧರಿಸಿ, ಗೋಪೀಚಂದನಮೃತ್ಸ್ನಯಾ-ಗೋಪೀಚಂದನವೆಂಬ ಮಣ್ಣಿನಿಂದ, ಊರ್ಧ್ವಪುಂಡ್ರಂ-ಊರ್ಧ್ವಪುಂಡ್ರವನ್ನು, ಧೃತ್ವಾ-ಧರಿಸಿ, ಸಪವಿತ್ರಃ-ಪರಿಶುದ್ಧತೆಯಿಂದ ಕೂಡಿದವನಾದ, ದ್ವಿಜೋತ್ತಮಃ-ಬ್ರಾಹ್ಮಣಶ್ರೇಷ್ಠನು ॥ ತಾ ॥ ಆಬಳಿಕ ಪರಿಶುದ್ಧವಾಗಿ ಮಡಿಯಾದ ಒಗೆದ ವಸ್ತ್ರವನ್ನು ಧರಿಸಿದವನಾಗಿ, ಗೋಪೀಚಂದನ ಮೃತ್ತಿಕೆಯಿಂದ, ಊರ್ಧ್ವಪುಂಡ್ರವನ್ನು ಧರಿಸಿಪರಿಶುದ್ಧತೆಯಿಂದ ಕೂಡಿದವನಾದ ಬ್ರಾಹ್ಮಣಶ್ರೇಷ್ಠನು॥ ಸಪವಿತ್ರಃ-ಚಕ್ರಧಾರಣೆಯುಳ್ಳವನೆಂದುವೈಷ್ಣವಮತಕ್ಕೆ ಅನುಗುಣವಾದ ಅರ್ಥವು ॥ ॥೨೦॥

ಭೂಶುದ್ಧಿಂ-ಭೂಮಿಯ ಶುದ್ಧಿಯನ್ನು, ಭೂತಶುದ್ಧಿಂ-ತನ್ನ ಪಂಚಭೂತಗಳ ಶುದ್ಧಿಯನ್ನು ಪಾಪಶೋಧನಮೇವಚ ಪಾಪಪುರುಷ ಶೋಧನೆಯನ್ನೂ, ಪ್ರಾಣಾದೀನಾಂ-ಪ್ರಾಣಾದಿಗಳಿಗೆ, ವಿಲಾಪಂ-ಲಯವನ್ನು, ಪ್ರತಿಷ್ಠಾಂ-ಪ್ರಾಣಪ್ರತಿಷ್ಠೆಯನ್ನು, ಸಮಾಚರೇತ್-ಮಾಡಬೇಕು ॥ ತಾ ॥ ಭೂಶುದ್ಧಿಯನ್ನು ಭೂತಶುದ್ಧಿಯನ್ನು, ಪಾಪ ಪುರುಷ ಶೋಧನೆಯನ್ನು; ಪ್ರಾಣಾದಿಗಳಿಗೆ ಲಯವನ್ನು, ಪುನಃ ಪ್ರಾಣಾದಿಗಳಿಗೆ ಪ್ರತಿಷ್ಠೆಯನ್ನು ಮಾಡಬೇಕು॥ಉಪನಯನವಾದದ್ದು ಮೊದಲ್ಗೊಂಡು ಬ್ರಹ್ಮಚರ್ಯದಲ್ಲಿ ಇರುವವನಾದ ಬ್ರಾಹ್ಮಣನು ಪ್ರಾಣಾಯಾಮಾದಿಗಳಿಂದ ಪಾಪಪುರುಷ ಶೋಧನೆಯನ್ನು ಮಾಡಬೇಕಾಗಿರುತ್ತೆ ॥ ಅದು ಇಲ್ಲದೆ ಒಂದೇದಿನದಲ್ಲಿ ಉಪನಯನಾದಿಗಳನ್ನು ಮಾಡುತ್ತಾ ಬಾಲ್ಯದಿಂದ ಬ್ರಹ್ಮಚರ್ಯಹೀನರಾದವರಿಗೆ ಪ್ರಾಣಾಯಾಮ ಸಿದ್ಧಿಯಾಗಲಾರದು ॥ ಪ್ರಾಣಾಯಾಮಸಿದ್ಧಿಯನ್ನು ಪಡೆಯದವನಿಗೆ ಇತರ ತಪೋಸಿದ್ಧಿಗಳಾಗಲಾರವು॥ ಆದ್ದರಿಂದ ಪ್ರಾ

ಸಂಚೆಲಾಜಿನಕುಶೋತ್ತರೆ । ಸ್ಥಿತಿಂಕೃತ್ವಾಭಕ್ತಿಯುತಃ
ಪ್ರಾಣಾಯಾಮಂಸಮಾಚರೇತ್ ॥ ॥೨೦॥

ಣಾಯಾಮವನ್ನು ಬ್ರಹ್ಮಚರ್ಯದಿಂದಲೇ ಕಲಿಯಬೇಕಾಗಿರುವದು ॥ ಪ್ರಾಣಾಯಾಮಸಿದ್ಧಿಯು ಆದಿಯಲ್ಲಿ ತಪಸ್ಸ್ವಾಧ್ಯಾಯೇಶ್ವರ ಪ್ರಣಿಧಾನರೂಪವಾದ ಕ್ರಿಯಾಯೋಗದಿಂದಲೆ ಆಗಬೇಕಾದ್ದರಿಂದ, ಅಂಥಾ ಕ್ರಿಯಾಯೋಗವನ್ನು ಬಾಲ್ಯದಿಂದ ತ್ಯಜಿಸಿದ್ದು, ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಅಗ್ನಿಸೇವೆಯನ್ನು ಉಪನಯನವಾದ ಕಾಲವಾದಿಯಾಗಿ ಬಿಟ್ಟು ಇದ್ದು ಶಾಸ್ತ್ರಾಧ್ಯಯನಮಾಡಿದ ಮಾತ್ರದಿಂದಲೇ ಪ್ರಾಣಾಯಾಮ ಸಿದ್ಧಿಯಾಯಿತೆಂದು ನಟಿಸುವದರಿಂದ ಫಲವೇನೂ ಉಂಟಾಗಲಾರದು, ಮತ್ತು ಪ್ರಾಣಾಯಾಮವು ಅನುಭವೈಕವೇದ್ಯವಾದ್ದರಿಂದ ಇದನ್ನು ಟೀಕು ಟಿಪ್ಪಣಿಗಳಿಂದ ಕೂಡಿರುವ ಯೋಗಸೂತ್ರಭಾಷ್ಯಾದಿಗಳನ್ನು ನೋಡಿದಾಗ್ಯೂ ವ್ರೋದಿದಾಗ್ಯೂ ಬ್ರಹ್ಮಚರ್ಯಸಿದ್ಧಿಯು ಗುರುವನುಗ್ರಹವೂ ಇಲ್ಲದೇ ಸಾಧಾರಣವಾದ ಕ್ರಿಯಾಯೋಗವೇ ಸಿದ್ಧಿಸದು ॥ ಅಂಥಾ ಸಾಮಾನ್ಯವಾದ ಕ್ರಿಯಾಯೋಗವೇ ಲಭಿಸದವನಿಗೆ ಯಮನಿಯಮಆಸನಪ್ರಾಣಾ ಯಾಮಪ್ರತ್ಯಾಹಾರ ಧಾರಣಾಧ್ಯಾನಸಮಾಧಿರೂಪಗಳಾದ ಯೋಗಾಂಗಳಿಲ್ಲದೆ ಯೋಗವು ಲಭಿಸದು॥ ಚಿತ್ತವೃತ್ತಿ ನಿರೋಧರೂಪವಾದ ಯೋಗವು ದ್ರಷ್ಟೃವಿಗೆ ಸ್ವಸ್ವರೂಪಾವಸ್ಥಿತಿ ಫಲಕವಾಗಿರುವದು ॥ ಆದ್ದರಿಂದ ಭೂತಶುದ್ಧಿಪ್ರಾಣಪ್ರತಿಷ್ಠೆಗಳನ್ನು ಮಾಡಬೇಕಾದರೆ ಪ್ರಾಣಾಯಾಮ ಸಿದ್ಧನಾದವನಿಗೆ ಸುಲಭವಾಗಿರುವದು ॥ ಇತರರಿಗೆ ಚಿತ್ರದಬೊಂಬೆಯಂತೆ ನಿಶ್ಚೈತನ್ಯವಾದವಾಗ್ರೂಪವಾಗಿರುವದು ॥ ॥೧೯॥

ಚೆಲಾಜಿನಕುಶೋತ್ತರೆ–ಬಟ್ಟೆಯಾಗಲಿ ಜಿಂಕೆಯ ಚರ್ಮವಾಗಲಿ, ದರ್ಭೆಯಾಗಲಿ–ಇವುಗಳಿಂದ ಮಾಡಲ್ಪಟ್ಟ ಆಸನದಲ್ಲಿ, ಸ್ಥಿತಃ–ಇರುವವನಾಗಿ ಮಾತೃಕಾದ್ವಯತಃ–ಅಂತರ್ಮಾತೃಕೆ–ಬಹಿರ್ಮಾತೃಕೆಗಳೆಂಬ ಎರಡು ಬಗೆಯಾದ ಮಾತೃಕೆಗಳಿಂದ, ನ್ಯಾಸಂ–ನ್ಯಾಸವನ್ನು, ಕೃತ್ವಾ–ಮಾಡಿ, ಭಕ್ತಿಯುತಃ–ಭಕ್ತಿಯುಳ್ಳವನಾಗಿ, ಪ್ರಾಣಾಯಾಮಂ–ಪ್ರಾಣಾಯಾಮವನ್ನು, ಸಮಾಚರೇತ್–ಮಾಡಬೇಕು ॥ ತಾ ॥ ವಸ್ತ್ರ-ಅಜಿನದರ್ಭೆ ಮೊದಲಾದ ಆಸನದಲ್ಲಿ ಕುಳಿತಿರುವನಾಗಿ ಅಂತರ್ಮಾತೃಕಾ–ಬಹಿರ್ಮಾತೃಕಾನ್ಯಾಸವನ್ನು ಮಾಡಿಕೊಂಡು, ಭಕ್ತಿಯುಕ್ತನಾಗಿ ಪ್ರಾಣಾಯಾಮವನ್ನು ಮಾಡ ಬೇಕು॥ ॥೨೦॥

ಸವ್ಯಾಹೃತಿಪ್ರಣವಕಾಃ ಪ್ರಾಣಾಯಾಮಾಶ್ಚ ಷೋಡಶ ।
ಭ್ರೂಣಹತ್ಯಾದಿಪಾಪೇಭ್ಯೋಪುನಾತಿಮನುಜಂನೃಪ ॥೨೩॥
ತತಃಸಂಧ್ಯಾದಿಕಂಕೃತ್ವಾ ಅಗ್ನಿಂಸಂಸೇವ್ಯಭಕ್ತಿತಃ। ಶ್ರೀ
ನಿವಾಸಪರೋಭೂತ್ವಾತನ್ಮಂತ್ರಂ ಪ್ರಜಪೇತ್ಸುಧೀಃ ॥೨೪॥
ಲಕ್ಷ್ಮೀಬೀಜಂಸಮುಚ್ಚಾರ್ಯ್ಯ ಪದ್ಮಾವತ್ಯೈ ತತಃಪರಂ ।

ಸವ್ಯಾಹೃತಿಪ್ರಣವಕಾಃ–ಪ್ರಣವವ್ಯಾಹೃತಿಗಳಿಂದ ಕೂಡಿದ, ಷೋಡಶ–ಹದಿನಾರಾದ, ಪ್ರಾಣಾಯಾಮಾಃ–ಪ್ರಾಣಾಯಾಮಗಳು॥ ನೃಪ–ಜನಕರಾಯನೇ, ಭ್ರೂಣಹತ್ಯಾದಿಪಾಪೇಭ್ಯಃ–ಭ್ರೂಣಹತ್ಯೆ ಮೊದಲಾದ ಪಾಪಗಳಿಂದ, ಮನುಜಂ–ಮನುಷ್ಯನನ್ನು, ಪುನಾತಿ–ಪರಿಶುದ್ಧನನ್ನಾಗಿ ಮಾಡುತ್ತೆ ॥ ತಾ ॥ ವ್ಯಾಹೃತಿಪ್ರಣವಗಳಿಂದ ಕೂಡಿದ ಹದಿನಾರು ಪ್ರಾಣಾಯಾಮಗಳು, ಎಲೈ ಜನಕರಾಯನೇ ಭ್ರೂಣಹತ್ಯಾದಿ ಮಹಾ ಪಾಪಗಳಿಂದ ಮನುಷ್ಯನಂನು ಪರಿಶುದ್ಧನನ್ನಾಗಿ ಮಾಡುತ್ತವೆ ॥೨೩॥

ತತಃ–ಆಬಳಿಕ, ಸಂಧ್ಯಾದಿಕಂ–ಸಂಧ್ಯಾವಂದನೆ ಮುಂತಾದ್ದನ್ನು, ಕೃತ್ವಾ–ಮಾಡಿ, ಭಕ್ತಿತಃ–ಭಕ್ತಿಯಿಂದ, ಅಗ್ನಿಂ–ಬೆಂಕಿಯನ್ನು, ಸಂಸೇವ್ಯ–ಸೇವಿಸಿ, (ಅಂದರೆ ಔಪಾಸನೆಯನ್ನು ಮಾಡಿ,) (ಬ್ರಹ್ಮಚಾರಿಯಾಗಿದ್ದರೆ ಅಗ್ನಿಕಾರ್ಯವನ್ನು ಮಾಡಿ,) ಶ್ರೀನಿವಾಸಪರಃ–ಶ್ರೀನಿವಾಸಮೂರ್ತಿಯ ಧ್ಯಾನದಲ್ಲಿ ಆಸಕ್ತನಾಗಿರುವವನು, ಭೂತ್ವಾ–ಆಗಿ, ಸುಧೀಃ–ಒಳ್ಳೇಜ್ಞಾನವುಳ್ಳವನಾಗಿ, ತನ್ಮಂತ್ರಂ–ಆ ಶ್ರೀನಿವಾಸನಮಂತ್ರವನ್ನು ಪ್ರಜಪೇತ್–ಜಪಿಸಬೇಕು ॥ ತಾ ॥ ಆಬಳಿಕ ಬುದ್ಧಿಶಾಲಿಯಾದವನು; ಸಂಧ್ಯಾವಂದನಾದಿ ಕೆಲಸಗಳನ್ನು ಮಾಡಿ ಅಗ್ನಿಯನ್ನು ಸೇವಿಸಿ ಭಕ್ತಿಯುತನಾಗಿ, ಶ್ರೀನಿವಾಸನನ್ನು ಧ್ಯಾನಿಸುತ್ತಾ, ಶ್ರೀನಿವಾಸಮಂತ್ರವನ್ನು ಜಪಿಸುವವನಾಗಬೇಕು ॥ ॥೨೪॥

ಲಕ್ಷ್ಮೀಬೀಜಂ–ಶ್ರೀಬೀಜವನ್ನು, ಸಮುಚ್ಚಾರ್ಯ–ಹೇಳಿ, ತತಃಪರಂ–ಆಬಳಿಕ, ಪದ್ಮಾವತ್ಯೈ–ಪದ್ಮಾವತ್ಯೈ ಎನ್ನುವವಾದ ಪದಂ–ಪದವನ್ನು, ತತಃ–ಆಬಳಿಕ, ನಮಃಪದಂ–ನಮಃಎಂನುವ ಪದವಂನು, ಉಚ್ಚಾರ್ಯ–ಹೇಳಿ, ವಹ್ನಿಜಾಯಾಂ–ಸ್ವಾಹಾಪದವಂನು, ಉಚ್ಚರೇತ್–ಹೇಳಬೇಕು ॥ ಹೀಗೆ, ಜ್ಞೇಯಂ-ಪದ್ಮಾಪತೀ ಮಂತ್ರವಂನು ತಿಳಿಯ

ನಮಃಪದಂತತೋಜಪ್ಲ್ವಾಯಂ ವಹ್ನಿಜಾಯಾಂ ತತೋಚ್ಚ-
ರೇತ್॥೨೫॥ ನವಾಕ್ಷರೋಯಂಮಂತ್ರಸ್ಸ್ಯಾತ್ಸರ್ವಾಭೀಷ್ಟ
ಫಲಪ್ರದಃ। ತ್ರಿಭಾಗೇನೈವಮಂತ್ರೇಣಷಡಂಗನ್ಯಾಸಮಾಚ
ರೇತ್ ॥೨೬॥ ಓಂನಮೋಭಗವತೇಬ್ರೂಯಾದ್ವೇಂಕಟೇಶಾಯವಿ
ಷ್ಣವೇ । ಸ್ವಾಹೇತಿಶ್ರೀನಿವಾಸಸ್ಯ ಮಂತ್ರಃಷೋಡಶವರ್ಣ
ಕಃ ।ಸಕಲೇಷ್ಟಾರ್ಥದಸ್ಸರ್ವದೇವೈಶ್ಚಾಪಿಸಿಷೇವಿತಃ॥॥೨೭॥

ತಕ್ಕದ್ದು ॥ ತಾ ॥ ಮೊದಲು ಲಕ್ಷ್ಮೀಬೀಜವನ್ನು ಹೇಳಿ ಆಬಳಿಕ ಪ
ದ್ಮಾವತ್ಯೈ ಯೆಂಬುವದಾದ ಚತುರ್ಥ್ಯಂತ ಪದವನ್ನು ಉಚ್ಚರಿಸಿ, ಆಬ
ಳಿಕ ನಮಃಪದವನ್ನು ಸ್ವಾಹಾಶಬ್ದವನ್ನು ಉಚ್ಚರಿಸಬೇಕು ॥ ಇದೇ
ಪದ್ಮಾವತೀ ಮಂತ್ರವೆಂದು ತಿಳಿಯತಕ್ಕದ್ದು ॥ ॥೨೫॥

ಅಯಂ-ಈನವಾಕ್ಷರಃ-ಒಂಭತ್ತುವರ್ಣಸಂಖ್ಯೆಯುಳ್ಳ, ಮಂತ್ರಃ-ಪ
ದ್ಮಾವತೀ ಮಂತ್ರವು, ಸರ್ವ-ಸಮಸ್ತವಾದ, ಅಭೀಷ್ಟ-ಇಷ್ಟವಾದ,
ಫಲ-ಪ್ರಯೋಜನಗಳನ್ನು, ಪ್ರದಃ-ಕೊಡುವಂಥಾದ್ದು, ಸ್ಯಾತ್-ಆ
ಗುತ್ತದೆ ॥ ತ್ರಿಭಾಗೇನ-ಮೂರುಭಾಗವಾಗಿ ಮಾಡಲ್ಪಟ್ಟ, ಮಂತ್ರೇಣೈವ-
ಮಂತ್ರದಿಂದಲೆ, ಷಡಂಗನ್ಯಾಸಂ-ಷಡಂಗನ್ಯಾಸವನ್ನು, ಆಚರೇತ್-
ಆಚರಿಸಬೇಕು ॥ ತಾ ॥ ಒಂಭತ್ತುಅಕ್ಷರ ಸಂಕೇತಗಳುಳ್ಳ ಪದ್ಮಾವತೀ
ಮಂತ್ರವು ಸಮಸ್ತ ಇಷ್ಟಾರ್ಥಗಳನ್ನು ಕೊಡುವಂಥಾದ್ದಾಗಿರುವದು
ಈ ಮಂತ್ರವನ್ನು ಮೂರುಭಾಗವಾಗಿ ಮಾಡಿ ಷಡಂಗನ್ಯಾಸವನ್ನು
ಮಾಡಬೇಕು ॥ ॥ ೨೬ ॥

ಓಂನಮೋಭಗವತೇವೇಂಕಟೇಶಾಯ ವಿಷ್ಣವೇಸ್ವಾಹಾ॥ಇತಿ ಎಂಬದಾಗಿ
ಬ್ರೂಯಾತ್-ಹೇಳ ಬೇಕು. ಇದು॥ ಶ್ರೀನಿವಾಸಸ್ಯ-ಶ್ರೀನಿವಾಸನ,
ಷೋಡಶವರ್ಣಕಃ-ಹದಿನಾರು ವರ್ಣಗಳುಳ್ಳ, ಮಂತ್ರಃ-ಮಂತ್ರವು, ಸ
ಕಲ-ಸಮಸ್ತಗಳಾದ, ಇಷ್ಟಾರ್ಥ-ಕೋರಿಕೆಗಳನ್ನು, ದಃ-ಕೊಡುತ್ತ
ದೆ, ಸರ್ವ ದೇವೈಶ್ಚಾಪಿ-ಸಮಸ್ತ ದೇವತೆಗಳಿಂದಲೂ, ಸಿಷೇವಿತಃ-ಸೇವಿ
ಸಲ್ಪಟ್ಟದ್ದು॥ ತಾ॥ ಹದಿನಾರು ಅಕ್ಷರಗಳುಳ್ಳ ಶ್ರೀನಿವಾಸ ಮಂತ್ರವು-
ಸಮಸ್ತ ಇಷ್ಟಾರ್ಥಗಳನ್ನು ಕೊಡುವಂಥಾಗಿಯೂ, ಸಮಸ್ತ ದೇವತೆ
ಗಳಿಂದ ಸೇವಿಸಲ್ಪಟ್ಟದ್ದಾಗಿಯೂ ಇರುವದು॥ ॥೨೭॥

ಮಂತ್ರಯೋರುಭಯೋಶ್ಚಾಪಿರುಷಿರ್ವೈಖಾನಸೋಮತಃ ।
ಗಾಯತ್ರೀಛಂದಇತ್ಯುಕ್ತಂದೇವತೇಚರಮಾಹರೀ ॥ ಸಕಲೇ
ಷ್ಟಾರ್ಥಸಂಸಿದ್ಧ್ಯೈವಿನಿಯೋಗಉದಾಹೃತಃ ॥ ೨೪ ॥ ಕೃತೇ
ಲಕ್ಷಂಪುನಶ್ಚರ್ಯಾತ್ರೇತಾಯಾಂತು ದ್ವಿಲಕ್ಷಕಂ । ದ್ವಾಪರೇ
ತುತ್ರಿಲಕ್ಷಂಸ್ಯಾಚ್ಚತುರ್ಲಕ್ಷಂ ಕಲೌಜಪೇತ್ ॥ ೨೫ ॥
ಕೋಟಿಸಂಖ್ಯಾಜಪೈನ್ಯೈವಮೃತೋಭ್ರಾತಾಕುಶಧ್ವಜಃ । ಶ್ರೀ

ಉಭಯೋಃ-ಎರಡಾದ, ಮಂತ್ರಯೋಃ-ಪದ್ಮಾವತೀ ವೆಂಕಟೇಶ್ವರ ಮಂತ್ರಗಳಿಗೆ, ರುಷಿಃ-ಋಷಿಯು, ವೈಖಾನಸಃ-ವೈಖಾನಸ ರುಷಿಯೆಂಬದಾಗಿ, ಮತಃ-ಸರಿಯಾದದ್ದು, ಗಾಯತ್ರೀ-ಗಾಯತ್ರಿಯೇ, ಛಂದಃ-ಛಂದಸ್ಸು, ರಮಾಹರೀ-ಲಕ್ಷ್ಮೀ ವೆಂಕಟೇಶ್ವರರೇ, ದೇವತೆ-ದೇವತೆಗಳು, ಸಕಲ-ಸಮಸ್ತಗಳಾದ, ಇಷ್ಟಾರ್ಥ-ಕೋರಿಕೆಗಳ, ಸಂಸಿದ್ಧ್ಯೈ-ಆಗುವಿಕೆಗಾಗಿ, ವಿನಿಯೋಗಃ-ವಿನಿಯೋಗವು, ಉದಾಹೃತಃ-ಹೇಳಲ್ಪಟ್ಟಿತು॥ ತಾ॥ ಈ ಎರಡು ಮಂತ್ರಗಳಿಗೂ ಲಕ್ಷ್ಮೀ ವೆಂಕಟೇಶ್ವರರೇ ದೇವತೆಗಳು, ಗಾಯತ್ರಿಯೇ ಛಂದಸ್ಸು, ಸಮಸ್ತ ಅಭಿಷ್ಟಸಿದ್ಧಿಯೇ ವಿನಿಯೋಗವಾಗಿರುವದು॥ ॥೨೪॥

ಕೃತೇ-ಕೃತಯುಗದಲ್ಲಿ, ಲಕ್ಷಂ-ಲಕ್ಷ ಸಂಖ್ಯಾಕವಾಗಿ ಪುನಶ್ಚರ್ಯಾ-ಜಪವು, ತ್ರೇತಾಯಾಂ-ತ್ರೇತಾಯುಗದಲ್ಲಿ, ದ್ವಿಲಕ್ಷಂ-ಎರಡು ಲಕ್ಷ ಜಪವು, ದ್ವಾಪರೆ-ದ್ವಾಪರ ಯುಗದಲ್ಲಿ, ತ್ರಿಲಕ್ಷಂ-ಮೂರು ಲಕ್ಷ ಜಪವು ಕಲೌ-ಕಲಿಯುಗದಲ್ಲಿ, ಚತುರ್ಲಕ್ಷಂ-ನಾಲ್ಕು ಲಕ್ಷವನ್ನು, ಜಪೇತ್-ಜಪ ಮಾಡ ಬೇಕು॥ ತಾ॥ ಕೃತಯುಗದಲ್ಲಿ ಈ ವೆಂಕಟೇಶ್ವರ ಮಂತ್ರವನ್ನು ೧ ಲಕ್ಷ ಜಪ ಮಾಡ ಬೇಕು, ತ್ರೇತಾಯುಗದಲ್ಲಿ ೨ ಲಕ್ಷ ಜಪವನ್ನು ಮಾಡ ಬೇಕು. ದ್ವಾಪರದಲ್ಲಿ ೩ ಲಕ್ಷ ಜಪವನ್ನು ಮಾಡ ಬೇ ಕಲಿಯುಗದಲ್ಲಿ ೪ ಲಕ್ಷ ಜಪವನ್ನು ಮಾಡ ಬೇಕು ॥ ॥೨೫॥

ಕೋಟಿ ಸಂಖ್ಯಾಜಪೈನ್ಯೈವ-ಕೋಟಿ ಸಂಖ್ಯಾಕವಾದ ಜಪದಿಂದ, ಭ್ರಾತಾ-ತಮ್ಮನಾದ, ಮೃತಃ-ಸತ್ತವನಾದ. ಕುಶಧ್ವಜಃ-ಕುಶಕೇತುವು, ಶ್ರೀನಿವಾಸ ದಯಾಯೋಗಾತ್-ಶ್ರೀನಿವಾಸ ದೇವರ ದಯೆ ಉಂಟಾಗುವದ್ದರಿಂದ ಪುನಃ ತಿರಿಗಿ ಆಗ ವಿಷ್ಯತಿ-ಬರುತ್ತಲಿದ್ದಾನೆ॥ತಾ॥ (ಜನಕರಾಯನೇ) ನೀನು ಶ್ರೀನಿವಾಸ ಮಂತ್ರವನ್ನು ಕೋಟಿ

ನಿವಾಸದಯೋಗಾತ್ಪುನರೇವಾಗಮಿಷ್ಯತಿ ॥ ೩೦ ॥ ಅಥ
ವಾನ್ಯೈ ವಿಷ್ಣುಮಂತ್ರೈಃ ಜಪ್ಯೈರ್ವೆಂಕಟಪರ್ವತೇ । ತೇನಸ
ರ್ವಗತೋವಿಷ್ಣುಃತವೇಷ್ಟಾರ್ಥಂದದಾತಿಸಃ॥೩೧॥ ತಸ್ಮಾ
ದ್ರಾಜನ್ತ್ವಮದ್ಯೈವಯಾಹಿವೆಂಕಟಪರ್ವತಂ । ಶತಾ
ನಂದೇನೈವಮುಕ್ತೋ ಜನಕಃಶ್ರದ್ಧಯಾನ್ವಿತಃ ॥ ಶತಾನಂ

ಸಂಖ್ಯೆಯಾಗಿ ಜಪವನ್ನು ಮಾಡಿದ್ದೇ ಆದರೆ ಮೃತನಾದ ನಿನ್ನ ತಮ್ಮ
ನಾದ ಕುಶಧ್ವಜನು ಶ್ರೀನಿವಾಸನ ಕೃಪೆಯಿಂದ ಬದುಕಿ ಬರುತ್ತಲಿ
ದ್ದಾನೆ॥ ॥೩೦॥

ಅಥವಾ-ಹಾಗೆ ಇಲ್ಲದೇ ಇದ್ದರೆ, ವೆಂಕಟಪರ್ವತೇ-ವೆಂಕಟಾದ್ರಿಯಲ್ಲಿ, ಅನ್ಯೈ-ಇತರಗಳಾದ, ವಿಷ್ಣುಮಂತ್ರಾಃ-ನಾರಸಿಂಹ ರಾಮ ಕೃಷ್ಣಾದಿ ಮಂತ್ರಗಳು, ಜಪ್ಯೈಃ-ಜಪ ಮಾಡ ತಕ್ಕವುಗಳು, ತೇನ-ವೆಂಕಟಾದ್ರಿಯಲ್ಲಿ ವಿಷ್ಣುಮಂತ್ರ ಜಪದಿಂದ, ಸರ್ವಗತಃ-ಸರ್ವಾಂತರ್ಯಾಮಿಯಾದ, ಸಃ-ಆ, ವಿಷ್ಣುಃ-ಶ್ರೀನಿವಾಸನು, ತವ-ನಿನಗೆ, ಇಷ್ಟಾರ್ಥಂ— ಇಷ್ಟವಾದ ಕೋರಿಕೆಯನ್ನು, ದದಾತಿ—ಕೊಡುತ್ತಲಿದ್ದಾನೆ ॥ ತಾ ॥— ಹಾಗೆ ಇಲ್ಲದೆ ಇದ್ದರೆ ಇತರ ವಿಷ್ಣು ದೇವತಾಕಗಳಾದ ಮಂತ್ರಗಳ ನ್ನಾದರೂ ಜಪಿಸ ಬೇಕು. ಅದರಿಂದ ಸರ್ವ ವ್ಯಾಪಕನಾಗಿಯೂ, ಸರ್ವಾಂತರ್ಯಾಮಿಯಾಗಿಯೂ ಇರುವ ಆ ಶ್ರೀನಿವಾಸನು ನಿನ್ನ ಅ ಭೀಷ್ಟವನ್ನು ಮಾಡಿ ಕೊಡುತ್ತಲಿದ್ದಾನೆ॥ ॥೩೧॥

ರಾಜನ್-ಜನಕರಾಯನೇ. ತ್ವಂ-ನೀನು, ಅದ್ಯೈವ-ಈಗಲೇ, ವೆಂಕಟಪರ್ವತಂ-ವೆಂಕಟಾದ್ರಿಯನ್ನು ಕುರಿತು, ಯಾಹಿ-ಹೋಗುವವನಾಗು, ಶತಾನಂದೇನ-ಶತಾನಂದ ಮುನಿಯಿಂದ, ಏವಂ-ಈ ರೀತಿಯಾಗಿ, ಉಕ್ತಃ-ಹೇಳಲ್ಪಟ್ಟವನಾಗಿ, ಜನಕಃ-ಜನಕರಾಯನು, ಶ್ರದ್ಧಯಾ-ಆಸ್ತಿಕ್ಯ ಬುದ್ಧಿಯಿಂದ, ಅನ್ವಿತಃ-ಕೂಡಿದವನಾಗಿ, ಶತಾನಂದೇನ-ಶತಾನಂದನೆಂಬ, ಮುನಿನಾ-ಋಷಿಯ ಸಂಗಡ, ತದಾ-ಆಗ, ವೆಂಕಟಾದ್ರಿಂ-ವೆಂಕಟಾಚಲವಂನು ಕುರಿತು, ಯಯೌ-ಹೊರಟು ಹೋದನು॥ ತಾ॥ ಆದಕಾರಣದಿಂದ ಎಲೈ ಜನಕರಾಯನೇ ನೀನು ವೆಂಕಟಪರ್ವತವನ್ನು ಕುರಿತು, ಹೋಗುವವನಾಗು, ಶತಾನಂದ ಮುನಿಯಿಂದ ಈ ರೀತಿಯಾಗಿ ಹೇಳಲ್ಪಟ್ಟವನಾದ ಜನಕರಾಯನು ನಂಬಿಕೆಯುಳ್ಳವ

ದೇನ ಮುನಿನಾ ವೇಂಕಟಾದ್ರಿಂತದಾಯಯೌ ॥ ೩೦ ॥
ಸ್ವಾಮಿಪುಷ್ಕರಣೀತೀರ್ಥೆಸ್ನಾನಂಕೃತ್ವಾಸದಾನೃಪಃ ।
ಪತ್ರಮೂಲಫಲಾಹಾರಃತಪೋತೀವ್ರಮತಿಷ್ಠತ ॥೩೩॥ ತ
ಸ್ಯೈವಂತಪ್ಯಮಾನಸ್ಯ ಭಗವಾನ್ ಭಕ್ತವತ್ಸಲಃ ॥ ನೀಲ
ಮೇಘನಿಭಃ ಶ್ರೀಮಾನ್ ಪ್ರಸನ್ನಸ್ಸಮಭೂದ್ಧರಿಃ ॥ ॥೩೪॥
ಕಿಮರ್ಥಂತಪ್ಯತೇರಾಜನ್ ಬ್ರೂಹಿಯತ್ತೇವಿವಕ್ಷಿತಂ । ತ

ನಾಗಿ ಆಗ ಶತಾನಂದ ಮುನಿಯೊಡನೆ ವೆಂಕಟಪರ್ವತವಂನು ಕುರಿತು ಹೊರಟು ಹೋದನು ॥ ॥೩೦॥

ನೃಪಃ—ಜನಕರಾಯನು, ಸದಾ—ಯಾವಾಗಲೂ, ಸ್ವಾಮಿಪುಷ್ಕರಣೀತೀರ್ಥೆ—ಸ್ವಾಮಿ ಪುಷ್ಕರಣೀತೀರ್ಥದಲ್ಲಿ, ಸ್ನಾನಂ—ಸ್ನಾನವಂನು, ಕೃತ್ವಾ—ಮಾಡಿ, ಪತ್ರ—ಎಲೆಗಳು, ಮೂಲ—ಗಡ್ಡೆಗಳು, ಫಲ—ಹಣ್ಣುಗಳೇ, ಆಹಾರಃ—ಅಶನವಾಗಿ ಉಳ್ಳವನಾಗಿ, ತೀವ್ರಂ—ಕಠಿನವಾದ, ತಪಃ-ತಪವಂನು, ಅತಿಷ್ಠತ—ನಡಿಸುತ್ತಿದ್ದನು ॥ ॥೩೩॥

ಏವಂ—ಈ ರೀತಿಯಾಗಿ, ತಪ್ಯಮಾನಸ್ಯ—ತಪಸ್ಸಂನು ಮಾಡುತ್ತಿರುವವನಾದ, ತಸ್ಯ—ಆ ಜನಕರಾಯನಿಗೆ, ಭಕ್ತವತ್ಸಲಃ-ಭಕ್ತರಲ್ಲಿ ವಿಶ್ವಾಸವುಳ್ಳವನಾದ, ಭಗವಾನ್—ಪೂಜ್ಯನಾದ, ನೀಲಮೇಘನಿಭಃ—ನೀಲವಾದ ಮೇಘಕ್ಕೆ ಸಮವಾದ ಕಾಂತಿಯುಳ್ಳವನಾದ, ಶ್ರೀಮಾನ್-ಸಂಪದ್ಯುಕ್ತನಾದ, ಹರಿಃ—ವಿಷ್ಣುವು, ಪ್ರಪಂನಃ—ಪ್ರಸಂನನು, ಸಮಭೂತ್—ಆದನು॥ ತಾ॥ ಜನಕರಾಯನು ಸ್ವಾಮಿ ಪುಷ್ಕರಣೀ ತೀರ್ಥದಲ್ಲಿ ನಿತ್ಯವೂ ಸ್ನಾನ ಮಾಡುತ್ತಿರುವವನಾಗಿ, ಎಲೆ ಗಡ್ಡೆ ಗೆಣಸು ಫಲಗಳೇ ಆಹಾರವುಳ್ಳವನಾಗಿ ತೀವ್ರವಾದ ತಪಸ್ಸಂನು ಮಾಡುತ್ತಿದ್ದನು. ಈ ರೀತಿಯಾಗಿ ತೀವ್ರವಾದ ತಪಸ್ಸುಳ್ಳವನಾದ ಜನಕರಾಯನಿಗೆ ಭಕ್ತ ವಿಶ್ವಾಸವುಳ್ಳವನಾದ ಶ್ರೀಮಂತನಾದ ಮತ್ತು ಪೂಜ್ಯನಾದ ವಿಷ್ಣುವು ಪ್ರಸಂನನಾದನು ॥ ॥೩೪॥

ರಾಜನ್—ಜನಕರಾಯನೇ, ಕಿಮರ್ಥಂ—ಯಾತಕ್ಕೆ, ತಪ್ಯತೇ—ತಪಸ್ಸು ಮಾಡಲ್ಪಡುತ್ತೆ, ತೇ- ನಿಂನಿಂದ, ವಿವಕ್ಷಿತಂ—ಕೋರಲ್ಪಟ್ಟದ್ದು, ಕಿಂ—ಏನು, ಆಖ್ಯಾಹಿ-ಹೇಳು, ದೇವ-ದೇವತೆಗಳಿಂದಲೂ, ದಾನವೈಃ—ರಾಕ್ಷಸರಿಂದಲೂ, ಅಸಾಧ್ಯಂ—ಮಾಡಲಶಕ್ಯವಾಗಿದ್ದ, ತತ್—ಆ ಕೆಲಸವಂ

ದಾಖ್ಯಾಹಿಕರಿಷ್ಯಾಮಿ ಅಸಾಧ್ಯಂದೇವದಾನವೈಃ ॥ ೩೫ ॥
ಏವಮುಕ್ತೋ ಭಗವತಾಜನಕೋ ವಾಕ್ಯಮಬ್ರವೀತ್॥೩೬॥
ಜನಕಉವಾಚ ॥ ಸ್ವಾಮಿನ್‌ದಯಾನಿಧೇಶ್ರೀಶದರ್ಶನಾತ್ತೇ
ಸುಖೀಹ್ಯಹಂ । ಮಮಭ್ರಾತಾಗತಸ್ಸ್ವರ್ಗಂಕುಶಕೇತು
ರ್ಮಹಾಬಲಃ ॥೩೭॥ ತಸ್ಯಪುತ್ರ್ಯಶ್ಚಮತ್ಪುತ್ರೀಸೀರಾ
ಮುಖಸಮುದ್ಭವಾ । ವಿವಾಹಹೀನಾಹ್ಯಭವನ್‌ತೇಷಾಂ

ನು, ಕರಿಷ್ಯಾಮಿ-ಮಾಡುತ್ತೇನೆ॥ ತಾ॥ ಎಲೈ ಜನಕರಾಯನೇ ಯಾತಕ್ಕೆ ನೀನು ತೀವ್ರವಾದ ತಪಸ್ಸಂನು ಮಾಡುತ್ತೀ. ನಿನಗೆ ಬೇಕಾದದ್ದೇನು, ಅದಂನು ಹೇಳು॥ ದೇವತೆಗಳಿಂದ ಮತ್ತು ರಾಕ್ಷಸರಿಂದಲೂ ಅಸಾಧ್ಯವಾಗಿದ್ದಾದ ಆ ಕೆಲಸವಂನು ನಾನುಮಾಡಿ ಕೊಡುತ್ತೇನೆ ॥೩೫॥

ಏವಂ-ಈ ರೀತಿಯಾಗಿ, ಭಗವತಾ-ಶ್ರೀನಿವಾಸನಿಂದ,ಉಕ್ತಃ-ಹೇಳಲ್ಪಟ್ಟವನಾಗಿ, ಜನಕಃ-ಜನಕರಾಯನು, ವಾಕ್ಯಂ-ಮಾತಂನು, ಅಬ್ರವೀತ್-ಹೇಳಿದನು॥ ತಾ॥ಈ ರೀತಿಯಾಗಿ ಶ್ರೀನಿವಾಸನಿಂದ ಹೇಳಲ್ಪಟ್ಟವನಾಗಿಜನಕರಾಯನುಒಂದುಮಾತಂನುಹೇಳಿದವನಾದನು॥೩೬॥

ಜನಕರಾಯನು ಹೇಳುತ್ತಲಿದ್ದಾನೆ॥ ದಯಾನಿಧೇ-ದಯಾಶಾಲಿಯಾದ, ಸ್ವಾಮಿನ್-ನಮ್ಮಗಳಿಗೆ ನಿಯಾಮಕನಾದ, ಶ್ರೀಶ-ಲಕ್ಷ್ಮೀ ಪತಿಯಾದ ಶ್ರೀನಿವಾಸನೆ, ಅಹಂ-ನಾನು, ತೇ-ನಿಂನ, ದರ್ಶನಾತ್-ದರ್ಶನದಿಂದ, ಸುಖೀ-ಸುಖವುಳ್ಳವನಾದೆನು, ಮಮ-ನನಗೆ, ಭ್ರಾತಾ-ತಮ್ಮನಾದ, ಮಹಾಬಲಃ-ಅಧಿಕ ಬಲಶಾಲಿಯಾದ, ಕುಶಕೇತುಃ-ಕುಶಧ್ವಜನು, ಸ್ವರ್ಗಂ-ಇಂದ್ರಲೋಕವಂನು ಕುರಿತು; ಗತಃ-ಹೋದನು ॥ ತಾ ॥ ದಯಾಳುವಾಗಿಯೂ ನಂಮಗಳಿಗೆ ಸ್ವಾಮಿಯಾಗಿಯೂ ಲಕ್ಷ್ಮೀಪತಿಯಾಗಿಯೂ ಇರುವ ಶ್ರೀನಿವಾಸನೆ ನಿಂನದರ್ಶನದಿಂದನು ಸುಖವುಳ್ಳವನಾದೆನು॥ ಅತಿ ಬಲಶಾಲಿಯಾದ ನಂನ ತಂಮನಾದ ಕುಶಧ್ವಜನು ಸ್ವರ್ಗಲೋಕವಂನು ಕುರಿತು ಹೋದನು ॥ ॥೩೭॥

ತಸ್ಯ-ಆಕುಶಧ್ವಜನಿಗೆ, ಪುತ್ರ್ಯಶ್ಚ-ಮೂರುಮಂದಿ ಹೆಣ್ಣುಮಕ್ಕಳು ಸೀರಾ-ನೇಗಲಿನ, ಮುಖ-ಮುಖದಿಂದ, ಸಮುದ್ಭವಾ-ಹುಟ್ಟಿದವಳಾದ, ಸೀತಾ-ಸೀತೆಯೆಂಬ ಹೆಸರುಳ್ಳ ಮತ್ಪುತ್ರೀ-ನಂನಮಗಳು, ವಿವಾಹ

ವೈವಾಹಿಕೋತ್ಸವಃ ॥೩೪॥ ಏಕರಾಜ್ಞಃಕುಮಾರಾಣಾಂಭ
ವಿತೇತಿಮಮಾಶಯಃ । ಸೀತಾಲಕ್ಷ್ಮೀತಿಮುನಿಭಿಃಕಥಿತೊ
ಸ್ಮಿಸಭಾಂತರೆ ॥೩೯॥ ಇತಿಸಾವೈಷ್ಣವೀದೇವಿವಿಷ್ಣೋರ್ದೇ
ಯೇತಿಮೆಮತಿಃ । ಜಾಮಾತಾಮೆಕಥಂಭೂಯಾದ್ವಿಷ್ಣು
ಸ್ತ್ವಂಪಾಪಿನೊಮಮ ॥೪೦॥ ಇತಿತಸ್ಯವಚಃಶ್ರುತ್ವಾಶ್ರೀ

ಹೀನಾಃ_ಈ ಮೂರುಮಂದಿಯು ಮದುವೆಯಿಲ್ಲದವರು ಅಭರ್ವ_ಆಗಿ
ದ್ದಾರೆ, ತೇಷಾಂ_ಅವರುಗಳಿಗೆ, ವೈವಾಹಿಕೋತ್ಸವಃ_ವಿವಾಹೊತ್ಸವವು
॥ ತಾ ॥ ಆ ಕುಶಧ್ವಜನಿಗೆ ಮಕ್ಕಳಾದ ಮೂರುಮಂದಿ ಹೆಂಣುಹುಡಿಗಿ
ಯರು, ನನಿಗೆ ನೇಗಿಲಿನಿಂದ ಭೂಮಿಯನ್ನು ಉಳಿಸುವ ಕಾಲದಲ್ಲಿ ಶಿಕ್ಕಿ
ದ ಸೀತೆಯೆಂಬ ಮಗಳು, ಈ ನಾಲ್ಕು ಮಂದಿಯೂ ಮದಿವೆ ಇಲ್ಲದೆ ಇ
ರುತ್ತಿದ್ದಾರೆ, ಅವರುಗಳಿಗೆ ವಿವಾಹೋತ್ಸವವು॥ ॥೩೪॥
ಏಕರಾಜ್ಞಃ_ಒಬ್ಬನಾದ ಧೊರೆಗೆ, ಕುಮಾರಾಣಾಂ-ಪುತ್ರರಾದವ
ರಿಗೆ, ಭವಿತಾ_ಆಗತಕ್ಕದ್ದು, ಇತಿ_ಎಂಬದಾಗಿ, ಮಮ_ನನ್ನ, ಆಶಯಃ
ಅಭಿಪ್ರಾಯವು ॥ ಸೀತಾ_ಸೀತೆಯು, ಲಕ್ಷ್ಮೀತಿ-ಲಕ್ಷ್ಮೀದೇವಿ ಎಂಬ
ದಾಗಿ; ಸಭಾಂತರೆ_ಸಭೆಯ ನಡುವೆ,(ಮುನಿಭಿಃ-ರುಷಿಗಳಿಂದ,) ಕಥಿತಃ
ಹೇಳಲ್ಪಟ್ಟವನು, ಅಸ್ಮಿ_ಆಗಿದ್ದೇನೆ॥ ತಾ ॥ಒಬ್ಬ ಧೊರೆಗೆ ನಾಲ್ಕುಮಂ
ದಿ ಮಕ್ಕಳಾಗಿ ಹುಟ್ಟಿರುವವರಾದಹುಡುಗರಿಗೆ ಈನಾಲ್ಕುಮಂದಿ ಕನ್ಯೆ
ಯರನ್ನು ಕೊಡಬೇಕೆಂದು ಯೋಚಿಸಿದ್ದೇನೆ,ಮತ್ತು ಸಭೆಯೊಳಗೆ ರು
ಷಿಗಳು ಸೀತೆಯು ಲಕ್ಷ್ಮಿಯ ಅವತಾರರೂಪಳೆಂದು ಹೇಳಿಪ್ಪಿದ್ದರೆ॥೩೯॥
ಸಾ_ಆ,ವೈಷ್ಣವೀ_ವಿಷ್ಣುಸಬಂಧಳಾದ, ದೇವೀ_ಸೀತಾದೇವಿಯು,
ವಿಷ್ಣೋಃ_ವಿಷ್ಣುವಿಗೆ, ದೇಯೇತಿ—ಕೊಡಬೇಕೆಂಬದಾಗಿ, ಮೆ_ನನ್ನ,
ಮತಿಃ-ಬುದ್ಧಿಯು, (ಜಾತಾ_ಹುಟ್ಟಿರುತ್ತೆ,) ಪಾಪಿನಃ_ಪಾಪವುಳ್ಳವ
ನಾದ ಮೆ_ನನಿಗೆ, ವಿಷ್ಣುಃ-ವಿಷ್ಣುವಾದ, ತ್ವಂ_ನೀನು, ಜಾಮಾತಾ_
ಅಳಿಯನು, ಕಥಂಭೂಯಾತ್_ಹ್ಯಾಗೆ ಆದಿಯೋ ॥ ತಾ ॥ ಆದ್ದರಿಂದ
ವೈಷ್ಣವಿಯಾದ ಸೀತೆಯಂನು ವಿಷ್ಣುವಿಗೆ ಕೊಡಬೇಕೆಂದು ನನ್ನ ಅ
ಭಿಪ್ರಾಯ ವಿರುವದು ॥ ಪಾಪಿಷ್ಠನಾದ ನನಿಗೆ ವ್ಯಾಪಕನಾದ ವಿಷ್ಣುವು
ಹ್ಯಾಗೆ ಅಳಿಯನಾದಾನು ॥ ॥೪೦॥

ನಿವಾಸೋಬ್ರವೀದ್ವಚಃ । ಶೃಣುರಾಜನ್ಪ್ರವಕ್ಷ್ಯಾಮಿರಹ
ಸ್ಯಂವೇದಗೋಚರಂ ॥೪೧॥ ಕೃತೇನಾರಾಯಣಶ್ಶುಕ್ಲಃತ್ರೇತಾ
ಯಾಂರಕ್ತವರ್ಣಕಃ। ದ್ವಾಪರೇಪೀತವರ್ಣಸ್ತುಕಲೌತು
ಕೃಷ್ಣತಾಂವ್ರಜೇತ್ ॥೪೨॥ ಭೂಮೇರ್ಭಾರಾಪಹಾರಾಯ
ಭಕ್ತಾನಾಂಪಾಲನಾಯಚ । ಪೂರ್ಣಾರ್ಧಾಂಶಾದಿಭೇದೇನಅ
ವತಾರಂಕರೋಮ್ಯಹಂ ॥ ೪೩ ॥ ತ್ರೇತಾಯುಗಮಿದಂರಾ

ಇತಿ-ಹೀಗೆಂದು, ತಸ್ಯ-ಆಜನಕರಾಯನ, ವಚಃ-ಮಾತನ್ನು ಶ್ರು ತ್ವಾ-ಕೇಳಿ, ಶ್ರೀನಿವಾಸಃ-ಶ್ರೀನಿವಾಸನು, ವಚಃ-ಮಾತನ್ನು, ಅಬ್ರವೀತ್-ಹೇಳಿದನು ॥ ರಾಜನ್-ಜನಕರಾಯನೆ, ಶೃಣು-ಕೇಳು, ವೇದ ಗೋಚರಂ-ವೇದ ಪ್ರತಿಪಾದ್ಯವಾದ ರಹಸ್ಯಂ-ಗುಪ್ತವಾದ ಮಾತನ್ನು ಪ್ರವಕ್ಷ್ಯಾಮಿ-ಹೇಳುತ್ತಲಿದ್ದೇನೆ ॥ ತಾ ॥ ಹೀಗೆ ಆ ಜನಕರಾಯನು ಆಡಿದ ಮಾತಂನು ಕೇಳಿ, ಶ್ರೀನಿವಾಸನು, ಒಂದು ಮಾತನ್ನು ಹೇಳಿದ ವನಾದನು, ಎಲೈ ಜನಕರಾಯನೆ, ವೇದದಲ್ಲಿ ಹೇಳಿರುವ ರಹಸ್ಯವಾದ ಮಾತನ್ನು ಹೇಳುತ್ತೇನೆ ಕೇಳು ॥ ॥೪೧॥

ಕೃತೆ-ಕೃತಯುಗದಲ್ಲಿ ನಾರಾಯಣಃ-ನಾರಾಯಣಮೂರ್ತಿಯು, ಶುಕ್ಲಃ-ಬಿಳುಪಾಗಿರುವನು ॥ ತ್ರೇತಾಯಾಂ-ತ್ರೇತಾಯುಗದಲ್ಲಿ, ರಕ್ತ ವರ್ಣಕಃ-ಕೆಂಪುಬಣ್ಣವುಳ್ಳವನಾಗಿರುತ್ತಾನೆ, ದ್ವಾಪರೆ-ದ್ವಾಪರಯುಗ ದಲ್ಲಿ,ಪೀತವರ್ಣಃ-ಹಳದೀಬಣ್ಣವುಳ್ಳವನಾಗಿರುತ್ತಾನೆ, ಕಲೌತು-ಕಲಿ ಯುಗದಲ್ಲಿ ಆದರೇನೊ, ಕೃಷ್ಣತಾಂ-ಕಪ್ಪುಬಣ್ಣವನ್ನು, ವ್ರಜೇತ್-ಹೊಂದುವನು ॥ ತಾ ॥ ಕೃತಯುಗದಲ್ಲಿ ನಾರಾಯಣಮೂರ್ತಿಯು ಶು ಕ್ಲವರ್ಣವುಳ್ಳವನಾಗಿಯೂ, ತ್ರೇತಾಯುಗದಲ್ಲಿ ರಕ್ತವರ್ಣವುಳ್ಳವನಾ ಗಿಯೂ, ದ್ವಾಪರಯುಗದಲ್ಲಿ ಪೀತವರ್ಣನಾಗಿಯೂ, ಕಲಿಯುಗದಲ್ಲಿ ಕ ಪ್ಪುಬಣ್ಣವುಳ್ಳವನಾಗಿಯೂ, ಆಗುತ್ತಾನೆ ॥ ॥೪೨॥

ಭೂಮೆಃ-ಭೂಮಿಯ, ಭಾರ-ಹೊರೆಯನ್ನು, ಅಪಹಾರಾಯ-ಹೋಗ ಲಾಡಿಸುವದಕ್ಕೂ, ಭಕ್ತಾನಾಂ-ಭಕ್ತರ, ಪಾಲನಾಯಚ-ರಕ್ಷಣೆಯನ್ನು ಮಾಡುವದಕ್ಕೂ, ಪೂರ್ಣಾರ್ಧಾಂಶಾದಿಭೇದೇನ-ಪೂರ್ಣ-ಸಂಪೂರ್ಣವಾ ದ, ಅರ್ಧ-ಅರ್ಧಭಾಗದ, ಅಂಶ-ಕಲಾಮಾತ್ರವಾದದ್ದೆ, ಆದಿ-ಮೊದಲಾದ,

ಜನ್ ತವಸರ್ವಂಭವಿಷ್ಯತಿ । ಬ್ರಹ್ಮನಿಷ್ಠಃಪರಾಂಪ್ರೀತಿಂಪ
ಶ್ಚಾನ್ಮಾಂಪ್ರಾಪ್ಸ್ಯಸೇಚಿರಾತ್ ॥೪೪॥ ಸ್ವಾಮಿಪುಷ್ಕರಣೀ
ತೀರ್ಥತೀರಂಗತ್ವಾಹ್ವಯಾನುಜಂ ।ಆಹೂತೋಕುಶಕೇತು
ಸ್ತೇಶೀಘ್ರಮೇವಾಗಮಿಷ್ಯತಿ ॥೪೫॥ ತೇನಯುಕ್ತೋಚಿರಂರಾ
ಜ್ಯಂಭುಕ್ತ್ವಾಪ್ರೀತಿಮವಾಪ್ಸ್ಯಸಿ । ಅಯೋಧ್ಯಾಯಾಃಪ

ಭೇದೇನ—ಅವತಾರಭೇದದಿಂದ, ಅಹಂ—ಆ ನಾರಾಯಣಮೂರ್ತಿಯಾದ ನಾನೇ, ಅವತಾರಂ—ಅವತಾರವಂನು, ಕರೋಮಿ—ಮಾಡುತ್ತೇನೆ॥ತಾ॥ಭೂಮಿಗೆ ಉಂಟಾಗಿರುವ ದುಷ್ಟರಾಕ್ಷಸರ ಭಾರವನ್ನು ಪರಿಹರಿಸುವದಕ್ಕೂ ಭಕ್ತರಾದ ಸಾಧುಗಳಂನು ರಕ್ಷಿಸುವದಕ್ಕೂ ಆ ನಾರಾಯಣಮೂರ್ತಿಯಾದ ನಾನೇ, ಪೂರ್ಣಾವತಾರವುಳ್ಳವನಾಗಿಯೂ, ಅರ್ಧಾವತಾರವುಳ್ಳವನಾಗಿಯೂ, ಅಂಶಾವತಾರವುಳ್ಳವನಾಗಿಯೂ, ಆಗುತ್ತಲಿದ್ದೇನೆ ॥೪೩॥

ರಾಜನ್—ಜನಕರಾಯನೆ, ಇದಂ—ಇದು, ತ್ರೇತಾಯುಗಂ—ತ್ರೇತಾಯುಗವಾಗಿರುತ್ತೆ, ತವ—ನಿನಗೆ, ಸರ್ವಂ—ನೀನು ಕೋರಿದ್ದೆಲ್ಲಾ, ಭವಿಷ್ಯತಿ—ಆಗುತ್ತಲಿದೆ, ಬ್ರಹ್ಮನಿಷ್ಠಃ—ನೀನು ಬ್ರಹ್ಮಜ್ಞಾನವುಳ್ಳವನಾಗಿ, ಪರಾಂ—ಉತ್ಕೃಷ್ಟವಾದ, ಪ್ರೀತಿಂ—ಆನಂದವನ್ನು, (ಪ್ರಾಪ್ಯ—ಹೊಂದಿ,) ಪಶ್ಚಾತ್—ಅನಂತರದಲ್ಲಿ, ಅಚಿರಾತ್—ಜಾಗ್ರತೆಯಾಗಿಯೇ, ಮಾಂ ನನ್ನನ್ನು, ಪ್ರಾಪ್ಸ್ಯಸೇ—ಹೊಂದುತ್ತಲಿದ್ದೀ ॥ ತಾ ॥ ಎಲೈ ಜನಕರಾಯನೆ, ತ್ರೇತಾಯುಗವು ನಡೆಯುತ್ತಿದೆ, ನಿಂನ ಅಭೀಷ್ಟವೆಲ್ಲವೂ ಕೈಗೂಡುವದು ॥ ನೀನು ಬ್ರಹ್ಮನಿಷ್ಠನಾಗಿ ಉತ್ತಮವಾದ ಆನಂದವನ್ನು ಈ ಲೋಕದಲ್ಲಿಯೇ ಹೊಂದಿದವನಾಗಿ, ಅನಂತರದಲ್ಲಿ ಜಾಗ್ರತೆಯಾಗಿಯೇ ನನ್ನನ್ನು ಹೊಂದುತ್ತಲಿದ್ದೀ ॥ ॥೪೪॥

ಸ್ವಾಮಿಪುಷ್ಕರಣೀತೀರ್ಥತೀರಂ—ಸ್ವಾಮಿ ಪುಷ್ಕರಣೀತೀರ್ಥದ ದಡಹೋಗಿ, ಅನುಜಂ—ನಿನ್ನ ತಮ್ಮನಂನು, ಆಹ್ವಯ—ಕರೆಯುವವನು, ಆಹೂತಃ—ಕರೆಯಲ್ಪಟ್ಟವನಾದ, ತೇ—ನಿಂನ, ಕುಶಕೇತುಃ—ಕುಶಕೇತುವೆಂಬ ತಮ್ಮನು, ಶೀಘ್ರಮೇವ—ಜಾಗ್ರತೆಯಾಗಿಯೇ, ಆಗಮಿಷ್ಯತಿ—ಬರುತ್ತಲಿದ್ದಾನೆ ॥ ತಾ ॥ ಆದ್ದರಿಂದ ಜನಕರಾಯನೆ ನೀನು ಸ್ವಾ

ತಿಃಶ್ರೀಮಾನ್ನಾಮ್ನಾ ದಶರಥೋನೃಪಃ ||೪೬|| ಸಕಶ್ಯಪಾಂ
ಶಸಂಭೂತಃಚಕ್ರವರ್ತಿಪದಂಗತಃ |ತಸ್ಯಭಾರ್ಯಾಸುತಿಸೃ
ಷುಶಂಖಚಕ್ರಾದಿಭಿರ್ಯುತಃ| ನಾರಾಯಣೋಹಂಭಗವಾನ್
ಅವತೀರ್ಣೋವಸಾಮಿಚ ||೪೭|| ರಾಮಶ್ಚಲಕ್ಷ್ಮಣಶ್ಚೈವ
ಭರತಶ್ಶತ್ರುಹೇತಿಚ | ಚತ್ವಾರೋತನುಜಾಸ್ತಸ್ಯಮಹಾ

ಮಿಪುಷ್ಕರಣೀ ತೀರ್ಥದಬಳಿಗೆ ಹೋಗಿ ನಿನ್ನ ತಮ್ಮನನ್ನು ಕರೆಯುವವ
ನಾಗು, ಹಾಗೆ ಕರೆಯಲ್ಪಟ್ಟವನಾದ ಕುಶಧ್ವಜನೆಂಬ ನಿನ್ನ ತಮ್ಮನು
ಜಾಗ್ರತೆಯಾಗಿ ಬರುತ್ತಲಿದ್ದಾನೆ || ||೪೫||

ತೇನ-ಆತಮ್ಮನಿಂದ, ಯುಕ್ತಃ-ಕೂಡಿದವನಾಗಿ, ಚಿರಂ-ಬಹುಕಾಲ
ದವರಿಗೂ, ರಾಜ್ಯಂ-ರಾಜ್ಯವನ್ನು, ಭುಕ್ತ್ವಾ-ಅನುಭವಿಸಿ, ಪ್ರೀತಿಂ-
ಸಂತೋಷವನ್ನು, ಅವಾಪ್ಸ್ಯಸಿ-ಹೊಂದುತ್ತಲಿದ್ದೀ || ಅಯೋಧ್ಯಾ
ಯಾಃ-ಅಯೋಧ್ಯಾಪಟ್ಟಣಕ್ಕೆ, ಪತಿಃ-ಸ್ವಾಮಿಯಾದ, ನಾಮ್ನಾ-ಹೆಸರಿ
ನಿಂದ, ದಶರಥಃ-ದಶರಥನೆಂಬ, ನೃಪಃ-ರಾಜನು, ಅಸ್ತಿ-ಇದ್ದಾನೆ||ತಾ||
ಆ ಕುಶಧ್ವಜನೆಂಬ ತಮ್ಮನಿಂದ ಕೂಡಿದವನಾಗಿ, ಬಹುಕಾಲದವರಿವಿ
ಗೂರಾಜ್ಯವನ್ನು ಅನುಭವಿಸಿ, ಸಂತೋಷವನ್ನು ಹೊಂದುವವನಾಗು
ತ್ತೀ || ಅಯೋಧ್ಯಾಪಟ್ಟಣಕ್ಕೆ ಧೊರೆಯಾದ ದಶರಥನೆಂಬ ಧೊರೆಯು ಇ
ರುತಾನೆ | ||೪೬||

ಸಃ-ಆ, ದಶರಥರಾಯನು, ಕಶ್ಯಪಾಂಶಸಂಭೂತಃ-ಕಶ್ಯಪರುಷಿ
ಯ ಅಂಶಯಿಂದ ಹುಟ್ಟಿದವನಾಗಿ, ಚಕ್ರವರ್ತಿಪದಂ-ಸಾರ್ವಭೌಮ
ಪದವಂನು, ಗತಃ-ಪಡದವನಾಗಿರುತ್ತಾನೆ || ತಸ್ಯ-ಆ ದಶರಥರಾಯುನಿ
ಗೆ, ತ್ರಿಸೃಷು-ಮೂರುಮಂದಿಯಾದ, ಭಾರ್ಯಾಸು-ಹೆಂಡತಿಯರಲ್ಲಿ, ಶಂ
ಖಚಕ್ರಾದಿಭಿಃ-ಶಂಖಚಕ್ರಶೇಷರಿಂದ, ಯುತಃ-ಕೂಡಿದವನಾದ, ಭಗ
ವಾನ್-ಪೂಜ್ಯನಾದ, ನಾರಾಯಣಃ-ನಾರಾಯಣಮೂರ್ತಿಯಾದ,
ನಾನೇ, ಅವತೀರ್ಣಃ-ಅವತಾರ ಮಾಡಿದವನಾಗಿ, ವಸಾಮಿಚ-ಇ
ವನಾಗಿದ್ದೀನೆ || ತಾ || ಕಶ್ಯಪಾಂಶಯಿಂದ ಹುಟ್ಟಿರುವ ಆ ದಶ
ಯನು ಈಗ ಸಾರ್ವಭೌಮನಾಗಿರುತ್ತಾನೆ | ಆತನ ಮೂರು
ಹೆಂಡತಿಯರಲ್ಲಿ, ಶಂಖಚಕ್ರ ಶೇಷರಿಂದ ಕೂಡಿದವನಾಗಿ, ನಾರಾ

ಬಲಪರಾಕ್ರಮಾಃ ॥೪೪॥ ತೇಷುಜ್ಯೇಷ್ಠೋಮಹಾವಿಷ್ಣುಃಶೇ
ಷೋಲಕ್ಷ್ಮಣಈರಿತಃ । ತಥಾಭರತಶತ್ರುಘ್ನೌಚಕ್ರಶಂಖೌ
ಬಭೂವತುಃ॥೪೫॥ ತೇಷಾಂಕನ್ಯಾಪ್ರದಾನೇನಕುಲಂಸರ್ವಂ
ಚತಾರಿತಂ। ಭವಿಷ್ಯತಿನಸಂದೇಹಃಸತ್ಯಂಸತ್ಯಂಮಯೋದಿ
ತಂ ॥೪೬॥ ಮಾಕುರುಷ್ವಾತ್ರಸಂದೇಹಂರಾಮೋನಾರಾಯ
ಣೋಹರಿಃ । ತಂಧ್ಯಾತ್ವಾಮುಚ್ಯತೇಜಂತುಃಸರ್ವಸಂಸಾರ

ನಾದ ನಾನೇ ಅವತಾರ ಮಾಡಿರುತ್ತೇನೆ ॥ ॥೪೩॥

ರಾಮಶ್ಚ–ರಾಮನೆಂದು, ಲಕ್ಷ್ಮಣಶ್ಚ–ಲಕ್ಷ್ಮಣನೆಂದು, ಭರತಃ–ಭರತನೆಂದು, ಶತ್ರುಘ್ನಇತಿಚ–ಶತ್ರುಘ್ನನೆಂಬದಾಗಿ, ತಸ್ಯ–ಆ ದಶರಥರಾಯನಿಗೆ, ಚತ್ವಾರಃ–ನಾಲ್ಕುಮಂದಿಯಾದ, ತನುಜಾಃ–ಮಕ್ಕಳು, ಮಹಾಬಲಪರಾಕ್ರಮಾಃ–ಅಧಿಕವಾದ ಶಕ್ತಿಯೂ ಸಾಮರ್ಥ್ಯವೂ ಉಳ್ಳವರಾಗಿ (ಸಂತಿ–ಇರುತ್ತಾರೆ) ॥ತಾ॥ ಆ ದಶರಥರಾಯನಿಗೆ, ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬದಾಗಿ, ಹೆಸರುಳ್ಳವರಾದ ನಾಲ್ಕು ಮಂದಿ ಮಕ್ಕಳುಅಧಿಕವಾದ ಬಲಸಾಮರ್ಥ್ಯಗಳುಳ್ಳವರಾಗಿ ಈಗಹುಟ್ಟಿರುತ್ತಾರೆ॥೪೪॥

ತೇಷು–ಆ ನಾಲ್ಕುಮಂದಿಯೊಳಗೆ ಜ್ಯೇಷ್ಠಃ–ಹಿರಿಯವನಾದ ರಾಮಚಂದ್ರನು, ಮಹಾವಿಷ್ಣುಃ–ವಿಷ್ಣುವಾಗಿರುತ್ತಾನೆ ॥ ಶೇಷಃ–ಆದಿಶೇಷನು, ಲಕ್ಷ್ಮಣಃ–ಲಕ್ಷ್ಮಣನೆಂಬದಾಗಿ, ಈರಿತಃ–ಹೇಳಲ್ಪಡುವನು ॥ ತಥಾ–ಹಾಗೆ, ಭರತ ಶತ್ರುಘ್ನೌ–ಭರತ ಶತ್ರುಘ್ನರು, ಚಕ್ರಶಂಖೌ–ಚಕ್ರಶಂಖಗಳಾಗಿ ಬಭೂವತುಃ–ಆಗಿರುವರು ॥ ತಾ ॥ ಆ ನಾಲ್ಕುಮಂದಿಗಳೊಳಗೆ ರಾಮನು ಮಹಾವಿಷ್ಣುವು॥ ಲಕ್ಷ್ಮಣನು ಆದಿಶೇಷನು, ಚಕ್ರಶಂಖಗಳು ಭರತ ಶತ್ರುಘ್ನರಾಗಿರುತ್ತಾರೆ ॥ ॥೪೫॥

ತೇಷಾಂ–ಆರಾಮಲಕ್ಷ್ಮಣಭರತಶತ್ರುಘ್ನರಿಗೆ,ಕನ್ಯಾಪ್ರದಾನೇನ–ಮಕ್ಕ
ದ ಸೀತಾಮಾಂಡವೀ ಊರ್ಮಿಳಾ ಶ್ರುತಕೀರ್ತಿಗಳನ್ನು; ಪ್ರದಾನೆ
ಕನ್ಯಾದಾನವಾಗಿ ಕೊಡುವದ್ದರಿಂದ, ಸರ್ವಂ–ಸಕಲವಾದ, ಕುಲಂ
ಶವು, ತಾರಿತಂ–ಉದ್ಧರಿಸಲ್ಪಟ್ಟದ್ದು, ಭವಿಷ್ಯತಿ–ಆಗುತ್ತಲಿಧೆ,
ಂದೇಹಃ–ಸಂಶಯವಿಲ್ಲ, ಮಯಾ–ನನ್ನಿಂದ, ಉದಿತಂ–ಹೇಳಲ್ಪಟ್ಟ
ಸತ್ಯಂಸತ್ಯಂ–ನಿಜವಾದದ್ದು ನಿಜವಾದದ್ದು॥ತಾ॥ ಆ ರಾಮಲಕ್ಷ್ಮ

ಬಂಧನಾತ್॥೫೧॥ಏವಮುಕ್ತೋ ವೆಂಕಟೇನಜನಕಃಪುನರಬ್ರ
ವೀತ್ ॥೫೨॥ ಜನಕಉವಾಚ ॥ ಸ್ವಾಮಿನ್ದಯಾನಿಧೆದೇವ
ಕದಾರಾಮೋಮಮಾಂತಿಕಂ ।ಗಂತವ್ಯಂವಾಮಯಾತತ್ರ ತೆ
ನ್ಮೆವ್ಯಾಖ್ಯಾತುಮರ್ಹಸಿ ॥೫೩॥ ಶ್ರೀಶ್ರೀನಿವಾಸಉವಾಚ ॥

ಭರತಶತೃಘ್ನರಿಗೆ ಸೀತೋರ್ಮಿಳಾ ಮಾಂಡವೀಶೃತಕೀರ್ತಿಗಳನ್ನು ಕೊಟ್ಟು ಮದಿವೆಯನ್ನು ಮಾಡುವದರಿಂದ ನಿಂನ ವಂಶವೆಲ್ಲಾ ಪರಿಶುದ್ಧವಾಗಿ ಉತ್ತಾರಿತವಾಗುವದು ನಾನು ಹೇಳಿದ ಮಾತು ಸತ್ಯವಾದದ್ದು, ಸಂಶಯವಿಲ್ಲವು ॥೫೦॥

ರಾಮಃ–ರಾಮಚಂದ್ರನು, ನಾರಾಯಣಃ–ಕ್ಷೀರಸಮುದ್ರವೇ,ಸ್ಥಳವಾಗುಳ್ಳ, ಹರಿಃ–ವಿಷ್ಣುವು, ಅತ್ರ–ಈ ಅರ್ಥದಲ್ಲಿ, ಸಂದೇಹಂ–ಸಂಶಯವನ್ನು, ಮಾಕುರುಷ್ವ–ಮಾಡಬೇಡ,ಜಂತುಃ–ಪ್ರಾಣಿಯು, ತಂ–ಆರಾಮಚಂದ್ರನಂನು, ಧ್ಯಾತ್ವಾ–ಧ್ಯಾನಿಸಿ, ಸರ್ವ–ಸಮಸ್ತವಾದ,ಸಂಸಾರ–ಸಂಸಾರವೆಂಬ, ಬಂಧನಾತ್–ಬಂಧಕದಿಂದ, ವಿಮುಚ್ಯತೆ–ಬಿಡುಗಡೆಯನ್ನು ಹೊಂದುವುದು ॥ತಾ॥ ರಾಮಚಂದ್ರನು ಕ್ಷೀರಸಮುದ್ರವೇಸ್ಥಳವಾಗುಳ್ಳ ಮಹಾವಿಷ್ಣುವಾಗಿರುತ್ತಾನೆ, ಈ ವಿಷಯದಲ್ಲಿ ಸಂಶಯಪಡಬೇಡ, ಆ ರಾಮಚಂದ್ರನನ್ನು ಪ್ರಾಣಿಮಾತ್ರದವನು ಧ್ಯಾನಮಾಡಿದವನಾದರೆ ಸಕಲ ಸಂಸಾರಬಂಧಗಳಿಂದ ಮುಕ್ತನಾಗುತ್ತಾನೆ ॥೫೧॥

ವೆಂಕಟೇನ-ಶ್ರೀನಿವಾಸನಿಂದ, ಏವಂ–ಈ ರೀತಿಯಾಗಿ,ಉಕ್ತಃ-ಹೇಳಲ್ಪಟ್ಟವನಾದ, ಜನಕಃ–ಜನಕರಾಯನು, ಪುನಃ–ತಿರಿಗಿ, ಅಬ್ರವೀತ್-ಹೇಳಿದನು ॥ತಾ॥ ಈ ರೀತಿಯಾಗಿ ಹೇಳಲ್ಪಟ್ಟವನಾಗಿ ಜನಕರಾಯನು ಮತ್ತು ಹೇಳುತ್ತಲಿದ್ದಾನೆ ॥೫೨॥

ಸ್ವಾಮಿನ್–ಸ್ವಾಮಿಯಾದ, ದಯಾನಿಧೆ–ದಯಾಶಾಲಿಯಾದ, ದೇವ–ಶ್ರೀನಿವಾಸನೆ, ರಾಮಃ–ರಾಮಚಂದ್ರನು, ಕದಾ–ಯಾವಾಗ, ಮಾಂತಿಕಂ–ನನ್ನಬಳಿಯನ್ನು ಕುರಿತು, ಆಗಮಿಷ್ಯತಿ–ಬರುತ್ತಲಿದೆ ಮಯಾ–ನನ್ನಿಂದ, ತತ್ರ–ಅಲ್ಲಿಗೆ, ಗಂತವ್ಯಂವಾ–ಹೋಗಬೇಕೆ, ಅದನ್ನು: ಮೆ–ನನಿಗೆ, ವ್ಯಾಖ್ಯಾತುಂ–ಹೇಳುವದಕ್ಕೆ, ಅರ್ಹಸಿ–ರ್ಹನಾಗು ॥ ತಾ ॥ ದಯಾಶಾಲಿಯಾದ ಸ್ವಾಮಿಯಾದ, ಶ್ರೀನಿ

ವಿಶ್ವಾಮಿತ್ರಸಹಾಯೇನತವಯಜ್ಞಭುವಂಹರಿಃ । ಆಗಮಿ
ಷ್ಯತಿತಂದೃಷ್ಟ್ವಾದೇಹಿತಸ್ಯೈಶ್ವರಂಧನುಃ ॥೫೪॥ ಭ
ಗ್ನಂಯಃಕುರುತೇರಾಜನ್ತಂರಾಮಂವಿದ್ಧಿಸಾದರಂ । ತ
ಸ್ಮೈದತ್ವಾಜನಕಜಾಂಪರಾಂಸಿದ್ಧಿಮವಾಪ್ಸ್ಯಸಿ ॥೫೫॥
ಇತಿವೆಂಕಟನಾಥೇನಶ್ರೀನಿವಾಸೇನಬೋಧಿತಃ । ಸ್ವಾಮಿಪು
ಷ್ಕರಣೀತೀರೆಆಜುಹಾವಕುಶಧ್ವಜಂ॥೫೬॥ಆಗತಂಸ್ವಾನು

ನೇ ಯಾವಾಗ ರಾಮಚಂದ್ರನು ನನ್ನ ಬಳಿಗೆ ಬರುತ್ತಲಿದ್ದಾನೆ॥ ರಾಮ
ಚಂದ್ರನಬಳಿಗೆ ನಾನೇಹೋಗಬೇಕೆ ಅದನ್ನು ನನಿಗೆವಿವರಿಸುವವನಾಗು॥
ಶ್ರೀನಿವಾಸಉವಾಚ ॥ ಶ್ರೀನಿವಾಸನು ಹೇಳುತ್ತಲಿದ್ದಾನೆ ॥ ವಿಶ್ವಾ
ಮಿತ್ರ–ವಿಶ್ವಾಮಿತ್ರಮುನಿಯ, ಸಹಾಯೇನ–ಆಸರೆಯಿಂದ, ಹರಿಃ–ರಾಮ
ಚಂದ್ರನು, ತವ–ನಿನ್ನ, ಯಜ್ಞಭುವಂ–ಯಜ್ಞಭೂಮಿಯನ್ನು ಕು
ರಿತು, ಆಗಮಿಷ್ಯತಿ–ಬರುತ್ತಲಿದ್ದಾನೆ, ತಂ–ಆ ರಾಮಚಂದ್ರನನ್ನು,
ದೃಷ್ಟ್ವಾ–ನೋಡಿ, ತಸ್ಯ–ಆ ರಾಮಚಂದ್ರನಿಗೆ, ಐಶ್ವರಂ–ಈಶ್ವರಸಂ
ಬಂಧವಾದ, ಧನುಃ–ಬಿಲ್ಲನ್ನು, ದೇಹಿ–ಕೊಡು ॥ತಾ॥ ವಿಶ್ವಾಮಿತ್ರಋಷಿ
ಯಸಂಗಡ ನಿನ್ನ ಯಜ್ಞಭೂಮಿಗೆ ರಾಮಚಂದ್ರನು ಬರುತ್ತಲಿದ್ದಾನೆ,
ಆರಾಮಚಂದ್ರನಿಗೆ ಈಶ್ವರಧನುಸ್ಸನ್ನು ಕೊಡುವವನಾಗು ॥೫೪॥
ರಾಜನ್–ಜನಕರಾಯನೆ, ಯಃ–ಯಾವನು, ಭಗ್ನಂ–ಆಧನುಸ್ಸನ್ನು,
ಮುರಿದದ್ದನ್ನಾಗಿ, ಕುರುತೇ–ಮಾಡುತ್ತಾನೊ,ತಂ–ಆತನನ್ನೇ; ಸಾದ
ರಂ–ವಿಶ್ವಾಸದಿಂದ ಕೂಡಿದವನಾಗಿ, ರಾಮಂ–ರಾಮನೆಂಬದಾಗಿ, ವಿದ್ಧಿ
ತಿಳಿಯುವವನಾಗು,ತಸ್ಮೈ–ಆರಾಮಚಂದ್ರನಿಗೆ, ಜನಕಜಾಂ–ಸೀತೆಯಂ
ನು, ದತ್ವಾ–ಕೊಟ್ಟು, ಪರಾಂ–ಉತ್ಕೃಷ್ಟವಾದ, ಸಿದ್ಧಿಂ–ಫಲಸಿದ್ಧಿ
ಯಂನು. ಅವಾಪ್ಸ್ಯಸಿ–ಪಡೆಯುತ್ತೀ॥ತಾ॥ಎಲೈಜನಕರಾಯನೇ ಯಾ
ವನು ಆಈಶ್ವರಧನುಸ್ಸನ್ನು ಮುರಿಯುತ್ತಾನೊ ಆತನೇ ರಾ
ಮ ವಿಷ್ಣುವೆಂದು ತಿಳಿದು ಆತನಿಗೆ ಸೀತೆಯನ್ನು ಕೊಡುವವ
ತ್ತಮವಾದ ಫಲವಂನು ಪಡೆಯುವವನಾಗುತ್ತಿ, ॥೫೫॥
ಈ ರೀತಿಯಾಗಿ, ವೆಂಕಟನಾಥೇನ–ವೆಂಕಟಪರ್ವತಕ್ಕೆ ಸ್ವಾಮಿ
ನಿವಾಸನಿಂದ, ಬೋಧಿತಃ–ಪ್ರಾರ್ಥಿಸಲ್ಪಟ್ಟವನಾಗಿ, ಸ್ವಾ

ಜಂದೃಷ್ಟ್ವಾರಾಜಾಸಂತೋಷಸಂಯುತಃ । ಜಗಾಮಸ್ವ
ಪುರೀಂರಾಜಾಮಿಥಿಲಾಂಮಿಥಿಲೇಶ್ವರಃ ॥೫೭॥ ಅಥಕಾಲೇಗತೇ
ತಸ್ಮಿನ್ಜನಕೇಯಜ್ಞದೀಕ್ಷಿತೇ । ವಿಶ್ವಾಮಿತ್ರಸಹಾಯಸ್ಸ
ನ್ನಾಜಗಾಮರಘೂದ್ವಹಃ॥೫೮॥ಆಗತಂರಾಘವಂದೃಷ್ಟ್ವಾ
ವಿಶ್ವಾಮಿತ್ರಂಮಹಾಮುನಿಂ । ಅರ್ಚಯಾಮಾಸಜನಕೋ

ಮಿಪುಷ್ಕರಣೀತೀರೆ-ಸ್ವಾಮಿಪುಷ್ಕರಣೀತೀರ್ಥದ ದಡದಲ್ಲಿ, ಕುಶಧ್ವ
ಜಂ–ಕುಶಧ್ವಜನೆಂಬ ತನ್ನ ತಮ್ಮನಂನು, ಆಜುಹಾವ–ಕರದನು॥ತಾ॥
ಹೀಗೆ ವೆಂಕಟೇಶ್ವರನಿಂದ ಪ್ರೇರಿತನಾದ ಜನಕರಾಯನು ಸ್ವಾಮಿ ಪು
ಷ್ಕರಣೀತೀರಕ್ಕೆ ಬಂದು ತನ್ನ ತಮ್ಮನನ್ನು ಕೂಗಿದನು ॥ ೫೬॥

ಆಗತಂ–ಬಂದವನಾದ, ಸ್ವಾನುಜಂ–ತನ್ನತಮ್ಮನಂನು, ದೃಷ್ಟ್ವಾ
ನೋಡಿ, ರಾಜಾ–ಧೊರೆಯಾದ ಜನಕರಾಯನು, ಸಂತೋಷ-ಸಂತೊ
ಷದಿಂದ, ಸಂಯುತಃ-ಕೂಡಿದವನಾಗಿ, ಮಿಥಿಲೇಶ್ವರಃ-ಮಿಥಿಲಾಪಟ್ಟಣ
ಕ್ಕೆ ಧೊರೆಯಾದ, ರಾಜಾ-ಜನಕರಾಯನು, ಸ್ವಪುರೀಂ-ತನ್ನ ಪಟ್ಟಣ
ವಾದ ಮಿಥಿಲಾಂ-ಮಿಥಿಲಾಪಟ್ಟಣವಂನು ಕುರಿತು, ಜಗಾಮ–ಹೊರಟು
ಹೋದನು ॥ತಾ॥ ಆ ಜನಕರಾಯನು ಕೂಗಿದಮಾತ್ರದಿಂದ ಬಂದಂಥಾ
ತಮ್ಮನಾದ ಕುಶಧ್ವಜನಂನು ನೋಡಿ, ಮಿಥಿಲಾಧಿಪತಿಯಾದ ಜನಕರಾ
ಯನು ತಂನ ಮಿಥಿಲಾಪುರವಂನು ಕುರಿತು ಹೊರಟು ಹೋದನು ॥೫೭॥

ಅಥ-ಆಬಳಿಕ, ತಸ್ಮಿನ್–ಆ, ಕಾಲೆ–ಸಮಯವು, ಗತೆ-ಹೋಗುತ್ತಿರ
ಲು; ಜನಕೆ–ಜನಕರಾಯನು, ಯಜ್ಞದೀಕ್ಷಿತೆ-ಯಜ್ಞವಂನುಮಾಡಲು
ದೀಕ್ಷಾಬದ್ಧನಾಗುತ್ತಿರಲೂ, ರಘೂದ್ವಹಃ–ರಾಮಚಂದ್ರನು, ವಿಶ್ವಾ
ಮಿತ್ರಸಹಾಯಸ್ಸನ್–ವಿಶ್ವಾಮಿತ್ರಯುಕ್ತನಾಗಿ, ಆಜಗಾಮ–ಜನಕರಾ
ಯನ ಯಜ್ಞಶಾಲೆಯಂನು ಕುರಿತು ಬಂದವನಾದನು ॥ತಾ॥ ಹೀಗೆ ಕೆ
ಲವುಕಾಲವು ಕಳೆಯುತ್ತಿರಲು, ರಾಮಚಂದ್ರನು ವಿಶ್ವಾಮಿತ್ರ
ಸಂಗಡ ಜನಕರಾಯನ ಯಜ್ಞಶಾಲೆಯಂನುಕುರಿತು ಬಂದ

ಶ್ರೀಸೂತಃ ॥ ಸೂತಮುನಿಯು ಹೇಳುತ್ತಲಿದ್ದಾನೆ ॥ ಆಗ
ದಂಥಾ, ರಾಘವಂ–ರಾಮಚಂದ್ರನಂನು, ದೃಷ್ಟ್ವಾ–ನೋಡಿ,
ಮುನಿಂ-ಮಹರ್ಷಿಯಾದವಿಶ್ವಾಮಿತ್ರಮುನಿಯಂನು,ದೃಷ್ಟ್ವಾ

ವಚನಂಚೇದಮಬ್ರವೀತ್ ॥೫॥ ರಾಜಪುತ್ರಮಹಾಭಾಗ
ಜ್ಞಾತೋಸಿತ್ವಂರಮಾಪತಿಃ । ತಸ್ಮಾದ್ದದಾಮಿತೇದಿವ್ಯಮೈ
ಶ್ವರಂಧನುರುತ್ತಮಂ ॥೬॥ ಇತ್ಯುಕ್ತ್ವಾನೀಯತಚ್ಚಾ
ಪಂರಾಮಾಯಪರಮಾತ್ಮನೇ । ದರ್ಶಯಾಮಾಸಜನಕಃ
ದೃಷ್ಟ್ವಾರಾಮೋಥತದ್ಧನುಃ ॥ ॥೭॥

ಜನಕಃ–ಜನಕಮಹಾರಾಯನು, ಅರ್ಚಯಾಮಾಸ–ಅರ್ಘ್ಯಪಾದ್ಯಾ ದಿಗಳಿಂದ ಪೂಜಿಸಿದನು, ಇದಂ–ಈ,ವಚನಂ–ಮಾತನ್ನು, ಅಬ್ರವೀತ್–ಹೇಳಿದನು ॥ ತಾ ॥ ಬಂದಿರುವ ರಾಮಚಂದ್ರನನ್ನು, ಮಹರ್ಷಿಯಾದ ವಿಶ್ವಾಮಿತ್ರ ಮುನಿಯನ್ನು ಜನಕರಾಯನು ನೋಡಿ, ಅರ್ಘ್ಯಾದಿ ಉಪಚಾರಗಳಿಂದ ಅವರುಗಳನ್ನು ಪೂಜಿಸಿ, ಈ ಮಾತನ್ನು ಹೇಳುವವನಾದನು॥ ॥೫॥

ಮಹಾಭಾಗ–ಮಹನೀಯನಾದ, ರಾಜಪುತ್ರ–ದೊರೆಯ ಮಗನಾದ ರಾಮಚಂದ್ರನೇ, ತ್ವಂ–ನೀನು, ರಮಾಪತಿಃ–ವಿಷ್ಣುವೆಂಬದಾಗಿ, ಜ್ಞಾತಃ–ತಿಳಿಯಲ್ಪಟ್ಟವನು, ಅಸಿ–ಆಗಿದ್ದೀ, ತಸ್ಮಾತ್–ಆದ್ದರಿಂದ, ತೇ–ನಿನಗೆ, ದಿವ್ಯಂ–ಮಹಾದೇವಯೋಗ್ಯವಾದ, ಐಶ್ವರಂ–ಈಶ್ವರಸಂಬಂಧವಾದ, ಧನುಃ–ಬಿಲ್ಲನ್ನು, ದದಾಮಿ–ಕೊಡುತ್ತೇನೆ ॥ತಾ॥ ಎಲೈ ಮಹಾನುಭಾವನಾದ ರಾಜಪುತ್ರನಾದ ರಾಮಚಂದ್ರನೇ,ನೀನು ನಾರಾಯಣಮೂರ್ತಿಯೆಂಬದಾಗಿ ತಿಳಿದವನಾಗಿದ್ದೇನೆ-ಆದ್ದರಿಂದ ಆ ಮಹಾದೇವನಿಂದ ಹಿಡಿಯಲು ಯೋಗ್ಯವಾದ ಈಶ್ವರಸಂಬಂಧವಾದ ಬಿಲ್ಲನ್ನು ನಿನಗೆ ಕೊಡುತ್ತಲಿದ್ದೇನೆ॥ ॥೬॥

ಇತಿ–ಹೀಗೆ, ಉಕ್ತ್ವಾ–ಹೇಳಿ, ತಂಚಾಪಂ–ಆ ಬಿಲ್ಲನ್ನು, ಆನೀಯ–ತರಿಸಿ, ಪರಮಾತ್ಮನೇ–ಪರಮಾತ್ಮನಾದ, ರಾಮಾಯ–ರಾಮಚಂದ್ರ... ...ಯಾಮಾಸ–ಆ ಬಿಲ್ಲನ್ನು ತೋರಿಸಿದನು, ಅಥ–ಆಬಳಿಕ, ...ಮಚಂದ್ರನು, ತದ್ಧನುಃ–ಆಧನುಸ್ಸನ್ನು; ದೃಷ್ಟ್ವಾ–ನೋ... ಈರೀತಿಯಾಗಿ ಜನಕರಾಯನು ಹೇಳಿ, ಆ ಬಿಲ್ಲನ್ನು ರಾ... ...ನಿಗೆ ತರಿಸಿ ತೋರಿಸಿದನು ॥ ರಾಮಚಂದ್ರನು ಆ ಬಿಲ್ಲನ್ನು ॥೭॥

ಲೀಲಯಾಭಗ್ನಮಕರೋನ್ನಿರ್ಭಯೇನಾಂತರಾತ್ಮನಾ । ರಾ
ಮಾಯಸೀತಾಂಜನಕಃಪ್ರದದಾಚಾಗ್ನಿಸಾಕ್ಷಿಕಂ॥ ೬೦॥
ಮಾಂಡವೀಂಭರತಾಯಾದಾದೂರ್ಮಿಳಾಂಲಕ್ಷ್ಮಣಾಯಚ।
ಶತ್ರುಘ್ನಾಯಪ್ರದತ್ವಾಶ್ರುತಕೀರ್ತಿಂಸಹಾನುಜಃ॥೬೧॥
ಸಾನುಜೋಜನಕೋರೇಮೇರಾಮಜಾಮಾತೃಲಾಭತಃ ।ಏವಂ

ನಿರ್ಭಯೇನ-ಅಂಜಿಕೆ ಇಲ್ಲದ್ದಾದ,ಅಂತರಾತ್ಮನಾ–ಚಿತ್ತದಿಂದ, ಲೀಲಯಾ–ವಿಲಾಸದಿಂದ, ಭಗ್ನಂ-ಮುರಿದು ಹೊದ್ದನ್ನಾಗಿ, ಆಕರೋತ್–ಮಾಡಿದನು ॥ ಜನಕಃ–ಜನಕರಾಯನು, ರಾಮಾಯ–ರಾಮಚಂದ್ರನಿಗೆ ಸೀತಾಂ–ಸೀತಾದೇವಿಯನ್ನು, ಅಗ್ನಿಸಾಕ್ಷಿಕಂ—ಅಗ್ನಿಸಾಕ್ಷಿಯಾಗಿ, ಪ್ರದದೌ–ಕೊಟ್ಟನು ॥ ತಾ ॥ ರಾಮಚಂದ್ರನು ಅಂಜದೇ ಇರುವ ಮನಸ್ಸಿನಿಂದ ಆ ಧನುಸ್ಸಂನು ವಿಲಾಸದಿಂದ ಮುರಿದುಹಾಕಿದನು ॥ ಆಗ ಜನಕರಾಯನು ಸೀತಾದೇವಿಯನ್ನು ಅಗ್ನಿಸಾಕ್ಷಿಯಾಗಿ ರಾಮಚಂದ್ರನಿಗೆ ಮದಿವೆ ಮಾಡಿಕೊಟ್ಟನು ॥ ॥೬೦॥

ಮಾಂಡವೀಂ—ಮಾಂಡವಿಯನ್ನು, ಭರತಾಯ–ಭರತನಿಗೆ, ಊರ್ಮಿಳಾಂ–ಊರ್ಮಿಳೆಯನ್ನು, ಲಕ್ಷ್ಮಣಾಯಚ-ಲಕ್ಷ್ಮಣನಿಗೂ, ಶತ್ರುಘ್ನಾಯ–ಶತ್ರುಘ್ನನಿಗೆ, ಶ್ರುತಕೀರ್ತಿಂ-ಶ್ರುತಿಕೀರ್ತಿಯನ್ನು, ಸಹಾನುಜಃ–ತಮ್ಮನಾದ ಕುಶಧ್ವಜನಿಂದ ಕೂಡಿದವನಾಗಿ, ಅದಾತ್-ಕೊಟ್ಟನು ॥ ತಾ ॥ ಅಬಳಿಕ ಕುಶಧ್ವಜನಿಂದ ಕೂಡಿದವನಾಗಿ ಜನಕರಾಯನು ಮಾಂಡವಿಯನ್ನು ಭರತನಿಗೂ, ಊರ್ಮಿಳೆಯನ್ನು ಲಕ್ಷ್ಮಣನಿಗೂ ಶ್ರುತಕೀರ್ತಿಯನ್ನು ಶತ್ರುಘ್ನನಿಗೂ ಕೊಟ್ಟನು ॥ ॥೬೧॥

ಸಾನುಜಃ–ತಮ್ಮನಿಂದ ಕೂಡಿದವನಾದ, ಜನಕಃ-ಜ ರಾಯನು ರಾಮಜಾಮಾತೃಲಾಭತಃ–ರಾಮಚಂದ್ರನು ಅಳಿಯನಾ ನದಿಂದ, ರೇಮೇ-ಸಂತೋಷವುಳ್ಳವನಾಗಿದ್ದನು ॥ ಏವಂ–ಈ ಶೇಷಾಚಲೇಶಸ್ಯ–ವೆಂಕಟೇಶ್ವರನ,ಪ್ರಸಾದಾತ್–ಅನುಗ್ರಹ ಆ ಜನಕರಾಯನು, ಸಿದ್ಧಿಂ-ಭ್ರಾತೃಲಾಭ ರೂಪವಾದ ಪ್ರ ನ್ನು ಆಪ–ಹೊಂದಿದನು ॥ತಾ॥ತಮ್ಮನಾದ ಕುಶಧ್ವಜನಿಂದ ಕ

ಶೇಷಾಚ ಳೇಶಸ್ಯಪ್ರಸಾದಾತ್ಸಿದ್ಧಿಮಾಪಸಃ ॥೬೮॥ ಯುಗ
ಭೇದಾನ್ನಾಮಭೇದೋಕ್ಷೇತ್ರಸ್ಯಾಸ್ಯಭವಿಷ್ಯತಿ । ಭಗವಾನ
ವ್ಯಯೋವಿಷ್ಣುರ್ನಾಮಭೇದೇನಸೇವಿತಃ ॥ ಮನೋರಥಾ
ದದಾತ್ಯೇವತಪೋಯೋಗಾನುಸಾರತಃ ॥ ॥೬೯॥

ಇತಿ ಶ್ರೀವೆಂಕಟೇಶಮಾಹಾತ್ಮ್ಯೇ ಉತ್ತರಭಾಗೆ ಕು
ಶಧ್ವಜಸಂಜೀವನಂನಾಮ ಪ್ರಥಮೋಧ್ಯಾಯಃ .

---

ದ ಜನಕರಾಯನು, ರಾಮಚಂದ್ರನು ಅಳಿಯನಾದ್ದರಿಂದ ಆನಂದವಂನು ಹೊಂದಿದವನಾದನು ॥ ಈರೀತಿಯಾಗಿ ಶೇಷಗಿರೀಶನಾದ ವೆಂಕಟೇಶ್ವರನ ಅನುಗ್ರಹದಿಂದ ಜನಕರಾಯನು ಮೃತನಾದ ಕುಶಧ್ವಜನನ್ನು ಪುನಃ–ಪಡದನು ॥ ॥೬೮॥

ಅಸ್ಯ–ಈ, ಕ್ಷೇತ್ರಸ್ಯ–ಪುಣ್ಯಕ್ಷೇತ್ರಕ್ಕೆ, ಯುಗಭೇಧಾತ್–ಯುಗಭೇದದಿಂದ ನಾಮಭೇದಃ-ಹೆಸರಿನಭೇದವು, ಭವಿಷ್ಯತಿ–ಆಗುತ್ತಲಿದೆ ॥ಭಗವಾನ್–ಪೂಜ್ಯನಾದ, ಅವ್ಯಯಃ ನಾಶರಹಿತನಾದ ವಿಷ್ಣುಃ–ನಾರಾಯಣಮೂರ್ತಿಯು, ನಾಮಭೇದೇನ–ನಾಮಾಂತರದಿಂದ ಸೇವಿತಃ–ಆಯಾಯ ಯುಗದಲ್ಲಿ ಸೇವಿಸಲ್ಪಟ್ಟವನಾಗಿ ತಪೋಯೋಗಾನುಸಾರತಃ-ಆಯಾಯ ಜನರು ಮಾಡಿದ ತಪೋಧ್ಯಾನಾನುಗುಣವಾಗಿ ಮನೋರಥಾನ್–ಕೋರಿಕೆಗಳನ್ನು, ದದಾತ್ಯೇವ–ಕೊಡುತ್ತಲೇ ಇರುತ್ತಾನೆ॥ತಾ॥ ಯುಗಭೇದದಿಂದ ಈಕ್ಷೇತ್ರಕ್ಕೆ ನಾಮಭೇದವುಉಂಟಾಗುತ್ತಿರುವುದು, ಪೂಜ್ಯನಾಗಿಯೂ ನಾಶರಹಿತನಾಗಿಯೂ ಇರುವ ಶ್ರೀಮಹಾ ವಿಷ್ಣುವು, ಆಯಾಯ ಜನರ ತಪೋ ಧ್ಯಾನಾನುಸಾರವಾಗಿ ಅವರವರ ಮನೋರಥಗಳಂನು ಕೊಡುವವನಾಗುತ್ತಾನೆ ॥ ॥೬೯॥

ಇಂತು ಭವಿಷ್ಯೋತ್ತರ ಪುರಾಣದೊಳು ವೆಂಕಟೇಶ
ಮಾಹಾತ್ಮ್ಯೆಯ ಉತ್ತರಭಾಗದಲ್ಲಿ ಕುಶಧ್ವಜ
ಸಂಜೀವನವೆಂಬ ಒಂದನೆ ಅಧ್ಯಾಯವು.

---

ಶ್ರೀಸೂತಃ ॥ಶೃಣುಧ್ವಂರುಷಯಸ್ಸರ್ವೇ ಮುನಿರ್ವೈಖಾನ
ಸಾಭಿಧಃ । ತಪಶ್ಚಚಾರಸುಚಿರಂದುಸ್ತರಂಸರ್ವಮಾನ
ವೈಃ ॥೧॥ ತದಾ ಪ್ರಸನ್ನೋ ಭಗವಾನ್ ಶ್ರೀನಿವಾಸೋನಿರಾಮ
ಯಃ । ಕಿಮರ್ಥಂತಪ್ಯತೇಬ್ರಹ್ಮನ್ ಯತ್ತೇ ಮನಸಿಕಾಂಕ್ಷಿ
ತಂ॥ತನ್ಮಮಾಚಕ್ಷ್ವತತ್ತೇನದಾಸ್ಯಾಮಿಮುನಿಪುಂಗವ॥೨॥
ವೈಖಾನಸಮುನಿರುವಾಚ॥ ಶೃತಯಸ್ತ್ವಾಂವದಿಷ್ಯಂತಿ

ಸೂತಃ-ಸೂತಮುನಿಯು ಹೇಳುತ್ತಲಿದ್ದಾನೆ ॥ ಸರ್ವೇ-ಸಮಸ್ತರಾದ, ರುಷಯಃ-ರುಷಿಗಳು, ಶೃಣುಧ್ವಂ-ಕೇಳುವವರಾಗಿ, ವೈಖಾನಸಾಭಿಧಃ-ವೈಖಾನಸನೆಂಬ ಹೆಸರುಳ್ಳ ಮುನಿಃ-ಮುನಿಯು, ಸರ್ವಮಾನವೈಃ ಸಮಸ್ತ ಜನರಿಂದ, ದುಷ್ಕರಂ-ಮಾಡಲಶಕ್ಯವಾದ, ತಪಃ-ತಪಸ್ಸನ್ನು ಸುಚಿರಂ-ಬಹುಕಾಲದವರಿಗೂ, ಚಚಾರ-ಮಾಡುತ್ತಿದ್ದನು ॥ ತಾ ॥ ಎಲೈ ಸಮಸ್ತರುಷಿಗಳಿರಾ, ಕೇಳುವವರಾಗಿ, ಪೂರ್ವದಲ್ಲಿ ವೈಖಾನಸನೆಂಬ ರುಷಿಯು ಸಮಸ್ತಜನರಿಂದಲೂ ಮಾಡಲಸಾಧ್ಯವಾದ ತಪಸ್ಸನ್ನು ಬಹುಕಾಲದವರಿಗೂ ಮಾಡಿದವನಾದನು॥ ॥೧॥

ತದಾ-ಆಗ, ಭಗವಾನ್-ಪೂಜ್ಯನಾದ, ನಿರಾಮಯಃ-ನಿರೋಗಿಯಾದ ಶ್ರೀನಿವಾಸಃ-ಶ್ರೀನಿವಾಸನು, ಬ್ರಹ್ಮನ್-ಎಲೈ ಬ್ರಾಹ್ಮಣನಾದ ವೈಖಾನಸಮುನಿಯೇ, ಕಿಮರ್ಥಂ-ಯಾತಕ್ಕೆ, ತಪ್ಯತೆ-ನಿಂನ್ನಿದ ತಪಸ್ಸುಮಾಡಲ್ಪಡುತ್ತೆ, ತೆ-ನಿನ್ನ, ಮನಸಿ-ಮನಸ್ಸಿನಲ್ಲಿ, ಕಾಂಕ್ಷಿತಂ-ಅಪೇಕ್ಷಿಸುವುದು, ಯತ್-ಯಾವದು ॥ ಮುನಿಪುಂಗವ-ರುಷಿಶ್ರೇಷ್ಠನಾದ ವೈಖಾನಸಮುನಿಯೇ, ತತ್-ಅದನ್ನು, ಮಮ-ನನಿಗೆ, ಆಚಕ್ಷ್ವ-ಹೇಳು, ದಾಸ್ಯಾಮಿ-ಕೊಡುತ್ತೇನೆ॥ ತಾ ॥ ಆಗ ಪೂಜ್ಯನಾದ ಶ್ರೀನಿವಾಸನು ಪ್ರಸನ್ನನಾಗಿ ಎಲೈ ರುಷಿಶ್ರೇಷ್ಠನಾದ ಬ್ರಾಹ್ಮಣನಾದ ವೈಖಾನಸಮುನಿಯೇ, ಯಾತಕ್ಕೆ ತಪಸ್ಸನ್ನು ಮಾಡುತ್ತೀ ನಿನ್ನಮನ ನ ಲ್ಲಿ ಏನಿರುವದು, ಅದಂನು ನನಿಗೆ ಹೇಳುವವನಾಗು ನಾನು ಕೊ ಡುತ್ತೇನೆ ॥

ವೈಖಾನಸಃ॥ ವೈಖಾನಸರುಷಿಯು ಹೇಳುತ್ತಲಿದ್ದಾನೆ॥ ಶೃ ಶೃತ್ಯಭಿಮಾನದೇವತೆಗಳು, ತ್ವಾಂ-ನಿಂನಂನು,ನಿರ್ಗುಣಂ-ಗು ನನ್ನಾಗಿಯೂ, ತಥಾ-ಹಾಗೆ, ಸಗುಣಂ-ಗುಣಯುಕ್ತನಾದ

ನಿರ್ಗುಣಂಸಗುಣಂತಥಾ। ಯತ್ತತ್ತ್ವಂತತ್ಸಮಾಚಕ್ಷ್ವಶಾ
ಸ್ತ್ರಾಣಾಂಚೈವನಿಶ್ಚಯಂ ॥೩॥ ಶ್ರೀಭಗವಾನುವಾಚ ॥
ಅಹಂಹೇಯಗುಣೈರ್ಹೀನಃಕಲ್ಯಾಣಗುಣಸಂಯುತಃ। ಲೀ
ಲಾವಿಗ್ರಹಯುಕ್ತಶ್ಚಸೃಷ್ಟ್ಯಸ್ಥಿತ್ಯಂತಕಾರಕಃ॥೪॥ ಮದ್ವಿ
ಭೂತಿಂಪ್ರವಕ್ಷ್ಯಾಮಿಶೃಣುಷ್ವೈಕಮನಾಮುನೇ । ಭೂತಾ

ಗಿಯೂ, ವದಿಷ್ಯಂತಿ-ಹೇಳುತ್ತಲಿವೆ, ಯತ್-ಯಾವದು, ತತ್ತ್ವಂ-ಸತ್ಯ ವಾದದ್ದೊ, ತತ್-ಅದನ್ನು, ಶಾಸ್ತ್ರಾಣಾಂ-ಶಾಸ್ತ್ರಗಳ, ನಿಶ್ಚಯಂ ನಿಜವಂನು, ಸಮಾಚಕ್ಷ್ವ-ಹೇಳುವವನಾಗು ॥ ತಾ ॥ ಎಲೈ ಸ್ವಾಮಿ ಯೇ; (ಸತ್ಯಂಜ್ಞಾನಮನಂತಂಬ್ರಹ್ಮ)ಎಂಬುವದಾದಶೃತಿಗಳು ಸತ್ಯ ಜ್ಞಾನಾದಿ ಗುಣಯುಕ್ತ ನೆಂಬದಾಗಿ ಹೇಳುವವು ನಿರ್ಗುಣಂ-ನಿಷ್ಕ್ರಿ ಯಂ-ಸಾಕ್ಷೀಚೇತಾಕೇವಲೋನಿರ್ಗುಣಶ್ಚ ಎಂಬುವದಾದಶೃತಿಗಳು ಗು ಣರಹಿತನೆಂಬದಾಗಿ ಹೇಳುತ್ತವೆ ॥ ಶಾಸ್ತ್ರಗಳಲ್ಲಿ ಯಾವಶಾಸ್ತ್ರವು ಸ ತ್ಯವಾದದ್ದೊ ಅದನ್ನು ತಿಳಿಯಬೇಕಾದ ಗೂಢತತ್ತ್ವವನ್ನು ನನಗೆ ಹೇ ಳುವವನಾಗು ॥ವಿ॥ಇಲ್ಲಿ ದ್ವೈತಿಗಳು ನಿರ್ಗುಣನಂದರೆ ಹೇಯಗುಣರಹಿತ ನೆಂಬದಾಗಿ ಅರ್ಥಮಾಡುವರು, ಸಗುಣನೆಂಬುವದಕ್ಕೆ ಕಲ್ಯಾಣಗುಣ ಪರಿಪೂರ್ಣನೆಂಬದಾಗಿಯೂ, ಸಆತ್ಮಾತತ್ವಮಸಿ ಎಂಬುವ ವಾಕ್ಯದಲ್ಲಿ ಅತತ್ವಮಸಿ ಎಂಬದಾಗಿಪದವನ್ನು ಮಾಡಿಕೊಂಡು, ಅತತ್-ತ್ವಂ-ಅಸಿ ಎಂಬದಾಗಿ ಮಾಡಿಕೊಂಡು; ತ್ವಂ-ನೀನು, ಅತತ್-ಬ್ರಹ್ಮನಲ್ಲದವ ನು, ಅಸಿ-ಆಗಿದ್ದೀ ಎಂಬದಾಗಿ ಅರ್ಥಮಾಡುತ್ತಾರೆ ॥ ಅದ್ವೈತಿಗಳು ತತ್-ತ್ವಂ-ಅಸಿ-ಎಂಬದಾಗಿ ಮೂರುಪದವಾಗಿ ಭಾಗಿಸಿ,ತ್ವಂ-ನೀನು, ತತ್-ಆ ಬ್ರಹ್ಮವೇ-ಅಸಿ-ಆಗಿದ್ದೀ ಎಂಬದಾಗಿ ಅಹಂಬ್ರಹ್ಮಾಸ್ಮಿ-ಸ ರ್ವಂಖಲ್ವಿದಂಬ್ರಹ್ಮ, ಎಂಬ ಶೃತಿಗಳಂತೆ ವಿಶೇಷವಾದ ಅರ್ಥವನ್ನು ...ತ್ತಾರೆ॥ ॥೩॥

...ಗವಾನುವಾಚ॥ಶ್ರೀನಿವಾಸನು ಹೇಳುತ್ತಲಿದ್ದಾನೆ॥ಅಹಂ-ನಾನು ...ಣೈಃಅಜ್ಞಾನಾದಿಗುಣಗಳಿಂದ, ಹೀನಃ-ರಹಿತನಾದವನು,ಕ ...ಣ-ಸತ್ಯಜ್ಞಾನಾನಂದರೂಪಗುಣಗಳಿಂದ, ಸಂಯುತಃ-ಕೂ ...ಲೀಲಾವಿಲಾಸಾರ್ಥವಾದ, ವಿಗ್ರಹ-ಶರೀರದಿಂದ,ಯುಕ್ತಶ್ಚ-

ನಾಮಹಮೇವಾದಿಃರುದ್ರಾಣಾಂಶಂಕರೋಸ್ಮ್ಯಹಂ ॥೫॥ ಧ
ನುರ್ಧರಾಣಾಂರಾಮೋಹಂವರ್ಣಾನಾಂಪ್ರಣವೋಸ್ಮ್ಯಹಂ।
ಯಕ್ಷಾಣಾಂತ್ರ್ಯಂಬಕಸಖಃಕಾಮಧೇನುರ್ಗವಾಂಗಣೇ॥೬॥

ಸರ್ವೇತನಾದವನು, ಸೃಷ್ಟಿಸ್ಥಿತ್ಯಂತಕಾರಕಃ–ಸೃಷ್ಟಿಸ್ಥಿತಿಲಯಗಳನ್ನು ಮಾಡಲು ಕಾರಣಭೂತನಾದವನು॥ತಾ॥ ನಾನು ಹೇಯಗುಣರಹಿತನಾಗಿಯೂ, ಕಲ್ಯಾಣಗುಣಗಳಿಂದ ಪೂರ್ಣ್ಣನಾಗಿಯೂ, ವಿಲಾಸಾರ್ಥವಾದ ದೇಹದಿಂದ ಯುಕ್ತನಾಗಿಯೂ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿಯೂ ಇರುವವನಾಗಿದ್ದೇನೆ॥ ಅದ್ವೈತಮತವಲ್ಲ॥ ಅಹಂ–ನಾನು; ಲೀಲಾವಿಗ್ರಹಯುಕ್ತಶ್ಚ–ಸೃಷ್ಟಿಸ್ಥಿತಿಲಯಗಳಿಗೆಅನುಗುಣವಾಗಿ ಗುಣವೃತ್ತಿಯನ್ನು ಅನುಸರಿಸಿ ದುಷ್ಟಶಿಕ್ಷೆಗಾಗಿಯೂ,ಶಿಷ್ಟರಪರಿಪಾಲನೆಗಾಗಿಯೂ ಕಲ್ಪಿತಲೀಲಾರೂಪಯುಕ್ತನಾಗಿ, ಸದ್ಗುಣಸಂಪನ್ನನಾಗಿ, ಅಯೋಗ್ಯಗುಣಗಳಿಲ್ಲದವನಾಗಿ, ಸೃಷ್ಟಿಸ್ಥಿತಿಲಯಗಳನ್ನು ಮಾಡಲು ನಾಮರೂಪಕ್ರಿಯೆಗಳುಳ್ಳವನಾಗಿ, ಕಾಣಿಸುತ್ತೇನೆ ॥ ವಾಸ್ತವವಾಗಿ ಗುಣವೃತ್ತಿಗಳ ಸಂಬಂಧವು ನನಗೆ ಉಂಟಾಗಿರುವದಿಲ್ಲ ॥ ॥೪॥

ಮುನೇ–ಮನನಶೀಲನಾದ ವೈಖಾನಸ ಋಷಿಯೇ, ಮದ್ವಿಭೂತಿಂ–ನನ್ನ ವಿಭೂತಿಯನ್ನು, ಪ್ರವಕ್ಷ್ಯಾಮಿ–ಹೇಳುತ್ತೇನೆ, ಏಕಮನಾಃ–ಒಂದೇ ಮನಸ್ಸುಳ್ಳವನಾಗಿ, ಶೃಣುಷ್ವ–ಕೇಳು, ಭೂತಾನಾಂ–ಭೂತಗಳೊಳಗೆ, ಅಹಮೇವ–ನಾನೇ, ಆದಿಃ–ಮೊದಲನೆಯವನಾಗಿರುತ್ತೇನೆ, ರುದ್ರಾಣಾಂ–೧೧ಮಂದಿ ರುದ್ರರೊಳಗೆ, ಶಂಕರಃ–ಶಂಕರನೆಂಬ ರುದ್ರನು, ಅಹಂ–ನಾನು, ಅಸ್ಮಿ–ಆಗಿದ್ದೇನೆ ॥ ತಾ ॥ ಎಲೈ ವೈಖಾನಸಮುನಿಯೇ ನನ್ನ ವಿಭೂತಿ ವಿಸ್ತರವಂನು ಹೇಳುತ್ತೇನೆ ಒಂದೇ ಮನಸ್ಸುಳ್ಳವನಾಗಿ ಕೇಳು ॥ ಸ್ಥಾವರಜಂಗಮಾತ್ಮಕವಾದ ಭೂತಗಳೊಳಗೆ ನಾನು ಮೊದಲನೆಯವನು, ಹನ್ನೊಂದು ಮಂದಿ ರುದ್ರರೊಳಗೆ ಶಂಕರನೆಂಬ ರುದ್ರನು ನಾನಾಗಿದ್ದೇನೆ ॥

ಧನುರ್ಧರಾಣಾಂ–ಬಿಲ್ಲನ್ನು ಹಿಡಿದವರೊಳಗೆ, ಅಹಂ–ನಾಮಃ–ರಾಮಚಂದ್ರನಾಗಿದ್ದೇನೆ,ವರ್ಣ್ಣಾನಾಂ–ಅಕಾರಾದಿಕ್ಷಕಾರಾತ್ಮಕಾವರ್ಣಗಳೊಳಗೆ, ಅಹಂ–ನಾನು, ಪ್ರಣವಃ–ಓಂಕಾರ

ತೆಜಸ್ವಿನಾಂತಧಾಸೂರ್ಯಃವಸೂನಾಂಪಾವಕಃ
ಗುರೂಣಾಂಗೀಷ್ಪತಿಶ್ಚಾಸ್ಮಿಸರಸಾಂಚೈವಸಾ?
ಪಿತೄಣಾಮರ್ಯಮಾಚಾಸ್ಮಿಸರ್ಪಾಣಾಂಚಾಪಿವಾಸು
ಅನಂತಶ್ಚಾಸ್ಮಿನಾಗಾನಾಂವರುಣೋಯಾದಸಾಮಹಂ॥೪
ಪರ್ವತಾನಾಂಮೇರುರಹಂಮಹರ್ಷೀಣಾಂಭೃಗುಸ್ತಧಾ ।
ಸೇನಾನೀನಾಂಷಣ್ಮುಖಶ್ಚವೃಕ್ಷಾಣಾಂಕಲ್ಪವೃಕ್ಷಕಃ ॥೯॥
ಯದ್ಯತ್ಶ್ರೇಯಸ್ಕರಂವಸ್ತುತನ್ಮದಂಶಾನುಬೃಂಹಿತಂ ।
ಮದಧೀನಮಿದಂಸರ್ವಂಜಗತ್ಸ್ಥಾವರಜಂಗಮಂ॥ ೧೦ ॥

ರುತ್ತೇನೆ, ಯಕ್ಷಾಣಾಂ-ಯಕ್ಷರೊಳಗೆ, ತ್ರ್ಯಂಬಕಸಖಃ-ಕುಬೇರನಾಗಿದ್ದೇನೆ ॥ ಗವಾಂಗಣೇ-ಗೋಸಮೂಹದಲ್ಲಿ, ಕಾಮಧೇನುಃ-ಕಾಮಧೇನುವಾಗಿರುತ್ತೇನೆ॥ ॥೬॥

ತೇಜಸ್ವಿನಾಂ-ಪ್ರಕಾಶವುಳ್ಳವರೊಳಗೆ, ತಧಾ-ಹಾಗೆ, ಸೂರ್ಯಃ-ಸೂರ್ಯನಾಗಿದ್ದೇನೆ, ವಸೂನಾಂ-ವಸುಗಳೊಳಗೆ,ಅಹಂ-ನಾನು, ಪಾವಕಃ-ಪಾವಕನಾಗಿರುತ್ತೇನೆ, ಗುರೂಣಾಂ-ಗುರುಗಳೊಳಗೆ, ಗೀಷ್ಪತಿಶ್ಚ-ಬೃಹಸ್ಪತಿಯೋ, ಅಸ್ಮಿ-ಆಗಿದ್ದೇನೆ, ಸರಸಾಂ-ಸರಸ್ಸುಗಳೊಳಗೆ, ಸಾಗರಃ-ಸಮುದ್ರನಾಗಿರುತ್ತೇನೆ ॥೭॥ ಪಿತೄಣಾಂ-ಪಿತೃದೇವತೆಗಳೊಳಗೆ, ಅರ್ಯಮಾ-ಅರ್ಯಮನಾಗಿದ್ದೇನೆ, ಸರ್ಪಾಣಾಂ-ಸರ್ಪಗಳೊಳಗೆ, ವಾಸುಕಿಃ-ವಾಸುಕಿಯೆಂಬ ಸರ್ಪವಾಗಿದ್ದೇನೆ, ನಾಗಾನಾಂ-ನಾಗಸರ್ಪಗಳೊಳಗೆ, ಅನಂತಶ್ಚ-ಅನಂತನೆಂಬ ಸರ್ಪವು, ಅಸ್ಮಿ-ಆಗಿದ್ದೇನೆ, ಯಾದಸಾಂ-ಸಮುದ್ರಪ್ರಾಣಿಗಳೊಳಗೆ, ವರುಣಃ-ವರುಣನು, ಅಸ್ಮಿ-ಆಗಿದ್ದೇನೆ॥೪॥ ಸೇನಾನೀನಾಂ-ಸೇನಾಧಿಪತಿಗಳೊಳಗೆ, ಅಹಂ-ನಾನು, ಷಣ್ಮುಖಶ್ಚ-ಕುಮಾರಸ್ವಾಮಿಯಾಗಿರುತ್ತೇನೆ, ವೃಕ್ಷಾಣಾಂ-ಮರಗಳೊಳಗೆ, ಕಲ[illegible]ಕ್ಷಕಃ-ಕಲ್ಪವೃಕ್ಷವಾಗಿರುತ್ತೇನೆ ॥೯॥ ಯದ್ಯತ್-ಯಾವದು[illegible], ಶ್ರೇಯಸ್ಕರಂ-ಶ್ರೇಯಸ್ಸನ್ನುಂಟುಮಾಡುವ ವಸ್ತುವಾಗಿ[illegible]ತ್-ಅದು, ಮದಂಶ-ನನ್ನ ಅಂಶೆಯಿಂದ, ಅನುಬೃಂಹಿತಂ-[illegible]ಾದ್ದಾಗಿರುತ್ತೆ, ಸ್ಥಾವರಜಂಗಮಂ-ಸ್ಥಾವರಜಂಗಮವೂ, [illegible]ರ್ವಂ-ಸಮಸ್ತವಾದ, ಇದಂ-ಈ, ಜಗತ್-ಪ್ರಪಂಚ[illegible], ಅಧೀನಂ-ಸ್ವಾಧೀನವಾದದ್ದು ॥ ॥೧೦॥

ನಾಮುಹಮೆವಾ
ಲಂಜಾತಂಮಯಿಸರ್ವಂಪ್ರತಿಷ್ಠಿತಂ । ಮಾ
ನುರ್ಧರಾಣ್ಣ
ಯಕ್ಷ್ಮಾ ತುಮದ್ಭಕ್ತೋನಪುನರ್ಜಾಯತೇಭುವಿ ॥೧೧॥ ಬ್ರ
ಹ್ಮಾದಿಲೋಕಾಸ್ಸಕಲಾಃಪುನರಾವರ್ತಿಸಂಯುತಾಃ।ತಿಷ್ಠಂ
ಸವೋತ್ತಸ್ಗಚ್ಛನ್‌ಸ್ವಪನ್‌ವಾಪಿಮಾಂಧ್ಯಾಯೇತ್ಸರ್ವದಾನರಃ॥೧೨
ಮಾಡ
ಸಕಲೇಷ್ವಪಿಯಜ್ಞೇಷುಜಪಯಜ್ಞೋಹಿಮೇಪ್ರಿಯಃ।ಜಪಾ
ಠ
ತ್ಸಿದ್ಧಿರ್ಜಪಾತ್ಸಿದ್ಧಿರ್ಜಪಾತ್ಸಿದ್ಧಿರ್ನಸಂಶಯಃ ॥ ೧೩ ॥

ಮುಕಿವ-ನನ್ನಿಂದಲೆ, ಸಕಲಂ-ಸಮಸ್ತವೂ, ಜಾತಂ-ಹುಟ್ಟಿ ತು,ಮಯಿ-ನನ್ನಲ್ಲಿಯೇ, ಸರ್ವಂ-ಸಮಸ್ತವು, ಪ್ರತಿಷ್ಠಿತಂ-ಇರುವಂ ಥಾದ್ದಾಗಿಧೆ, ಮದ್ಭಕ್ತಃ-ನನಿಗೆ ಭಕ್ತನಾದವನು, ಮಾಂ-ನನ್ನನ್ನು, ಉ ಪೇತ್ಯ-ಹೊಂದಿ, ಪುನಃ-ತಿರಿಗಿ, ನಜಾಯತೆ-ಹುಟ್ಟುವವನಾಗುವದಿ ಲ್ಲ ॥ ತಾ ॥ ನನ್ನಿಂದಲೇ ಸಮಸ್ತಪ್ರಪಂಚವು ವುಂಟು ಮಾಡಲ್ಪಟ್ಟಿಧೆ, ಮತ್ತು ನನ್ನಲ್ಲಿಯೇ ಇರುತ್ತೆ, ಭಕ್ತನಾದವನು ನನ್ನನ್ನು ಹೊಂ ದಿದ ಬಳಿಕ ಪುನಃತಿರಿಗಿ ಭುವಿ-ಭೂಮಿಯಲ್ಲಿ,ಜಾಯತೆ-ಹುಟ್ಟುವವನಾ ಗುವದಿಲ್ಲ॥ ॥೧೧॥

ಸಕಲಾಃ-ಸಮಸ್ತಗಳಾದ, ಬ್ರಹ್ಮಾದಿಲೋಕಾಃ-ಬ್ರಹ್ಮನೆ ಆದಿ ಯಾದವರ ಲೋಕಗಳು, ಪುನಃ-ತಿರಿಗಿ, ಆವರ್ತಿ-ಬರುವಿಕೆಯಿಂ ದ, ಸಂಯುತಾಃ-ಕೂಡಿರುತ್ತವೆ, ನರಃ-ಮನುಷ್ಯನು, ತಿಷ್ಠನ್-ಇರು ವವನಾಗಿ, ಗಚ್ಛನ್-ಹೋಗುತ್ತಿರುವವನಾಗಿ, ಸ್ವಪನ್ನಾಪಿ-ಮಲಗಿರು ವವನಾಗಿದ್ದಾಗ್ಯೂ, ಸರ್ವದಾ-ಯಾವಾಗಲೂ, ಮಾಂ-ನನ್ನನ್ನು, ಧ್ಯಾಯೆತ್-ಧ್ಯಾನವಂನು ಮಾಡಬೇಕು ॥ತಾ॥ ಬ್ರಹ್ಮಲೋಕನೇ ಮೊದ ಲಾದ ಸಮಸ್ತ ಲೋಕಗಳು ಪುನರಾವರ್ತಿಯಿಂದ ಕೂಡಿರುವವು, ಆ ದ್ದರಿಂದ ಕೂತಿರುವವನಾದಾಗ್ಯೂ, ಮಲಗಿರುವವನಾದಾಗ್ಯೂ ಮ ನುಷ್ಯನುಯಾವಾಗಲೂ ನನ್ನನ್ನುಧ್ಯಾನಮಾಡುವವನಾಗಬೇ

ಸಕಲೇಷು-ಸಮಸ್ತಗಳಾದ, ಯಜ್ಞೇಷು-ದ್ರವ್ಯಯಜ್ಞ ಯಜ್ಞ, ಸ್ವಾಧ್ಯಾಯಯಜ್ಞ, ತಪೋಯಜ್ಞ, ಜ್ಞಾನಯ ತಾದಯಜ್ಞಗಳೊಳಗೆ, ಜಪಯಜ್ಞಃ-ಮಂತ್ರಜಪರೂಪ ವು, ಮೆ-ನನಿಗೆ, ಪ್ರಿಯಃ-ಇಷ್ಟಕರವಾದವ್ದು, ಹಿ-

ಜಪಯಜ್ಞಂಸಮುತ್ಸೃಜ್ಯಜ್ಞಾನಾಭಾಸೇಯುತಾನರಾಃ|
ಡಾಂಭಿಕಾಸ್ತೇಗಮಿಷ್ಯಂತಿನರಕಾನ್ಸುಬಹೂನ್ಮುನೇ||೧೮||
ಪರ್ವತೇಸ್ಮಿನ್ಸ್ಥಿತಸ್ತ್ವಂತುಮಾಂಭಜಸ್ವಸುನಿಶ್ಚಯಃ|ಮಾ

ತ್_ಜಪದಿಂದ. ಸಿದ್ಧಿಃ-ಸಿದ್ಧಿಯಾಗುವದು, ಈ ಅರ್ಥದಲ್ಲಿ ಸಂಶಯವಿಲ್ಲವು ||ತಾ|| ಸಮಸ್ತಗಳಾದ ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಅತಿರಾತ್ರ,ವಾಜಪೇಯ,ಪೌಂಡರೀಕ, ಆಪ್ತೋರ್ಯಾಮ, ಅಶ್ವಮೇಧ, ಹೋಮಾದಿ ದ್ರವ್ಯಯಜ್ಞಗಳಿಗಿಂತಲೂ, ಕೃಛ್ರಚಾಂದ್ರಾಯಣಾದಿರೂಪವಾದ ತಪೋಯಜ್ಞಕ್ಕಿಂತಲೂ,,ರೇಚಕ ಪೂರಕ ಕುಂಭಕಾದಿಗಳಿಂದಲುಂಟಾಗುವ ಯೋಗಯಜ್ಞಗಳಿಗಿಂತಲೂ, ವೇದಾಧ್ಯಯನ 'ಮುಂತಾದ ಸ್ವಾಧ್ಯಾಯಯಜ್ಞಕ್ಕಿಂತಲೂ, ಕಾಮನಾಪರಿತ್ಯಾಗಪೂರ್ವಕವಾಗಿಮಾಡಲ್ಪಟ್ಟ ಕರ್ಮಾಚರಣೆಯಿಂದುಂಟಾದ ನಿತ್ಯಾನಿತ್ಯ ವಸ್ತುವಿವೇಕವು, ಇಹಾಮುತ್ರಾರ್ಥ ಫಲಭೋಗ ವಿರಾಗವು,ಶಮಾದಿ ಷಟ್ಕಸಂಪತ್ತಿಯು ಮುಮುಕ್ಷುತ್ವವೆಂಬಸಾಧನಚತುಷ್ಟಯಸಂಪತ್ತಿಯುಳ್ಳವನಾಗಿ,ಜ್ಞಾನಯಜ್ಞಪರನಾದವನಿಂದ, ಚರಿಸಲು ಅರ್ಹವಾದ ಜ್ಞಾನಯಜ್ಞಕ್ಕಿಂತಲೂ ಮಂತ್ರಜಪರೂಪವಾದ ಜಪಯಜ್ಞವೇ ನನಗೆ ಮುಖ್ಯವಾಗಿ ಪ್ರೀತಿಕರವಾದದ್ದು, ಆದ್ದರಿಂದ ಜಪದಿಂದಲೇ ಸಕಲವೂ ಸಿದ್ಧಿಸುವುದು, ಸಂಶಯವಿಲ್ಲವು || ಯಜ್ಞಾನಾಂಜಪಯಜ್ಞೋಸ್ಮೀತಿಗೀತಾಯಾಂ||೧೭||

ಮುನೇ_ಮನನಶೀಲನಾದ ವೈಖಾನಸಮುನಿಯೆ, ಜಪಯಜ್ಞಂ-ಜಪಯಜ್ಞವನ್ನು, ಸಮುತ್ಸೃಜ್ಯ-ಬಿಟ್ಟು, ಜ್ಞಾನ-ಜ್ಞಾನದ, ಆಭಾಸ_ವ್ಯತ್ಯಾಸದಿಂದ,ಯುತಾಃ_ಕೂಡಿದವರಾದ,ನರಾಃ-ಮನುಷ್ಯರು, ಡಾಂಭಿಕಾಃ_ಡಂಭವುಳ್ಳವರಾದ, ಯಾರಾದಾಗ್ಯೂ, ತೇ_ಅವರು, ಸುಬಹೂನ್-ಅನೇಕಗಳಾದ, ನರಕಾನ್_ನರಕಗಳನ್ನು, ಗಮಿಷ್ಯಂತಿ-ಹೊಂದುವವರಾಗುತ್ತಾರೆ ||ತಾ|| ಜಪಯಜ್ಞವನ್ನು ಬಿಟ್ಟು ವ್ಯತ್ಯಸ್ತಜ್ಞಾನವುಳ್ಳ ಡಾಂಭಿಕರಾದ ದ್ವಿಜರು ಅನೇಕಗಳಾಗಿರುವ ನರಕಗಳಲ್ಲಿಬಿದ್ದು ಡುವರು|| ||೧೮||

೧-ನೀನಾದರೇನೊ, ಅಸ್ಮಿನ್—ಈ, ಪರ್ವತೇ-ವೆಂಕಟಾದ್ರಿಯಲ್ಲಿ ರುವವನಾಗಿ, ಸುನಿಶ್ಚಯಃ_ಒಳ್ಳೇ ನಿಶ್ಚಯವುಳ್ಳವನಾಗಿ

ಮಾಮುಪೈಷ್ಯಸಿದೇಹಾಂತೇವೈಕುಂಠಾಖ್ಯಂಪರಂಪದಂ ॥ ೧೫ ॥
ಅನ್ಯದ್ವಕ್ಷ್ಯಾಮಿತೇಬ್ರಹ್ಮನ್‌ಕಾಲಕರ್ಮವಿಪರ್ಯಯಂ।ಯಂ

ಮಾಂ-ನನ್ನನ್ನು, ಭಜಸ್ವ-ಸೇವಿಸು, ದೇಹಾಂತೇ-ಈ ದೇಹವು ಹೋದಬಳಿಕ, ವೈಕುಂಠಾಖ್ಯಂ-ವೈಕುಂಠವೆಂಬ ಹೆಸರುಳ್ಳ, ಪರಂ-ಉತ್ಕೃಷ್ಟವಾದ, ಪದಂ-ಸ್ಥಾನವನ್ನು, ಪ್ರಾಪ್ಯ-ಶೇರಿ, ಮಾಮೇವ-ನನ್ನನ್ನೆ, ಉಪೈಷ್ಯಸಿ-ಹೊಂದುತ್ತಲಿದ್ದೀ ॥ತಾ॥ ನೀನಾದರೇನೋ ಈ ವೆಂಕಟಾದ್ರಿಯಲ್ಲಿ ಇದ್ದುಕೊಂಡು, ನಿಶ್ಚಯವುಳ್ಳವನಾಗಿ, ನನ್ನನ್ನು, ಸೇವಿಸುವವನಾಗು, ನಿನ್ನ ದೇಹವು ಹೋದಮೇಲೆ ವೈಕುಂಠವೆಂಬ ನಂನ ಉತ್ಕೃಷ್ಟಸ್ಥಳವನ್ನು ಶೇರಿ ಅಲ್ಲಿ ನಂನ ಅನುಗ್ರಹದಿಂದ ನನ್ನಲ್ಲಿ ಐಕ್ಯವಾಗುತ್ತೀ ॥ ॥೧೫॥

ಬ್ರಹ್ಮನ್-ಬ್ರಾಹ್ಮಣನಾದವೈಖಾನಸಮುನಿಯೆ, ಅನ್ಯತ್-ಮತ್ತೊಂದನ್ನು, ವಕ್ಷ್ಯಾಮಿ-ಹೇಳುತ್ತಲಿದ್ದೇನೆ, ಅಸ್ಮಿನ್-ಈ, ಕಲಾವಪಿ-ಕಲಿಯುಗದಲ್ಲಿಯೂ, ತ್ವಂ-ನೀನು, ಯಂ-ಯಾವ, ಕಾಲಕರ್ಮವಿಪರ್ಯಯಂ-ಕಾಲ-ಸಮಯದ, ಕರ್ಮ-ಕೆಲಸಗಳ, ವಿಪರ್ಯಯಂ-ವ್ಯತ್ಯಾಸವನ್ನು, ಜ್ಞಾತ್ವಾ-ತಿಳಿದು; ತೇ-ನಿನಗೆ, ಜ್ಞಾನವಿಪ್ಲವಃ-ಸುಜ್ಞಾನವಿಲ್ಲದೇ ಹೋಗೋಣವು, ನಸ್ಯಾತ್-ಉಂಟಾಗುವದಿಲ್ಲವೊ, ತತ್-ಅದನ್ನು-ವಕ್ಷ್ಯಾಮಿ-ನಿನಗೆ ಹೇಳುತ್ತೇನೆ ॥ ತಾ ॥ ಎಲೈ ವೈಖಾನಸಮುನಿಯೇ ನಿನಗೆ ಮತ್ತೊಂದು ಸಂಗತಿಯನ್ನು ಹೇಳುತ್ತೇನೆ ಕೇಳು. ಈ ಕಲಿಯುಗದಲ್ಲಿ ನೀನು, ಯಾವ ಕಾಲಕರ್ಮಗಳ ವ್ಯತ್ಯಾಸವನ್ನು ತಿಳಿದವನಾದರೆ ಜ್ಞಾನ ಭ್ರಷ್ಟನಾಗುವದಿಲ್ಲವೊ-ಅದನ್ನೂ ಹೇಳುತ್ತೇನೆ ॥ ವರ್ಷ ಋತು ಧರ್ಮಗಳು ಸರಿಯಾಗಿ ನಡಿಯದೆ ಬದಲಾಯಿಸಿ ಮಳೆಯಿಲ್ಲದೆ ಜಲಾಶಯಗಳು ಒಣಗಿ ನೀರಿಲ್ಲದೆ ಹೋಗುವದೇ ಕಾಲವಿಪರ್ಯಯವೆನಿಸುವದು, ಬ್ರಾಹ್ಮಣಾದಿವರ್ಣಗಳು ನೀಚಜಾತಿಯಶಿಷ್ಯರಾಗಿ ಅವರಿಂದ ಉಪದೇಶಬೋಧನೆ ಮುಂತಾದ್ದನ್ನು ಮತಕಥೆಯೆಂಬ ವ್ಯಾಜದಿಂದ ಅಶ್ರಾವ್ಯಗಳಾದ ಉಪಕಥೆಗಳನ್ನು ಧರ್ಮಕ್ಕೆ ಸರಿಯಾಗಿ ಕೇಳೋಣವು, ಬ್ರಾಹ್ಮಣ ವರ್ಣೋ(ದಧರ್ಮಗಳನ್ನು ಬಿಟ್ಟು ಹೊಣವ್ಲೆಚ್ಛಾಚಾರಕ್ಕೆ ಅನುಗು

ಜ್ಞಾತ್ವಾತ್ವಂಕಲಾವಸ್ಮಿನ್ತೇನಸ್ಯಾಜ್ಞಾನವಿಪ್ಲವಃ ॥೧೮॥
ಯುಗಧರ್ಮಾನ್ಕಾಲಧರ್ಮಾನ್ದೇಶಧರ್ಮಾನ್ಸ್ತುಶಾಶ್ವತಾನ್ ।
ಜ್ಞಾತ್ವಾವಿವೇಕತೋಮರ್ತ್ಯೋಯಾತಿಮೇಪರಮಂಪದಂ॥೧೯॥

ಕ್ರಿಯೆಗಳನ್ನು ಮಾಡೋಣವೇ ಕರ್ಮ ವಿಪರ್ಯಯವೆನಿಸುವದು, ಈ ಎರಡು ವಿಧದಿಂದ ಉತ್ತಮ ವರ್ಣದವರು ತೇಜೋಹೀನರಾಗುವರು, ಆಬಳಿಕ ಅಷ್ಟಶೂಲ, ಶಿವಶೂಲ, ಕೇಶಶೂಲಗಳೆಂಬ ಕಾರ್ಯಸಿರೆತರಾಗಿ ಹೋಗುವದೇ ಕಾಲ ಕರ್ಮವಿಪರ್ಯಯಗಳೆಂಬ ಭಾವವು॥ ॥೧೮॥

ಯುಗಧರ್ಮಾನ್ -ಆಯಾಯ ಯುಗಗಳಲ್ಲಿ ನಡಿಯಬೇಕಾದ ಧರ್ಮಗಳನ್ನು, ಕಾಲಧರ್ಮಾನ್-ಆಯಾಯ ಕಾಲಗಳಲ್ಲಿ ನಡಿಯಬೇಕಾದ ಧರ್ಮಗಳನ್ನು, ಶಾಶ್ವತಾನ್-ಸ್ಥಿರಗಳಾದ ದೇಶದರ್ಮಾನ್-ದೇಶಧರ್ಮಗಳನ್ನು, ಮರ್ತ್ಯಃ-ಮನುಷ್ಯನು, ವಿವೇಕತಃ-ಪ್ರಜ್ಞೆಯಿಂದ, ಜ್ಞಾತ್ವಾ-ತಿಳಿದು, ಮೇ-ನನ್ನ, ಪರಮಂ-ಉತ್ಕೃಷ್ಟವಾದ, ಪದಂ-ಸ್ಥಾನವನ್ನು, ಯಾತಿ-ಹೊಂದುತ್ತಲಿದ್ದಾನೆ ॥ ತಾ ॥ ಕೃತಾದಿ ಯುಗಗಳಲ್ಲಿ ಜನರು ೪೮ವರ್ಷ ಮುಂತಾದ ಕಾಲದವರಿಗೂ ಬ್ರಹ್ಮಚರ್ಯವ್ರತಪರರಾಗಿರಬೇಕೆಂಬದಾಗಿಯೂ, ಕಲಿಯುಗದಲ್ಲಿ ೧೨ ವರ್ಷ-೬-೩ವರ್ಷಗಳವರಿಗೆ ಬ್ರಹ್ಮಚರ್ಯ ನಿರತನಾಗಿರ ಬೇಕೆಂಬದಾಗಿಯೂ ನಿಯಾಮಕವಾಗಿರುವದೇ ಮುಂತಾದ ಯುಗ ಧರ್ಮಗಳನ್ನು, (ರಾಜಾಕಾಲಸ್ಯಕಾರಣಂ-) ಎಂಬಂತೆ, ಹೂಣ ಮ್ಲೇಚ್ಛಾದಿ ಆಳ್ವಿಕೆಯಲ್ಲಿ ವರ್ಣಾಶ್ರಮಾಚಾರಧರ್ಮಗಳು ಕೃತಾದಿ ಯುಗಗಳಲ್ಲಿ ನಡಿಸಿದಂತೆ ಕಲಿಯುಗದಲ್ಲಿ ನಡಿಸಲು ರಾಜನಿಯಾಮಕಕಾಲಪರತಂತ್ರರಾದ್ದರಿಂದ, ಕಾಲವನ್ನು ಅನುಸರಿಸಿ ಮಾಡಬೇಕಾದಸಂಧ್ಯಾವಂದನಾದಿ ಕೆಲಸಗಳನ್ನು, ನಿಯತಕಾಲವು ಅತಿಕ್ರಮಿಸಿ ಇದ್ದಾಗ್ಯೂ ಆ ದಿನ ತಕ್ಕಕಾಲದಲ್ಲಿಯೇ ಮಾಡಬೇಕಾದ ಸಂಧ್ಯಾದಿಕರ್ಮಗಳನ್ನು ಬೇರೆಕಾಮಾದರೂ ಬಿಡದೇ ಮಾಡುವದೇ ಕಾಲಧರ್ಮವೆನಿಸುವದು, ಅಂಥಾ ಧರ್ಮಗಳನ್ನು, ಬಹುಕಾಲದಿಂದ ಬಂದಿರುವದಾದ, ಆಯಾಯದೇಶಯಾಯಶಕೆಯೇ ಮುಖ್ಯವಾಗಿ ನಡಿಸತಕ್ಕದ್ದೆಂಬುವದಾದ ವಿಕ್ರಶಾಲಿವಾಹನ, ಶಕರೂಪವಾದದ್ದೇ ಮೊದಲಾದ ದೇಶಧರ್ಮಗಳನ್ನು ಮನುಷ್ಯನು ತಿಳಿದು ವಿವೇಕದಿಂದ ನಡಿಯುತ್ತಿರುವವನಾದರೆ ನನ್ನ ಉತ್ತಮವಾದ ವೈಕುಂಠಪದವನ್ನೇ ಸೇರುತ್ತಾನೆ॥ ॥೧೯

ಮನ್ನಾಭಿಕಮಲೇಜಾತಃ ಬ್ರಹ್ಮಾಸಾಕ್ಷಾಚ್ಚತುರ್ಮುಖಃ ।
ಸೋಸೃಜಜ್ಜಗದೇತಚ್ಚ ಸರ್ವಂಸ್ಥಾವರಜಂಗಮಂ॥೧೪॥ಸೋ
ಸೃಜತ್ಸನಕಾದೀಂಶ್ಚ ವಿರಕ್ತಾನ್ ಹಂಸಸಂಜ್ಞಿಕಾನ್ । ಪು
ಲಸ್ತ್ಯಾದೀನ್ ಮುನೀನ್ ಸಮ್ಯಕ್ ಸಸರ್ಜ ಭಗವಾನಜಃ॥೧೫॥
ಕೃತಂತ್ರೇತಾದ್ವಾಪರಂಚ ಕಲಿಶ್ಚೇತಿ ಚತುರ್ಯುಗಂ।ಹರಿಶ್ಚಂ

ಚತುರ್ಮುಖಃ-ನಾಲ್ಕು ಮುಖಗಳುಳ್ಳ, ಬ್ರಹ್ಮಾ-ಬ್ರಹ್ಮನು, ಸಾಕ್ಷಾತ್-ಪ್ರತ್ಯಕ್ಷವಾಗಿ, ಮನ್ನಾಭಿಕಮಲೇ-ಮನ್ನಾಭಿ-ನನ್ನ ಹೊಕ್ಕಳೆಂಬ ಕಮಲೇ-ಕಮಲದಲ್ಲಿ, ಜಾತಃ-ಹುಟ್ಟಿದನು॥ಸಃ-ಆಬ್ರಹ್ಮನು, ಏತತ್-ಈ ಸ್ಥಾವರಜಂಗಮಂ-ಸ್ಥಾವರಜಂಗಮಾತ್ಮಕವಾದ, ಜಗತ್-ಪ್ರಪಂಚವನ್ನು, ಅಸೃಜತ್-ಉಂಟುಮಾಡಿದನು ॥ ತಾ॥ ನನ್ನ ನಾಭೀಪದ್ಮದಲ್ಲಿ ನಾಲ್ಕು ಮುಖಗಳುಳ್ಳವನಾದ ಬ್ರಹ್ಮನು ಪ್ರತ್ಯಕ್ಷತಃ-ಹುಟ್ಟಿದವನಾಗಿ ಈ ಸ್ಥಾವರಜಂಗಮಾತ್ಮಕವಾದ ಪ್ರಪಂಚವನ್ನು ಸೃಜಿಸಿದನು॥೧೪॥

ಸಃ-ಆ ಬ್ರಹ್ಮನು, ವಿರಕ್ತಾನ್-ವೈರಾಗ್ಯ ಪುಳ್ಳವರಾದ, ಹಂಸಸಂಜ್ಞಿಕಾನ್-ಪರಹಂಸರೆಂಬದಾಗಿ ಪ್ರಸಿದ್ಧರಾದ, ಸನಕಾದೀಂಶ್ಚ-ಸನಕಾದಿ ಊರ್ಧ್ವರೇತಸ್ಕರಾದ ದರುಷಿಗಳನ್ನು, ಅಸೃಜತ್-ಸೃಷ್ಟಿಮಾಡಿದನು॥ ಭಗವಾನ್-ಪೂಜ್ಯನಾದ, ಅಜಃ-ಬ್ರಹ್ಮನು, ಸಮ್ಯಕ್-ಚನ್ನಾಗಿ, ಪುಲಸ್ತ್ಯಾದೀನ್-ಪುಲಸ್ತ್ಯಬ್ರಹ್ಮನೇ ಮೊದಲಾದ, ಮುನೀನ್-ಮನನಶೀಲರಾದವರನ್ನು, ಸಸರ್ಜ-ಸೃಷ್ಟಿಮಾಡಿದನು ॥ ತಾ॥ಆ ಬ್ರಹ್ಮನು ಈಷಣತ್ರಯವನ್ನು ಬಿಟ್ಟು ಊರ್ಧ್ವರೇತಸ್ಕರಾದ ಪರಹಂಸರಾಗಿರುವ ಸನಕ ಸನಂದನಾದಿಗಳನ್ನು ಮನನಶೀಲರಾಗಿ ಪ್ರವೃತ್ತಿ ಧರ್ಮವನ್ನು ಅನುಸರಿಸಿರುವ ಪುಲಸ್ತ್ಯಾದಿಗಳನ್ನು ಸೃಷ್ಟಿಮಾಡಿದನು॥ ॥೧೫

ಕೃತಂ-ತ್ರೇತಾ-ದ್ವಾಪರಃ-ಕಲಿಃ-ಇತಿ-ಎಂಬದಾಗಿ, ಚತುರ್ಯುಗಂ-ನಾಲ್ಕು ಯುಗಗಳನ್ನು(ಸಸರ್ಜ-ಉಂಟುಮಾಡಿದನು) ಹರಿಶ್ಚಂದ್ರ ಳಃ-ಪುರುಕುತ್ಸಃ-ಪುರೂರವಾಃ-ಸಗರಃ-ಕಾರ್ತವೀರ್ಯಃ-ಅರಿಶ್ಚಂ ಯು, ನಳರಾಯು, ಪುರುಕುತ್ಸರಾಯು, ಪುರೂರವ ಮಹಾರಾಯು ಸಗರನು, ಕಾರ್ತವೀರ್ಯರೆಂಬ ಅವಿಾ-ಈ ಆರುಮಂದಿ ರಾಜರು, ಕೃತಯುಗದಲ್ಲಿ, ಶಕನಾಯಕಾಃ-ಶಕಪುರುಷರಾದ ಪ್ರಭುಗಳು ಆ

ದ್ರೋನಳೋರಾಜಾಪುರುಕುತ್ಸಃಪುರೂರವಾಃ|ಸಗರಃಕಾರ್ತ
ವೀರ್ಯಶ್ಚಕೃತೇಮೀಾಶಕನಾಯಕಾಃ||೨೧|| ಮಾಂಧಾತಾಚದಿ
ಲೀಪಶ್ಚರಘುಶ್ಚೈವಾಜಭೂಮಿಪಃ|ತತಸ್ಪಂಕ್ತಿರಥೋರಾ
ಮಃ ತ್ರೇತಾಯಾಂಶಕನಾಯಕಾಃ ||೨೧|| ನಹುಷಶ್ಚಯ
ಯಾತಿಶ್ಚದುಷ್ಯಂತಶ್ಯಂತನುಸ್ತಥಾ|ವಿಚಿತ್ರವೀರ್ಯಃಪಾಂ
ಡುಶ್ಚದ್ವಾಪರೇಶಕನಾಯಕಾಃ ||೨೨|| ಯುಧಿಷ್ಠರೋವಿಕ್ರ

ತ್ತಾರೆ ||ತಾ|| ಆ ಬ್ರಹ್ಮನು ಕೃತ ತ್ರೇತಾ ದ್ವಾಪರ ಕಲಿಗಳೆಂಬ ನಾಲ್ಕು ಯುಗಗಳೆಂನು ಗೊತ್ತು ಮಾಡಿರುವದರೊಳಗೆ, ಕೃತಯುಗದಲ್ಲಿ, ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವಸ್ಸು, ಸಗರ, ಕಾರ್ತವೀರ್ಯರೆಂಬದಾಗಿ ಆರುಮಂದಿ ಶಕಪುರುಷರಾಗಿ ಚಕ್ರವರ್ತಿಗಳೆಂಟಾಗಿರುವರು||

ಮಾಂಧಾತಾ_ಮಾಂಧಾತರಾಯನು, ದಿಲೀಪಃ_ದಿಲೀಪ ಮಹಾರಾಯನು, ರಘುಃ-ರಘುಮಹಾರಾಯನು, ಅಜಃ-ಅಜಮಹಾರಾಯನು, ತತಃ_ಆಬಳಿಕ, ಪಂಕ್ತಿರಥಃ_ದಶರಥರಾಯನು, ರಾಮಃ_ರಾಮಚಂದ್ರನು, ತ್ರೇತಾಯಾಂ-ತ್ರೇತಾಯುಗದಲ್ಲಿ,ಶಕನಾಯಕಾಃ_ಶಕಾಧಿಪರಾದ ಧೊರೆಗಳಾಗಿರುವರು || ತಾ || ಮಾಂಧಾತೃ, ದಿಲೀಪ, ರಘು, ಅಜ, ದಶರಥ, ರಾಮ, ಎಂಬುವ ಹೆಸರುಗಳುಳ್ಳವರಾದ ಆರುಮಂದಿ ಶಕನಾಯಕರಾದ ರಾಜರು (ಉಂಟಾಗಿರುತ್ತಾರೆ) ||೨೧||

ನಹುಷಃ_ನಹುಷಮಹಾರಾಯನು, ಯಯಾತಿಶ್ಚ-ಯಯಾತಿ ಮಹಾರಾಯನು, ದುಷ್ಯಂತಃ_ದುಷ್ಯಂತ ಮಹಾರಾಯನು, ಶಂತನುಃ_ಶಂತನು ಮಹಾರಾಯನು, ವಿಚಿತ್ರವೀರ್ಯಃ_ವಿಚಿತ್ರವೀರ್ಯನು, ಪಾಂಡುಃ ಪಾಂಡುರಾಯನು,ದ್ವಾಪರೆ-ದ್ವಾಪರಯುಗದಲ್ಲಿ,ಶಕನಾಯಕಾ-ಶಕಾಧಿಪತಿಗಳಾ ಧೊರೆಗಳಾಗಿರುತ್ತಾರೆ|| ತಾ || ನಹುಷ, ಯಯಾತಿ, ದುಷ್ಯಂತ ವಿಚಿತ್ರವೀರ್ಯ, ಪಾಂಡುಗಳೆಂಬ ಹೆಸರುಳ್ಳ ಆರುಮಂದಿಯು ...ಗದಲ್ಲಿ, ಶಕಪುರುಷರಾದ ಧೊರೆಗಳಾಗಿರುತ್ತಾರೆ || ||೨೨||

...ರಃ-ಧರ್ಮರಾಯನು, ವಿಕ್ರಮಃ_ವಿಕ್ರಮಾದಿತ್ಯನು, ಶಾ... ಶಾಲಿವಾಹನನು, ವಿಜಯನಂದನಃ-ವಿಜಯನಂದನನು,ನಾ... ನಾಗಾರ್ಜುನನು, ಕಲಿಕ್ಷ್ಮಾಪಃ_ಕಲಿರಾಯನು, ಕಲೌ

ಮಶ್ಶಾಲಿವಾಹೋವಿಜಯನಂದನಃ ॥ ನಾಗಾರ್ಜುನೋಕಲಿ
ಕ್ಷ್ಮಾಪಷ್ಷಡೇತೇಶಕನಾಯಕಾಃ ॥೨೩॥ ಯುಗೆಯುಗೇಷಡಾ
ಖ್ಯಾತಾಸ್ಸರ್ವಜ್ಞಾಶ್ಚಕ್ರವರ್ತಿನಃ ॥೨೪॥ ಶಕಭೂಮಿಪ
ಮಧ್ಯೇತುರಾಜಾನೋಬಹವಃಕಲೌ। ಭವಂತಿಹೂಣಮ್ಲೇಚ್ಛ
ದ್ಯಾಃವ್ಯಾಧಾಶ್ಚಾರಣ್ಯಗೋಚರಾಃ॥೨೫॥ ನಂದಾಂತಂಕ್ಷತ್ರಿ
ಯಕುಲಂಕಲ್ಯಂತಂಬ್ರಾಹ್ಮಣಂಕುಲಂ। ಪರಿಕ್ಷಿಜ್ಜನ್ಮ

ಕಲಿಯುಗದಲ್ಲಿ, ಶಕನಾಯಕಾಃ-ಶಕಪುರುಷರಾಗಿರುವರು ॥ ತಾ ॥ ಧರ್ಮ ರಾಯನು, ವಿಕ್ರಮಾದಿತ್ಯನು; ಶಾಲಿವಾಹನನು, ವಿಜಯನಂದನನು, ನಾಗಾರ್ಜುನನು, ಕಲಿಯು, ಎಂಬದಾಗಿ ಕಲಿಯುಗದಲ್ಲಿ ಆರುಮಂದಿ ಶ ಕನಾಯಕರಾಗಿರುವರು ॥ ॥೨೩॥

ಯುಗೆಯುಗೇ-ಪ್ರತಿಯುಗದಲ್ಲಿಯೂ, ಸರ್ವಜ್ಞಾಃ-ಸಮಸ್ತವಂನು ತಿಳಿದವರಾದ, ಚಕ್ರವರ್ತಿನಃ-ಚಕ್ರವರ್ತಿಗಳು, ಷಟ್-ಆರುಮಂದಿ ಎಂ ಬದಾಗಿ, ಆಖ್ಯಾತಾಃ-ಹೇಳಲ್ಪಡುವರು ॥ ತಾ ॥ ಪ್ರತಿಯುಗದಲ್ಲಿ ಸ ರ್ವಜ್ಞರಾದ ಚಕ್ರವರ್ತಿಗಳು ಆರಾರುಮಂದಿಯಾಗಿ ಪ್ರಸಿದ್ಧರಾಗಿ ರುವರು ॥ ॥೨೪॥

ಕಲೌ-ಕಲಿಯುಗದಲ್ಲಿ, ಶಕಭೂಮಿಪ-ಶಕಪುರುಷರಾದ, ಯುಧಿಷ್ಠಿ ರ-ವಿಕ್ರಮ-ಶಾಲಿವಾಹ, ನಾಗಾರ್ಜುನ-ಕಲಿರಾಯರುಗಳ, ಮಧ್ಯೇ-ಶಕ ಸಂವತ್ಸರಗಳನಡುವೆ ಬಹವಃ-ಅನೇಕರಾದ,ಹೂಣ-ಹೂಣರು, ಮ್ಲೇ ಚ್ಛದ್ಯಾಃ-ಯವನರೇ ಮೊದಲಾದ ತುರುಷ್ಕರು, ಅರಣ್ಯಗೋಚರಾಃ- ಕಾಡುಗಳಲ್ಲಿವಾಸಿಸುತ್ತಿರುವವರಾದಜನರು,ವ್ಯಾಧಾಃ-ಬ್ಯಾಡರು, ರಾಜಾ ನಃ-ದೊರೆಗಳು, ಭವಂತಿ-ಆಗುತ್ತಲಿದ್ದಾರೆ ॥ ತಾ ॥ ಆರುಮಂದಿ ಶಕಪು ರುಷರ ಶಕಸಂವತ್ಸರಗಳು ನಡಿಯುವ ಮಧ್ಯದಲ್ಲಿ, ಹೂಣಯ ವನಿಷಾ ದ, ಆರಣ್ಯಕರು ಮುಂತಾದವರಾದ ಅನೇಕಮಂದಿಯು ರ ತ್ತಾರೆ ॥

ನಂದಾಂತಂ-ನಂದರುಜೀವಿತರಾಗಿ ಇರುವವರಿಗೂ, ಲಂ-ಕ್ಷತ್ರಿಯ ಜಾತಿಯು, ಬ್ರಾಹ್ಮಣಂ-ಬ್ರಾಹ್ಮಣ ಸ ಕುಲಂ-ಜಾತಿಯು, ಕಲ್ಯಂತಂ-ಕಲಿಯುಗದವರಿಗೂ,

ಚಾರಭ್ಯ ಯಾವನ್ನಂದಾಭಿಷೇಚನಂ | ತಾವತ್ಕಲಿಃಪ್ರತಿ
ದಿನಂವೃದ್ಧಿಮೇತಿನಸಂಶಯಃ ||೨೬|| ಯದಾರಾಜನರೇಂದ್ರ
ಸ್ಯಚಿತ್ರಾಂಗಿನಾಮಕಾಮಿನೀ| ಪುತ್ರಸಂಗಮನೇಚ್ಛಾಸ್ಯಾ
ತ್ತದಾವೃದ್ಧಿಃಕ್ಕಲೇರ್ಭವೇತ್ ||೨೭|| ಯದಾನೃಪಾವಿಪ್ರಪ

ಪರಿಕ್ಷಿಜ್ಜನ್ಮ-ಧರ್ಮರಾಯನ ತಮ್ಮನಾದ ಅರ್ಜುನನಿಗೆ ಮಗನಾದ ಅಭಿಮನ್ಯುವಿನ ಹೆಂಡತಿಯಾದ ಉತ್ತರೆಯು ಗರ್ಭದಲ್ಲಿಹುಟ್ಟದ ಪರಿಕ್ಷಿದ್ರಾಯನು ಹುಟ್ಟಿದ್ದು, ಆರಭ್ಯ-ಮೊದಲ್ಗೊಂಡು,ನಂದಾಭಿಷೇಚನಂ-ನಂದ-ನವನಂದರಿಗೆ ಪಟ್ಟಾಭಿಷೇಕವು, ಯಾವತ್-ಯದುವರಿಗೆ ಆಗುವದೊ, ತಾವತ್-ಅದುವರಿಗೆ, ಕಲಿಃ-ಕಲಿಯು, ದಿನೆದಿನೆ-ಪ್ರತಿದಿನದಲ್ಲಿಯೂ,ವೃದ್ಧಿಂ-ಅಭಿವೃದ್ಧಿಯಂನು,ಏತಿ-ಹೊಂದುತ್ತಿಧೆ,ನಸಂಶಯಃಸಂದೇಹವಿಲ್ಲವು || ತಾ || ನಂದರು ಇರುವವರಿಗೂ ಕ್ಷತ್ರಿಯ ವಂಶವು ಚೆರಿಕೆಯಿಲ್ಲದೇ ಇರುವದುಕಲಿಯುಗವು ಮುಗಿಯುವವರಿಗೂಬ್ರಾಹ್ಮಣ ಜಾತಿಯು ಸಂಪೂರ್ಣವಾಗಿ ನಾಶವಾಗದೇ ಇರುವದು ಧರ್ಮರಾಯನ ಮಂಶೀಯನಾದಪರಿಕ್ಷಿದ್ರಾಯನುಹುಟ್ಟಿದ್ದು ಆದಿಯಾಗಿ ನಂದರಿಗೆ ಪಟ್ಟಾಭಿಷೇಕವಾಗುವವರಿವಿಗೂ ಕಲಿಯು ದಿನದಿನಕ್ಕೆ ಅಭಿವೃದ್ಧಿಯನು ಪಡೆಯುವದು ||

||೨೬||

ಯದಾ-ಯಾವಾಗ, ರಾಜನರೇಂದ್ರ-ರಾಜನರೇಂದ್ರನಿಗೆ, ಚಿತ್ರಾಂಗೀನಾಮ-ಚಿತ್ರಾಂಗಿ ಎಂಬುವಳಾದ, ಕಾಮಿನೀ-ಹೆಂಗಸು, ಪುತ್ರ-ಮಗನಾದ ಸಾರಂಗಧರನ,ಸಂಗಮನೆ-ಕೂಡುವದರಲ್ಲಿ, ಇಚ್ಛಾ-ಆಶೆಯುಳ್ಳವಳು, ಸ್ಯಾತ್-ಆದಾಳೋ, ತದಾ-ಆಗ, ಕಲೇಃ-ಕಲಿಯ,ವೃದ್ಧಿಃ-ಅಭಿವೃದ್ಧಿಯು, ಭವೇತ್-ಆದೀತು || ತಾ || ರಾಜನರೇಂದ್ರನಿಗೆ ಕಿರಿಯ ಹೆಂಡತಿಯಾದ ಚಿತ್ರಾಂಗಿಯು ತಂನ ಗಂಡನಾದ ರಾಜನರೇಂದ್ರನಿಗೆ ಹುಟ್ಟಿದಹೆಂಡತಿಯಾದ ರತ್ನಾಂಗಿಗೆ ಮಗನಾದಸಾರಂಗಧರನ ಸಂಗಡ ಸಂಭೋಗವಂನು ಪಡೆಯಬೇಕೆಂಬ ಕೋರಿಕೆಯುಳ್ಳವಳಾಗುತ್ತಾಳೊ ಆಗ ಕಲಿಯು ಅಭಿವೃದ್ಧಿಯಾಗಿರುವದೆಂದೂಹಿಸುವದು || ||೨೭||

ಯದಾ-ಯಾವಾಗ, ನೃಪಾಃ-ಧೊರೆಗಳು, ವಿಪ್ರಪತ್ನೀರತಾಃ-ವಿಪ್ರಬ್ರಾಹ್ಮಣರ, ಪತ್ನೀ-ಹೆಂಡತಿಯರಲ್ಲಿ,ರತಾಃ-ರತ್ಯಾಸಕ್ತಿಯುಳ್ಳವರಾಗುತ್ತಾರೋ, ಧರ್ಮವಿವರ್ಜಿತಾಃ-ಧರ್ಮರಹಿತರಾಗುತ್ತಾರೋ,ವಿಪ್ರಾಃ

ತ್ರೀ(ರತಾಃಧರ್ಮವಿವರ್ಜಿತಾಃ । ವಿಪ್ರೈಸ್ಸೇವಾಂಕಾರ
ಯಂತಿತತ್ಕಲೇರ್ವೃದ್ಧಿಸೂಚಕಂ॥೨೪॥ಇತಿಸೂತವಚಶ್ಶ್ರು
ತ್ವಾಮುನಯಸ್ತಮಥಾಬ್ರುವನ್ । ಸೂತಸೂತಮಹಾಭಾ
ಗಪ್ರವೃದ್ಧೇತುನೃಪಾಃಕಲೌ । ಕಥಂಭೂತಾಭವಿಷ್ಯಂ
ತಿಚಂದ್ರಸೂರ್ಯಕುಲೋದ್ಭವಾಃ ॥ ೨೫ ॥ ಶೃಣುಧ್ವಂರುಷ
ಯೋಚಿತ್ರಾಂರಾಜ್ಞಾಂವಂಶಪರಂಪರಾಂ ॥ ತತ್ರಾದೌಚಂ

ಬ್ರಾಹ್ಮಣರಿಂದ, ಸೇವಾಂ–ಸೇವೆಯಂನು, ಕಾರಯಂತಿ–ಮಾಡಿಸು ತ್ತಾರೊ, ತತ್–ಅದೆಲ್ಲಾ, ಕಲೇಃ–ಕಲಿಯ, ವೃದ್ಧಿಸೂಚಕಂ–ಅಭಿವೃದ್ಧಿ ಯಂನು ಸೂಚಿಸುವಂಥಾದ್ದು॥ ತಾ॥ ಯಾವಾಗ ಪ್ರಭುತ್ವವಂನು ಮಾ ಡ ತಕ್ಕ ಧೊರಗಳು, ಬ್ರಾಹ್ಮಣ ಸ್ತ್ರೀ ಸಮಾಗಮವಂನು ಮಾಡು ತ್ತಾರೋ, ಬ್ರಾಹ್ಮಣರಿಂದ ಸೇವಕಾ ವೃತ್ತಿಯಂನು ಮಾಡಿಸುತ್ತಾ ರೊ ಧರ್ಮಹೀನರಾಗಿ ಹೋಗುತ್ತಾರೋ ಆಗಕಲಿಯುಅಭಿವೃದ್ಧಿಯಾ ಯಿತೆಂದು ತಿಳಿಯ ಬೇಕು॥ ॥೨೪॥

ಇತಿ–ಈವಿಧವಾಗಿ, ಸೂತ–ಸೂತಮುನಿಯ, ವಚಃ–ಮಾತಂನು, ಶ್ರುತ್ವಾ–ಕೇಳಿ, ಮುನಯಃ–ರುಷಿಗಳು, ತಂ–ಆ ಸೂತ ಮುನಿಯಂನು ಕುರಿತು, ಅಥ–ಆ ಬಳಿಕ, ಅಬ್ರುವನ್–ಹೇಳಿದವರಾದರು, ಮಹಾಭಾಗ– ಮಹನೀಯ್ಯನಾದ, ಸೂತಸೂತ–ಎಲೈ ಸೂತಮುನಿಯೆ ಸೂತಮುನಿ ಯೆ, ಕಲೌ–ಕಲಿಯು, ಪ್ರವೃದ್ಧೇ–ಅಭಿವೃದ್ಧಿಯಂನು ಹೊಂದಿರಲು, ಚಂದ್ರಸೂರ್ಯ–ಚಂದ್ರಸೂರ್ಯರ, ಕುಲ–ವಂಶದಲ್ಲಿ, ಉದ್ಭವಾಃ–ಹು ಟ್ಟಿದವರಾದ, ನೃಪಾಃ–ರಾಜರು, ಕಥಂಭೂತಾಃ–ಎಂಥಾವರಾಗಿ। ಭವಿ ಷ್ಯಂತಿ–ಆಗುತ್ತಲಿದ್ದಾರೆ॥ತಾ॥ ಈ ರೀತಿಯಾಗಿ ಸೂತ ಮುನಿಯುಮಾ ತಂನು ರುಷಿಗಳು ಕೇಳಿ ಸೂತಮುನಿಯಂನು ಕುರಿತು ಹೇಳಿದವರಾದ ರು। ಎಲೈ ಮಹನೀಯ್ಯನಾದ ಸೂತ ಮುನಿಯೇ ಕಲಿಯು ಅಭಿವೃದ್ಧಿ ಯಾಗುತ್ತಾ ಬರುತ್ತಿರಲೂ ಚಂದ್ರವಂಶದ ಸೂರ್ಯವಂಶದ ಧೊರೆಗಳು ಎಂಥವರಾಗಿರುತ್ತಾರೆ॥ ॥೨೫।

ರುಷಯಃ–ರುಷಿಗಳಿರಾ॥ ಚಿತ್ರಾಂ–ಆಶ್ಚರ್ಯಕರವಾದ। ರಾಜ್ಞಾಂ– ಧೊರೆಗಳ, ವಂಶಪರಂಪರಾಂ–ವಂಶಾವಳಿಯಂನು, ಶೃಣುಧ್ವಂ–ಕೇಳಿರಿ ತತ್ರ–ಚಂದ್ರ ಸೂರ್ಯವಂಶದ ಧೊರೆಗಳೊಳಗೆ, ಆದೌ–ಮೊದಲಲ್ಲಿ,

ದ್ರವಂಶೀಯಾನ್‌ವಕ್ಷ್ಯಾಮಿಕ್ರಮಶೋಧುನಾ॥೩೧॥ಯುಧಿಷ್ಠಿ
ರಸ್ಯಾನುಜೋಯಃಫಲ್ಗುನಃಕೃಷ್ಣಸಾರಥಿಃ । ಅಭಿಮ
ನ್ಯುಸ್ತಸ್ಯಪುತ್ರಃಪರೀಕ್ಷಿತ್ತಸ್ಯನಂದನಃ ॥೩೧॥ ಜನಮೇ
ಜಯಸ್ತಸ್ಯಪುತ್ರಃತಸ್ಯರಾಜ್ಞಃಕುಲೋದ್ಭವಃ । ರಾಜ

ಅಧುನಾ—ಈಗ, ಕ್ರಮಶಃ—ಪಾಂಕ್ತವಾಗಿ, ಚಂದ್ರವಂಶೀಯಾನ್—ಚಂದ್ರವಂಶದ ಧೊರೆಗಳನ್ನು, ವಕ್ಷ್ಯಾಮಿ—ಹೇಳುತ್ತೇನೆ ॥ ತಾ ॥ ಎಲೈ ಋಷಿಗಳಿರಾ ಆಶ್ಚರ್ಯಕರವಾದ ಧೊರೆಗಳ ವಂಶ ಪರಂಪರೆಯನ್ನು ಹೇಳುತ್ತೇನೆ ಕೇಳಿರಿ, ಆ ಚಂದ್ರಸೂರ್ಯ ವಂಶೀಯ್ಯರೊಳಗೆ ಮೊದಲಲ್ಲಿ ಚಂದ್ರವಂಶದ ಧೊರೆಗಳ ವಂಶಾವಳಿಯನ್ನು ಕ್ರಮವಾಗಿ ಈಗ ಹೇಳುತ್ತೇನೆ॥ ॥೩೧॥

ಯುಧಿಷ್ಠಿರಸ್ಯ—ಧರ್ಮರಾಯನಿಗೆ, ಅನುಜಃ—ತಮ್ಮನಾದ, ಕೃಷ್ಣಸಾರಥಿಃ—ಕೃಷ್ಣನೇ ಸಾರಥಿಯಾಗುಳ್ಳವನಾದ, ಯಃ—ಯಾವ, ಫಲ್ಗುನಃ—ಅರ್ಜುನನು(ಉಂಟೋ) ತಸ್ಯ—ಆ ಅರ್ಜುನನಿಗೆ, ಅಭಿಮನ್ಯುಃ—ಅಭಿಮನ್ಯುವು, ಪುತ್ರಃ—ಮಗನಾದನು, ತಸ್ಯ—ಆ ಅಭಿಮನ್ಯುವಿಗೆ, ಪರಿಕ್ಷಿತ್—ಪರಿಕ್ಷಿತ್ತೆಂಬ ಹೆಸರುಳ್ಳ, ನಂದನಃ—ಮಗನು, ಹುಟ್ಟಿದನು ॥ತಾ॥ ಧರ್ಮರಾಯನಿಗೆ ತಮ್ಮನಾಗಿಯೂ, ಕೃಷ್ಣನೇ ತನಿಗೆ ಸಾರಥಿಯಾಗಿಯೂ ಇರುತ್ತಿದ್ದ, ಯಾವ ಅರ್ಜುನನೆಂಬುವನುಂಟೊ, ಆತನಿಗೆ ಅಭಿಮನ್ಯುವೆಂಬ ಮಗನು ಹುಟ್ಟಿದನು, ಆ ಅಭಿಮನ್ಯುವಿಗೆ ಪರಿಕ್ಷಿತ್ತೆಂಬ ಮಗನು ಜನಿಸಿದನು ॥ ॥೩೧॥

ತಸ್ಯ—ಆ ಪರಿಕ್ಷಿದ್ರಾಯನಿಗೆ, ಜನಮೇಜಯಃ—ಜನಮೇಜಯನೆಂಬ ಪುತ್ರಃ—ಮಗನು, ಅಭವತ್—ಆದನು॥ತಸ್ಯ—ಆ ಜನಮೇಜಯನೆಂಬ, ರಾಜ್ಞಃ—ಧೊರೆಯ, ಕುಲ—ವಂಶದಲ್ಲಿ,ಉದ್ಭವಃ—ಹುಟ್ಟಿದವನಾದ;ರಾಜರಾಜನರೇಂದ್ರಃ—ರಾಜನರೇಂದ್ರನೆಂಬ ಧೊರೆಯು, ಅಭೂತ್—ಆದನು, ತಸ್ಯ—ಆ ರಾಜನರೇಂದ್ರನಿಗೆ, ರತ್ನಾಂಗೀ—ರತ್ನಾಂಗಿ ಎಂಬುವಳು, ಕಾಮಿನೀ—ಹೆಂಡತಿಯೂ, ಅಭೂತ್—ಆದಳು ॥ ತಾ ॥ ಆ ಪರಿಕ್ಷಿದ್ರಾಯನಿಗೆ ಜನಮೇಜಯನೆಂಬಮಗನು, ಆಜನಮೇಜಯನಿಗೆ ರಾಜನರೇಂದ್ರನೆಂಬ

ರಾಜಿನರೇಂದ್ರೊಭೂದ್ರತ್ನಾಂಗೀತಸ್ಯಕಾಮಿನೀ ||೩೧||
ತಸ್ಯಾಂಜಾತೊಸುತೊತ್ಯಂತಂಕಂದರ್ಪಸದೃಶೊವರಃ |
ಸಾರಂಗಧರನಾಮಾತುಸಸಿದ್ಧೈಸ್ಸಿದ್ಧತಾಂಗತಃ || ೩೨ ||
ತಪಂಶೊವಶವಿಸ್ತಾರಪಾಂಡವಾನಾಂಮಹಾತ್ಮನಾಂ| ತ
ಥಾಸೂರ್ಯಕುಲೆರಾಜಾಬೃಹದ್ಬಲಇತಿಶೃತಃ|ಭಾರತಾನಾಂ

ಮಗನು ಜನಿಸಿದನು, ಆರಾಜನರೇಂದ್ರನಿಗೆ ರತ್ನಾಂಗಿಯು ಪಟ್ಟದ ಹೆಂಡತಿಯಾಗಿದ್ದಳು || ||೩೧||

ತಸ್ಯಾಂ—ಆ ರತ್ನಾಂಗಿಯಲ್ಲಿ, ಅತ್ಯಂತಂ—ಅತಿಶಯವಾಗಿ, ಕಂದರ್ಪಸದೃಶಃ—ಮನ್ಮಥನಿಗೆ ಸಮಾನನಾದ, ವರಃ—ಶ್ರೇಷ್ಠನಾದ, ಸುತಃ—ಮಗನು, ಜಾತಃ—ಹುಟ್ಟಿದವನಾದನು, ಸಾರಂಗಧರನಾಮಾತು—ಸಾರಂಗಧರನೆಂಬ ಹೆಸರುಳ್ಳವನಾದ, ಸಃ—ಆ ರತ್ನಾಂಗಿಯ ಮಗನು, ಸಿದ್ಧೈಃ—ಸಿದ್ಧರಸಂಗಡ, ಸಿದ್ಧತಾಂ—ಸಿದ್ಧತೆಯನ್ನು, ಗತಃ—ಪಡೆದವನಾದನು || || ತಾ || ಆ ರತ್ನಾಂಗಿಯಲ್ಲಿ ಶ್ರೇಷ್ಠನಾಗಿಯೂ, ಮನ್ಮಥನಿಗೆ ಸಮಾನನಾಗಿಯೂ, ಇರುವ ಸಾರಂಗಧರನೆಂಬ ಮಗನು ಜನಿಸಿದನು, ಆ ಸಾರಂಗಧರನು, ನವಸಿದ್ಧರಬಳಿಗೆ ಶೇರಿ ಸಿದ್ಧನಾಗಿ ಹೋದನು || ||೩೨||

ಮಹಾತ್ಮನಾಂ—ಮಹಾತ್ಮರಾದ, ಪಾಂಡವಾನಾಂ—ಪಾಂಡವರ, ವಂಶವಿಸ್ತಾರಃ—ವಂಶಾವಳಿಯು, ತದಂತಃ—ಸಾರಂಗಧರನೇ ಕಡೆಯವನಾಗಿ, ಉಳ್ಳದ್ದಾಯಿತು || ತಥಾ—ಹಾಗೆ, ಸೂರ್ಯಕುಲೆ—ಸೂರ್ಯವಂಶದಲ್ಲಿ, ಬೃಹದ್ಬಲಇತಿ—ಬೃಹದ್ಬಲನೆಂಬದಾಗಿ, ಶೃತಃ—ಪ್ರಸಿದ್ಧನಾದ, ರಾಜಾ—ದೊರೆಯು, ಭಾರತಾನಾಂ—ಭರತವಂಶೋತ್ಪನ್ನರಾದ ಕುರುಪಾಂಡವರ, ಮಹಾಯುದ್ಧೆ—ಸಂಕುಲಯುದ್ಧದಲ್ಲಿ, ಅಭಿಮನ್ಯುನಾ—ಅಭಿಮನ್ಯುವೆಂಬ ಅರ್ಜುನನ ಮಗನಿಂದ, ನಿಹತಃ—ಸಂಹರಿಸಲ್ಪಟ್ಟನು || ತಾ || ಧರ್ಮಾತ್ಮರಾದ ಪಾಂಡವರ ವಂಶವು ಸಾರಂಗಧರನವರಿಗೂ ನಡದು ಆಬಳಿಕ ಸಾರಂಗಧರನು ಸಿದ್ಧನಾದ್ದರಿಂದ ಅವನವರಿಗೆ ಚಂದ್ರವಂಶವು ನಿಂತಿತು, ತಥಾ—ಹಾಗೆ, ಸೂರ್ಯಕುಲೆ—ಸೂರ್ಯವಂಶದಲ್ಲಿ, ಬೃಹದ್ಬಲನೆಂಬದಾಗಿ ಪ್ರಸಿದ್ಧನಾದ ರಾಜನು ಕೌರವರ ಪಾಂಡವರ ಯುದ್ಧದಲ್ಲಿ, ಪದ್ಮವ್ಯೂಹದ

ಮಹಾಯುದ್ಧೇ ನಿಹತೋಽಹ್ಯಭಿಮನ್ಯುನಾ ॥೩೪॥ ತದ್ವಂಶೇ ಶಾ
ಕ್ಯನಾಮಾಭೂಜ್ಜೈನಾಚಾರರತಸ್ಸದಾ । ತದಂತೋ ರಾಮ
ವಂಶಸ್ತು ತಸ್ಮಾಜ್ಜೈನಾ ಬಭೂವಿರೇ॥೩೫॥ ಜೈನಚಾರ್ವಾ
ಕಬೌದ್ಧೈ ರಾಕೀರ್ಣೇ ಕ್ಷಿತಿಮಂಡಲೇ । ಪರಿತ್ರಾಣಾ
ಯ ವೇದಾನಾಂ ಕುಮಾರೋಽವತರಿಷ್ಯತಿ। ವೇದಾನಾಂ ಚಾಪಿ
ಪ್ರಾಮಾಣ್ಯಂ ಸಾಧಯಿಷ್ಯತಿ ವೈ ಕಲೌ ॥೩೬॥ ಜರಾಸಂಧೇ

ಲ್ಲಿ ಅಭಿಮನ್ಯುವಿನಿಂದ ಸಂಕುಲ ಯುದ್ಧದಲ್ಲಿ ಸಹ್ಮರಿಸಲ್ಪಟ್ಟನು ॥೩೪॥
ತದ್ವಂಶೇ-ಆ ಬೃಹದ್ಬಲನ ವಂಶಪರಂಪರೆಯಲ್ಲಿ, ಶಾಕ್ಯನಾಮ-ಶಾ
ಕ್ಯನೆಂಬುವನು, ಸದಾ-ಯಾವಾಗಲೂ, ಜೈನಾಚಾರ-ಜೈನರ ಆಚಾರದ
ಲ್ಲಿ ಆಸಕ್ತನಾದವನು ಅಭೂತ್-ಆದನು, ತದಂತಃ-ಆ ಶಾಕ್ಯನೇ ಕೊನೆ
ಯಾಗಿ, ರಾಮವಂಶಃ-ರಾಮವಂಶವು, ಅಭೂತ್-ಆಯಿತು, ತಸ್ಮಾತ್-
ಆ ಶಾಕ್ಯನಿಂದ, ಜೈನಾಃ-ಮುಂದು ಆ ವಂಶದಲ್ಲಿ ಹುಟ್ಟಿದವರು ಜೈನಾಃ-
ಜೈನರು, ಬಭೂವಿರೇ-ಆಗುತ್ತಾ ಬಂದರು ॥ತಾ॥ ಆ ಬೃಹದ್ಬಲನೆಂಬ ಹೆಸರು
ಳ್ಳ ಸೂರ್ಯವಂಶದ ರಾಜನ ವಂಶದಲ್ಲಿ ಹುಟ್ಟಿದ ಶಾಕ್ಯನೆಂಬುವನು, ಜೈ
ನಾಚಾರವುಳ್ಳವನಾದನು, ಆ ಶಾಕ್ಯನವರಿಗೆ ರಾಮವಂಶವು ಶುದ್ಧಕ್ಷತ್ರಿ
ವಾಗಿದ್ದು ಆ ಬಳಿಕ ಶಾಕ್ಯನಿಂದೀಚೆಗೆ ಹುಟ್ಟಿದವರೆಲ್ಲಾ ಜೈನಾಚಾರವು
ಳ್ಳವರಾಗಿ ಜೈನರಾದ್ದರಿಂದ ಹುಟ್ಟಿದವರೆಲ್ಲರೂ ಜೈನರಾದರು ॥ ॥೩೫॥
ಜೈನಚಾರ್ವಾಕಬೌದ್ಧೈಃ-ಜೈನಚಾರ್ವಾಕಬೌದ್ಧರಿಂದ, ಕ್ಷಿ
ತಿಮಂಡಲೇ-ಭೂಮಂಡಲವು, ಆಕೀರ್ಣೇ-ವ್ಯಾಪ್ತವಾಗುತ್ತಿರಲು, ವೇದಾ
ನಾಂ-ವೇದಗಳನ್ನು, ಪರಿತ್ರಾಣಾಯ-ಉದ್ಧರಿಸುವದಕ್ಕಾಗಿ, ಕುಮಾ
ರಃ-ಷಣ್ಮುಖನು, ಅವತರಿಷ್ಯತಿ-ಹುಟ್ಟುತ್ತಲಿದ್ದಾನೆ, ಕಲೌ-ಕಲಿ
ಯುಗದಲ್ಲಿ, ವೇದಾನಾಂ-ವೇದಗಳಿಗೆ, ಪ್ರಾಮಾಣ್ಯಂ-ಪ್ರಾಮಾಣಿಕತೆ
ಯನ್ನು, ಸಾಧಯಿಷ್ಯತಿ-ಸಾಧಿಸುತ್ತಾನೆ ॥ತಾ॥ ಭೂಮಂಡಲವು ಜೈ
ನಚಾರ್ವಾಕಬೌದ್ಧರಿಂದ, ವ್ಯಾಪ್ತವಾಗುತ್ತಿರಲು, ವೇದಗಳಿಗೆ ಪ್ರಾ
ಮಾಣ್ಯವನ್ನು ಸಾಧಿಸುವದಕ್ಕಾಗಿ ಕುಮಾರಸ್ವಾಮಿಯು ಅವತಾರ
ತಿ ವೇದಗಳಿಗೆ ಪ್ರಾಮಾಣ್ಯವನ್ನು ಸಾಧಿಸುತ್ತಾನೆ ॥ ॥೩೬॥
ರಾಸಂಧೇ-ಜರಾಸಂಧನ, ಕುಲೇ-ವಂಶದಲ್ಲಿ, ಉತ್ಪನ್ನಃ-ಹುಟ್ಟಿದ
ನ, ಸಹದೇವ ಇತಿ-ಸಹದೇವನೆಂಬದಾಗಿ, ಶ್ರುತಃ-ಪ್ರಸಿದ್ಧನಾಗಿದ್ದ

ಕುಲೋತ್ಪನ್ನಃ ಸಹದೇವ ಇತಿ ಶ್ರುತಃ । ತಸ್ಯ ವಂಶೇ ಕಲಿಯುಗೇ ರಾಜಾ ಸರ್ವಾರ್ಥಸಿದ್ಧಕಃ ॥೩೭॥ ತಸ್ಯ ಪುತ್ರಾ ಭವಿಷ್ಯಂತಿ ನವನಂದಾ ಮಹಾಬಲಾಃ । ಜ್ಞಾತಿದ್ರೋಹೇನ ತೇ ಸರ್ವೇ ಚಂದ್ರಗುಪ್ತಸ್ಯ ಸಂಗರೇ ॥ ಚಾಣಿಕ್ಯನೀತಿಯೋಗೇನ ಸರ್ವೇ ಯುದ್ಧೇ ಪರಾಜಿತಾಃ । ಅಪ್ರಜಾಸ್ತೇ ಭವಿಷ್ಯಂತಿ ತದಂತಂ ಕ್ಷತ್ರ

ನು, ತಸ್ಯ–ಆ ಸಹದೇವನ, ವಂಶೇ–ಕುಲದಲ್ಲಿ, ಸರ್ವಾರ್ಥಸಿದ್ಧಕಃ–ಸರ್ವಾರ್ಥಸಿದ್ಧನೆಂಬ, ರಾಜಾ–ದೊರೆಯು, ಕಲಿಯುಗೇ–ಕಲಿಯುಗದಲ್ಲಿ ಭವಿಷ್ಯತಿ–ಆಗುವನು ॥ತಾ॥ ಜರಾಸಂಧನ ವಂಶದಲ್ಲಿ ಹುಟ್ಟಿದವನಾದ ಸಹದೇವನೆಂಬ ರಾಜನ ವಂಶಪರಂಪರೆಯಲ್ಲಿ, ಸರ್ವಾರ್ಥಸಿದ್ಧನೆಂಬ ದೊರೆಯು ಹುಟ್ಟುತ್ತಲಿದ್ದಾನೆ ॥ ॥೩೭॥

ತಸ್ಯ–ಆ ಸರ್ವಾರ್ಥಸಿದ್ಧರಾಯನಿಗೆ, ಮಹಾಬಲಾಃ–ಅಧಿಕಬಲಶಾಲಿಗಳಾದ, ನವನಂದಾಃ–ಒಂಭತ್ತುಮಂದಿಯಾದ, ಪುತ್ರಾಃ–ಮಕ್ಕಳು, ಭವಿಷ್ಯಂತಿ–ಆಗುತ್ತಲಿದ್ದಾರೆ, ತೇಸರ್ವೇ–ಆ ನವನಂದರೆಲ್ಲರೂ, ಜ್ಞಾತಿದ್ರೋಹೇನ–ಜ್ಞಾತಿಗಳಾದ ಚಂದ್ರಗುಪ್ತನ ನೂರುಮಂದಿ ಅಣ್ಣಂದಿರಿಗೂ ಮುರನಿಗೂ ಕೊಲೆಯರೂಪವಾದ ಅಪರಾಧವನ್ನು ಮಾಡಿದ್ದರಿಂದ, ಚಂದ್ರಗುಪ್ತಸ್ಯ–ಚಂದ್ರಗುಪ್ತನ, ಸಂಗರೇ–ಯುದ್ಧದಲ್ಲಿ, ಚಾಣಿಕ್ಯನೀತಿಯೋಗೇನ–ಚಾಣಿಕ್ಯ–ಚಣಕರುಷಿಗೆ ಮಗನಾದ ಬ್ರಾಹ್ಮಣನ, ನೀತಿಯೋಗೇನ–ರಾಜನೀತಿಯ ಯುಕ್ತಿಯಿಂದ, ಸರ್ವೇ–ಒಂಭತ್ತುಮಂದಿನಂದರು, ಯುದ್ಧೇ–ರಣದಲ್ಲಿ, ಪರಾಜಿತಾಃ–ಜಯಿಸಲ್ಪಟ್ಟರು, ತೇ–ನವನಂದರು, ಅಪ್ರಜಾಃ–ಪುರುಷಸಂತಾನವಿಲ್ಲದವರು, ಭವಿಷ್ಯಂತಿ–ಆಗುತ್ತಲಿದ್ದಾರೆ, ಕ್ಷತ್ರಮಂಡಲಂ–ಕ್ಷತ್ರಿಯಕುಲವು, ತದಂತಂ–ನಂದರೇ ಕೊನೆಯಾಗುಳ್ಳದ್ದು ॥ತಾ॥ ಆ ಸರ್ವಾರ್ಥಸಿದ್ಧರಾಯನಿಗೆ ಅಧಿಕಬಲಶಾಲಿಗಳಾದ ನವನಂದರು, ಮಕ್ಕಳಾಗಿರುತ್ತಾರೆ, ಆ ಒಂಭತ್ತು ದಿ ನಂದರೂ ಜ್ಞಾತಿಹಿಂಸೆಯನ್ನು ಮಾಡಿದ್ದರಿಂದ ಜ್ಞಾತಿಯಾದ ದ್ರಗುಪ್ತನ ಸಂಗಡ ಯುದ್ಧ ಮಾಡುವಾಗ್ಯೆ ಚಾಣಿಕ್ಯನೆಂಬಬ್ರಾ ನ ನೀತಿಯೋಗದಿಂದ, ಚಂದ್ರಗುಪ್ತನಿಂದ ಅವರು ಜಯಿಸಲ್ಪಟ್ಟ ನವನಂದರಿಗೆ ಗಂಡುಮಕ್ಕಳಿಲ್ಲದೆ ಇರುವದ್ದರಿಂದ, ಉಳಿದಿದ್ದ

ಮಂಡಲಂ ॥೩೪॥ ಶೂದ್ರಾಮುರಾ ನಂದಪಿತುಃ ಭೋಗಿನೀ ಸ
ಮಭೂತ್ಪುರಾ । ತಸ್ಯಾಂಜಾತೋಮುರಃ ಪುತ್ರಃ ತಸ್ಯಪು
ತ್ರಾಅಭವನ್ ಶತಂ ॥ ೩೯ ॥ ನಂದ್ಯೈರ್ಹತೇಷುಮೌರ್ಯೇಷು
ಚಂದ್ರಗುಪ್ತೇನತೇಜಿತಾಃ । ತದಾದಿಶೂದ್ರವಂಶೀಯಾಃ ಭ
ವಿಯುಃಕ್ಷ್ಮಾಧಿಪಾಕ್ಕಲೌ ॥೪೦॥ ತತಶ್ಚೋಳಾಪಾಲಯಂತಿ

ಯಕುಲವು, ನಂದರವರಿಗೂ ಇದ್ದದ್ದಾಗಿಈಚೆಗೆಇಲ್ಲದೇಹೋಯಿತು॥೩೪॥
ಪುರಾ-ಹಿಂದಕ್ಕೆ, ನಂದಪಿತುಃ-ನಂದರಿಗೆ ತಂದೆಯಾದ ಸರ್ವಾರ್ಥಸಿ
ದ್ಧಿರಾಯನಿಗೆ, ಶೂದ್ರಾ-ಶೂದ್ರಹೆಂಗಸಾದ, ಮುರಾ-ಮುರಾಯೆಂ
ಬುವಳು, ಭೋಗಿನೀ-ಭೋಗಿನಿಯು, ಸಮಭೂತ್-ಆಗಿದ್ದಳು, ತ
ಸ್ಯಾಂ-ಆಮುರೆಯಲ್ಲಿ, ಮುರಃ-ಮುರನೆಂಬ, ಪುತ್ರಃ-ಮಗನು, ಜಾತಃ-
ಹುಟ್ಟಿದವನಾದನು, ತಸ್ಯ-ಆ ಮುರನಿಗೆ, ಶತಂ-ನೂರುಮಂದಿ, ಪುತ್ರಾಃ-
ಮಕ್ಕಳು; ಅಭವನ್-ಆದರು ॥ತಾ॥ ಪೂರ್ವದಲ್ಲಿ ನಂದರಿಗೆ ತಂದೆಯಾದ
ಸರ್ವಾರ್ಥಸಿದ್ಧಿರಾಯನಿಗೆ, ಮುರೆಯೆಂಬ ಶೂದ್ರಹೆಂಗಸು ಹೆಂಡತಿಯಾ
ಗಿದ್ದಳು, ಆ ಮುರೆಯಲ್ಲಿ ಮುರನೆಂಬ ಮಗನು ಹುಟ್ಟಿದನು; ಆ ಮುರನಿ
ಗೆ ನೂರುಮಂದಿ ಗಂಡುಮಕ್ಕಳು ಜನಿಸಿದವರಾದರು ॥ ॥೩೯॥
ನಂದ್ಯೈಃ-ನಂದರಿಂದ, ಮೌರ್ಯೇಷು-ಮುರನ ಮಕ್ಕಳಾದವರು, ಹತೇ
ಷು-ಸಂಹರಿಸಲ್ಪಟ್ಟವರಾಗುತ್ತಿರಲು, ತೇ-ಆ ನವನಂದರು, ಚಂದ್ರಗು
ಪ್ತೇನ-ಚಂದ್ರಗುಪ್ತನಿಂದ, ಜಿತಾಃ-ಜಯಿಸಲ್ಪಟ್ಟರು, ತದಾದಿ-ನಂದರು
ಮೃತರಾದಕಾಲ ವಾದಿಯಾಗಿ, ಕಲೌ-ಕಲಿಯುಗದಲ್ಲಿ, ರಾಜಾನಃ-ಧೊ
ರೆಗಳು; ಶೂದ್ರವಂಶೀಯಾಃ-ಶೂದ್ರವಂಶದವರು, ಕ್ಷ್ಮಾಧಿಪಾಃ-ಭೂಪ
ರು, ಭವಿಯುಃ-ಆಗುವರು ॥ತಾ॥ ನಂದರಿಂದ ಮುರನ ಮಕ್ಕಳು ಕೊಲ್ಲ
ಲ್ಪಡುತ್ತಿರಲು, ಚಂದ್ರಗುಪ್ತನಿಂದ ನವನಂದರು ಸಂಹರಿಸಲ್ಪಟ್ಟರು, ಅ
ಮೊದಲಾಗಿ, ಕಲಿಯುಗದಲ್ಲಿ ಧೊರೆಗಳು ಶೂದ್ರವಂಶದವರಾಗಿಹೋ
ವರು, ಅಂದರೆ ಶುದ್ಧಕ್ಷತ್ರಿಯವಂಶವಿರುವದಿಲ್ಲ॥ ॥೪೦॥
ತತಃ-ಆ ಬಳಿಕ, ಚೋಳಾಃ-ಚೋಳಧೊರೆಗಳು, ಮಹೀಸುರಾಃ-
ಬ್ರಹ್ಮಣರು, ಏನಾಂ-ಈ, ಭುವಂ-ಭೂಮಿಯನ್ನು, ಪಾಲಯಂತಿ-ಕಾ
ಯುತ್ತಲಿದ್ದಾರ್ಕೆ, ಆಕಾಶರಾಜನೃಪತಿಃ-ಆಕಾಶರಾಯನೆಂಬ ಧೊರೆ

ಭುವಮಿನಾಂಮಹೀಸುರಾಃ । ಆಕಾಶರಾಜನೃಪತಿಸ್ತೊಂ
ಡಮಾನಮಹೀತತಿಃ ॥ ೪೧ ॥ ಆಂಧ್ರಾಶ್ಚದ್ರಾವಿಡಾಶ್ಚೈವ
ಮಹಾರಾಷ್ಟ್ರಶ್ಚಘೂರ್ಜರಾಃ। ವ್ಯಾಧಾಃಮ್ಲೇಚ್ಛಾಃ
ಕಿರಾತಾದ್ಯಾಃಪಾಲಯಂತಿವಸುಂಧರಾಂ ॥೪೨॥ ವಿಕ್ರಮಾ
ದಿತ್ಯನಾಮಾನಂಶಕಭೂಮೀಶ್ವರಂವರಂ । ವಿಜೇಷ್ಯತಿ
ಮಹಾವೀರ್ಯೋಲೀಲಯಾಶಾಲಿವಾಹನಃ ॥ ॥೪೩॥

ಯು, ತೊಂಡಮಾನಮಹೀಪತಿಃ–ತೊಂಡಮಾನ ರಾಯನು, (ಈಭೂ ಮಿಯನ್ನು ಪಾಲಿಸುವವನು) ॥ತಾ॥ ಆ ಬಳಿಕ ನವಚೋಳರು ಆ ಬಳಿಕ ಬ್ರಾಹ್ಮಣರು ಆಕಾಶರಾಯ ತೊಂಡಮಾನರಾಯರೆಂಬ ರಾಜರುಗಳು ಈ ಭೂಮಿಯನ್ನು ಪಾಲಿಸುತ್ತಾರೆ॥ ॥೪೧॥

ಆಂಧ್ರಾಃ–ತೆಲುಗರು, ದ್ರಾವಿಡಾಃ–ಅಗಸ್ತ್ಯಭಾಷೆಯುಳ್ಳವರು, ಮ ಹಾರಾಷ್ಟ್ರಾಃ–ಮಹಾರಾಷ್ಟ್ರದವರು, ಘೂರ್ಜರಾಃ–ಘೂರ್ಜರದೇಶದ ವರು, ವ್ಯಾಧಾಃ–ಬ್ಯಾಡರು, ಮ್ಲೇಚ್ಛಾಃ–ತುರುಷ್ಕರು, ಕಿರಾತಾಃ–ಕಾ ಡುಬ್ಯಾಡರು, ಆದ್ಯಾಃ–ಇವರೇಮೊದಲಾದವರು, ವಸುಂಧರಾಂ–ಭೂಮಿ ಯನ್ನು, ಪಾಲಯಂತಿ–ಕಾಪಾಡುತ್ತಲಿದ್ದಾರೆ ॥ತಾ॥ ತೆಲುಗುದೇಶದವ ರು, ಅರವದೇಶದವರು, ಮಹಾರಾಷ್ಟ್ರದೇಶದವರು, ಘೂರ್ಜರದೇಶದ ವರು, ಊರಲ್ಲಿರುವ ಬ್ಯಾಡರು, ಕಾಡುಬ್ಯಾಡರು, ತುರುಷ್ಕರು ಮೊದ ಲಾದವರು ಈ ಭೂಮಿಯನ್ನು ಖಂಡಮಂಡಲಾಧಿಪತಿಗಳಾಗಿ ಪಾಲಿಸು ವರು॥ ॥೪೨॥

ಮಹಾವೀರ್ಯಃ–ಅಧಿಕಸಾಮರ್ಥ್ಯವುಳ್ಳವನಾದ;ಶಾಲಿವಾಹನಃ–ಶಾಲಿ ವಾಹನನೆಂಬ ಕಲಿಯುಗದ ೩ನೇ ಶಕಪುರುಷನು,ವಿಕ್ರಮಾದಿತ್ಯನಾಮಾ ನಂ–ವಿಕ್ರಮಾದಿತ್ಯನೆಂಬ ಹೆಸರುಳ್ಳ, ವರಂ–ಶ್ರೇಷ್ಠನಾದ, ಶಕಭೂಮೀ ಶ್ವರಂ–ಕಲಿಯುಗದಲ್ಲಿ ೨ನೇ ಶಕಪುರುಷನನ್ನು, ಲೀಲಯಾ–ವಿಲ ಮಾತ್ರದಿಂದ, ವಿಜೇಷ್ಯತಿ–ಜಯಿಸುತ್ತಲಿದ್ದಾನೆ ॥ತಾ॥ ಅಧಿಕತೇಜಿ ವಿಶೇಷವುಳ್ಳವನಾದ ಕಲಿಯುಗದ ೩ನೇ ಶಕಪುರುಷನಾದ ಶಾಲಿ ನನು ವಿಕ್ರಮಾದಿತ್ಯರಾಯನನ್ನು ವಿಲಾಸದಿಂದ ಜಯಿಸುತ್ತಾನೆ

ಪಂಚವಾರ್ಷಿಕಕನ್ಯಾಯಾಂನಾಗೇಂದ್ರಾನುಗ್ರಹಾದಯಂ।
ಶಾಲಿವಾಹೋಜನಿಂಪ್ರಾಪ್ಯಸ್ವಾಂಕಿತಂಸ್ಥಾಪಯಿಷ್ಯತಿ॥೪೪॥
ಹೂಣಾಮ್ಲೇಚ್ಛಾಃಕಿರಾತಾದ್ಯಾಃಅಂತ್ಯಜಾ ಬ್ರಹ್ಮವರ್ಚ
ಸಃ। ನಿಗ್ರೃಹ್ಯಧರ್ಮಾನ್ವೇದೋಕ್ತಾನ್ಪಾಲಯಂತಿವಸುಂ

ಅಯಂ–ಈ, ಶಾಲಿವಾಹನಃ–ಶಾಲಿವಾಹನನು, ಪಂಚವಾರ್ಷಿಕಕ
ನ್ಯಾಯಾಂ–ಐದುವರ್ಷದವಳಾದ ಕುಂಬಾರನಕನ್ಯೆಯಲ್ಲಿ, ಜನಿಂ–ಉತ್ಪ
ತ್ತಿಯನ್ನು, ನಾಗೇಂದ್ರಾನುಗ್ರಹಾತ್–ಆದಿಶೇಷನ ಅನುಗ್ರಹದಿಂದ,
ಪ್ರಾಪ್ಯ–ಹೊಂದಿ, ಸ್ವಾಂಕಿತಂ–ತನ್ನ ಶಕೆಯ ಕುರುಹನ್ನು, ಸ್ಥಾಪ
ಯಿಷ್ಯತಿ–ಸ್ಥಾಪನೆಮಾಡುತ್ತಾನೆ_॥ ಈ ಶಾಲೀವಾಹನನು ಆದಿಶೇ
ಷನ ಅನುಗ್ರಹದಿಂದ ಐದುವರ್ಷದ ಕುಂಬಾರಹುಡುಗಿಯ ಗರ್ಭದಲ್ಲಿ
ಜನಿಸಿದವನಾಗಿ ತನ್ನ ಶಕೆಯನ್ನು ಸ್ಥಾಪಿಸುತ್ತಾನೆ॥ ॥೪೪॥
ಹೂಣಾಃ–ಹೂಣಜಾತಿಯವರು, ಮ್ಲೇಚ್ಛಾಃ–ತುರುಷ್ಕರು, ಕಿರಾ
ತಾದ್ಯಾಃ–ಕಿರಾತರೇ ಮೊದಲಾದವರು,ಅಂತ್ಯಜಾಃ–ಚಂಡಾಲರು, ಅಂದ
ರೆ ಗೋಮಾಂಸಭಕ್ಷಕರು, ಅಬ್ರಹ್ಮವರ್ಚಸಃ–ಮ್ಲೇಚ್ಛಾಚಾರಾಹಾರಾ
ದಿಗಳುಳ್ಳವರಾದ ಪ್ರಯುಕ್ತ, ಬ್ರಹ್ಮತೇಜೋರಹಿತರಾದ ಬ್ರಾಹ್ಮಣಾದಿ
ವರ್ಣದವರು, ವೇದೋಕ್ತಾನ್–ವೇದಗಳಲ್ಲಿ ಹೇಳಿರುವ, ಧರ್ಮಾನ್–ಸುರಾ
ಪಾನ ಮದ್ಯಪಾನ, ಅಭಕ್ಷ್ಯ ಭಕ್ಷಣಾದಿಗಳಂನು ಮಾಡಬಾರದೆಂಬುವ
ದಾಗಿರುವ ಧರ್ಮಗಳಂನು, ನಿಗೃಹ್ಯ–ಲೌಕಿಕಯುಕ್ತಿಗಳಿಂದ ನಿಗ್ರಹಿಸಿ
ಅಂದರೆ ತಿರಸ್ಕರಿಸಿ, ವಸುಂಧರಾಂ–ಭೂಮಿಯಂನು, ಪಾಲಯಂತಿ–ರಕ್ಷಿ
ಸುವರು.॥ ತಾ ॥ ಹೂಣಮ್ಲೇಚ್ಛ ಕಿರಾತರೇ ಮೊದಲಾದವರು ಗೋ
ಮಾಂಸಭಕ್ಷಕರು, ನಾಲ್ಕುವರ್ಣಗಳಲ್ಲಿ ಹುಟ್ಟಿ ವರ್ಣಾಶ್ರಮಾಚಾರ ಧ
ಗಳಂನು ಬಿಟ್ಟು ಭ್ರಷ್ಟರಾದವರಾದ ಪ್ರಯುಕ್ತ ಬ್ರಾಹ್ಮಣಾದಿವರ್ಣ
ಗಳಂತೆ ತೇಜಸ್ಸಿಲ್ಲದೇ ಇರುವವರೂ ಯುಕ್ತಿವಾದದಿಂದ ವೇದಗಳಲ್ಲಿ
ಮಾಡಬಾರದೆಂದು ಹೇಳಿರುವ ಮದ್ಯಪಾನ ಸುರಾಪಾನ ಅಭಕ್ಷ್ಯ ಭಕ್ಷ
ಣಾದಿ ರೂಪವಾದ ಕಾರ್ಯಗಳಂನು ಮಾಡುತ್ತಾ ಯೋಗ್ಯವಾದ ಧರ್ಮ
ಗಳಂನು ನಿಗ್ರಹಿಸಿ, ಭೂಮಿಯಂನು, ಕಾಪಾಡುವರು ॥ ॥೪೫॥

ಥತಾಂ ॥೪೫॥ ಯುಕ್ತ್ಯಾತೇಸಂಗ್ರಹಿಷ್ಯಂತಿವರ್ಣೈಕ್ಯಂ
ದ್ವಿಜಪುಂಗವಾಃ।ಸ್ತ್ರಿಯಶ್ಚ ಪ್ರಾಯಶೋಭ್ರಷ್ಟಾಃಭರ್ತೃ
ತ್ಯಾಗಪರಾಯಣಾಃ ॥೪೬॥ ಅಟ್ಟಶೂಲಾಜನಪದಾಶ್ಶಿವ
ಶೂಲಾಶ್ಚತುಷ್ಪದಾಃ । ಪ್ರಮದಾಃಕೇಶಶೂಲಿನ್ಯೋಭವಿ
ಷ್ಯಂತಿಕಲೌಯುಗೇ ॥೪೭॥ ವಿತ್ತಮೇವಕಲೌನೃಣಾಂವ
ರ್ಣಾಚಾರಗುಣೋದಯಃ । ಧರ್ಮನ್ಯಾಯವ್ಯವಸ್ಥಾಯಾಂ

ದ್ವಿಜಪುಂಗವ–ಬ್ರಾಹ್ಮಣ ಶ್ರೇಷ್ಠನಾದವೈಖಾನಸಮುನಿಯೇ, ಯುಕ್ತ್ಯಾ–ಮನುಷ್ಯರೆಲ್ಲರೂ ಮನುವಂಶದವರಾದ್ದರಿಂದಲೂ ಒಂದೇ ರೀತಿಯಾಗಿ ಉತ್ಪತ್ತಿಯುಳ್ಳವರಾದ್ದರಿಂದಲೂ ಈ ಮನುಷ್ಯರೆಲ್ಲರೂ ಒಂದೇ ರೀತಿಯಾಗಿ ಶಯ್ಯಾಸನಪಾನಭೋಜನಗಳಲ್ಲಿಸಮವಾದವರಾಗಿರಬೇಕೆಂಬ ಯುಕ್ತಿಯಿಂದ, ವರ್ಣೈಕ್ಯಂ–ವರ್ಣಗಳೆಲ್ಲವೂ ಒಂದೆಯೆಂಬದಾಗಿ ಐಕ್ಯಭಾವವನ್ನು ಸಂಗ್ರಹಿಷ್ಯಂತಿ–ಪರಿಗ್ರಹಿಸುತ್ತಾರೆ॥ ಸ್ತ್ರಿಯಶ್ಚ–ಹೆಂಗಸರಾದರೇನೊ, ಪ್ರಾಯಶಃ–ಮುಖ್ಯವಾಗಿ, ಭ್ರಷ್ಟಾಃ–ಪಾತಿವ್ರತ್ಯಧರ್ಮವನ್ನು ಬಿಟ್ಟವರಾಗಿ, ಭರ್ತೃ–ಗಂಡನನ್ನು, ತ್ಯಾಗ–ಬಿಡುವದರಲ್ಲಿ, ಪರಾಯಣಾಃ–ಆಸಕ್ತರಾಗುವರು॥ ತಾ॥ ಎಲೈ ವೈಖಾನಸಮುನಿಯೇ ಮನುಷ್ಯರೆಲ್ಲರೂ ಮನುವಂಶದಲ್ಲಿ ಹುಟ್ಟಿದವರೆಂಬಯುಕ್ತಿಯಿಂದ ವರ್ಣಗಳೆಲ್ಲಾ ಒಂದೆ ಎಂಬದಾಗಿ ಹೇಳುವರು ॥ ಹೆಂಗಸರು ಪಾತಿವ್ರತ್ಯಧರ್ಮದಿಂದ ಭ್ರಷ್ಟರಾಗಿ ಗಂಡನನ್ನು ಬಿಡುತ್ತಾರೆ ॥ ॥೪೬॥

ಜನಪದಾಃ–ದೇಶದಲ್ಲಿರುವ ಪ್ರಜೆಗಳು ಅಟ್ಟಶೂಲಾಃ–ಅನ್ನವಿಕ್ರಯವನ್ನು ಮಾಡುವವರು, ಚತುಷ್ಪದಾಃ–ಬ್ರಾಹ್ಮಣಾದಿ ಉತ್ತಮವರ್ಣದವರು, ಶಿವಶೂಲಾಃ–ವೇದವಿಕ್ರಯವನ್ನು ಮಾಡುವವರು, ಪ್ರಮದಾಃ–ಹೆಂಗಸರು, ಕೇಶಶೂಲಿನ್ಯಃ–ವ್ಯಭಿಚಾರವನ್ನು ಮಾಡುವವರು, ಕಲೌಯುಗೇ–ಕಲಿಯುಗದಲ್ಲಿ ಭವಿಷ್ಯಂತಿ–ಆಗುತ್ತಲಿದ್ದಾರೆ॥ತಾ॥ಸು ॥೪೭॥

ಕಲೌ–ಕಲಿಯುಗದಲ್ಲಿ, ನೃಣಾಂ–ಮನುಷ್ಯರಿಗೆ, ವಿತ್ತಮೇವ–ದ್ರವ್ಯವೆ ವರ್ಣಾಚಾರಗುಣೋದಯಃ–ವರ್ಣಾಚಾರ–ಆಯಾಯವರ್ಣಕ್ಕೆ ಯೋಗ್ಯವಾದ ಆಚಾರವು, ಗುಣ–ಗುಣಗಳು, ಉದಯಃ–ಆವಿರ್ಭಾವ

ಕಾರಣಂಬಲಮೇವಹಿ ॥ ೪೪ ॥ ದಾಂಪತ್ಯೇಭಿರುಚಿರ್ಹೇತುಃವಿ
ಪ್ರತ್ವೇಸೂತ್ರಮೇವಹಿ । ದೂರವಾರ್ಯಯನಂತೀರ್ಥಂಗು

ವುಳ್ಳದ್ದು, ಧರ್ಮ-ಧರ್ಮದ, ನ್ಯಾಯ-ನ್ಯಾಯದ, ವ್ಯವಸ್ಥಾಯಾಂ-ವ್ಯವಸ್ಥೆಯಲ್ಲಿ, ಬಲಂ-ಸಾಮರ್ಥ್ಯವೆ, ಕಾರಣಂ-ಕಾರಣವಾಗಿರುವದು॥ ತಾ॥ ಕಲಿಯುಗದಲ್ಲಿ ಹಣವುಳ್ಳವನಾದರೆ ಆಯಾಯ ವರ್ಣಕ್ಕೆ ಯೋಗ್ಯವಾದ ಆಚಾರಗಳೂ ಗುಣಗಳುಳ್ಳವನೆಂಬದಾಗಿ ಮರ್ಯಾದೆ ಮಾಡುವರು, ಧರ್ಮವ್ಯವಸ್ಥೆಯನ್ನು ನ್ಯಾಯವ್ಯವಸ್ಥೆಯನ್ನು ಮಾಡುವಾಗ್ಯೆ, ಅವನವನ ಸಾಮರ್ಥ್ಯವೇ ಕಾರಣವಾಗಿರುವದು, ಆದರೆ-ಆಚಾರಶೀಲನಾಗಿ ಯೋಗ್ಯನಾಗಿದ್ದಾಗ್ಯೂ, ದ್ರವ್ಯವಿಲ್ಲದೆ ಹೋದರೆ ಮರ್ಯಾದಾರ್ಹನಾಗುವದಿಲ್ಲ, ಆಚಾರ ಹೀನನಾಗಿಯೂ ಅಯೋಗ್ಯನಾಗಿಯೂ ಇದ್ದಾಗ್ಯೂ ದ್ರವ್ಯವಂತನಾಗಿದ್ದರೆ ಯೋಗ್ಯನಂತೆ ಮರ್ಯಾದೆಯನ್ನು ಮಾಡುವರು, ಸಾಮರ್ಥ್ಯವುಳ್ಳವನು ಅನ್ಯಾಯವನ್ನು ಅಧರ್ಮವನ್ನು ಮಾಡಿದಾಗ್ಯೂ ವಿಚಾರವಿಲ್ಲದೆ ಯೋಗ್ಯನೆಂದು ಸುಮ್ಮನೆ ಯಲ್ಲರೂ ಅಂಗೀಕರಿಸುವರು ॥ ॥೪೪॥

ದಾಂಪತ್ಯೇ-ಗಂಡಹೆಂಡರಾಗ ಬೇಕಾದಲ್ಲಿ, 'ಅಭಿರುಚಿಃ-ಇಷ್ಟವೇ, ಹೇತುಃ-ಕಾರಣವಾದದ್ದು, ಅಂದರೆ ಐದುದಿನದವರಿಗೂದೀಕ್ಷಾಬದ್ಧರಾಗಿ ಬ್ರಹ್ಮಸಭೆಯಲ್ಲಿ ಅಗ್ನಿಸಾಕ್ಷಿಕವಾಗಿ ಮದಿವೆಯನ್ನು ಮಾಡಿಕೊಳ್ಳುವದಿಲ್ಲವೆಂಬ ಭಾವವು ॥ ವಿಪ್ರತ್ವೇ-ವಿಪ್ರತೆಯ ವಿಷಯದಲ್ಲಿ, ಸೂತ್ರಮೇವ-ಯಜ್ಞೋಪವೀತವೇ, ಗುರ್ತಾಗಿರುವದು, ಅಂದರೆ-ಯಜ್ಞೋಪವೀತಸೂತ್ರಮಾತ್ರವೆ ಇರುವದಲ್ಲದೆ, ಸಂಧ್ಯಾದಿ ನಿತ್ಯಕರ್ಮಗಳನ್ನು ಮಾಡರೆಂಬ ಭಾವವು ॥ ದೂರವಾರ್ಯಯನಂ-ದೂರ-ಮನೆಗೆ ದೂರವಾಗಿ ಹೊರಗೆ ಇರುವ, ವಾರ್ಯಯನಂ-ನೀರಿನ ಸ್ಥಳವೇ, ತೀರ್ಥಂ-ಪುಣ್ಯತೀರ್ಥವಾಗಿರುವದು, ಅಂದರೆ-ಮನೆಯಲ್ಲಿ ಸ್ನಾನವಿನಹಾ ಯಂಥಾ ಪಕಾಲಬಂದಾಗ್ಯೂ ಪುಣ್ಯತೀರ್ಥ ಸ್ನಾನವನ್ನು ಮಾಡಬೇಕೆಂಬ ಇಚ್ಛೆಇಲ್ಲದೇ ಇರುತ್ತಾರೆ, ಭಾರ್ಯಾ-ಹೆಂಡತಿಯು, ಗುರುಃ-ಆಚಾರ್ಯನಾವಳು. ಅಂದರೆ-ಸಕಲ ಸ್ವಾತಂತ್ರ್ಯವನ್ನು ಹೆಂಡತಿಗೆ ಕೊಟ್ಟು, ಗುರುವಾಕ್ಯದಂತೆ ಅವಳ ಆಜ್ಞಾನುಸಾರವಾಗಿ ಸ್ವಾತಂತ್ರ್ಯವಿಲ್ಲದೆ ಇರುವರೆಂಬ ಭಾವವು ॥ತಾ॥ ಮದಿವೆಯನ್ನು ಮಾಡಿಕೊಳ್ಳಬೇಕಾದರೆ ತನ್ನ

ರುಭಾರ್ಯಾನಸಂಶಯಃ॥ ೪೯ ॥ ವಿಪ್ರಾಯಜ್ಞವಿಹೀನಾ
ಶ್ಚ ವೇದನಿಂದಾಪರಾಯಣಾಃ । ಪ್ರಾಜ್ಞಭಾಷಾಪರಾಃಸರ್ವೆ
ಶೌಚಾಚಾರವಿವರ್ಜಿತಾಃ ॥೫೦॥ ಪತಿತಾನ್ನಾದನೇಸಕ್ತಾಃ

ಮನಸ್ಸು ಒಪ್ಪಿದಮಾತ್ರದಿಂದಲೇ ವಿವಾಹವಂನು ಮಾಡಿಕೊಳ್ಳುವರಲ್ಲ ದೆ ವಿಧಿಯಾಗಿ ಐದು ದಿನಗಳವರಿಗೂ ಮಾಡಬೇಕಾದ ವಿವಾಹಕೆಲಸವಂನು ಮಾಡರು, ಯಜ್ಞೋಪವೀತ ವಿರುವದ್ದರಿಂದ ಬ್ರಾಹ್ಮಣಾದಿವರ್ಣ ದವರೆಂದು ತಿಳಿಯಬೇಕೇಹೊರ್ತು ತದಂಗವಾದ ಕರ್ಮಗಳಂನು ಮಾಡರು, ಊರುಹೊರಗೆ ಇರುವ ಕೊಳಗಳಲ್ಲಿ ಸ್ನಾನಕ್ಕೆ ಹೋಗುವದೇ- ತೀರ್ಥದ ಸ್ನಾನಕ್ಕೆ ಹೋದಂತೆ ಆಯ್ತೆಂದು, ನಡಿಯುತ್ತಿರುವರು ಹೆಂಡತಿಯ ಬೋಧೆಯೇ ಗುರುಬೋಧೆಯಾಗುವದು ॥ ॥೪೯॥

ವಿಪ್ರಾಃ-ಬ್ರಾಹ್ಮಣರು, ಯಜ್ಞವಿಹೀನಾಃ-ಯಜ್ಞಾದಿಕರ್ಮಗಳಂನು ಬಿಡುವರು, ಮತ್ತು ವೇದನಿಂದಾಪರಾಯಣಾಃ-ವೇದಗಳಂನು ನಿಂದಿಸುವದರಲ್ಲಿ ಆಸಕ್ತರಾಗಿರುವರು, ಮತ್ತು ಸರ್ವೆ-ಸಮಸ್ತರೂ ಪ್ರಾಜ್ಞ ಭಾಷಾಪರಾಃ-ಪ್ರಾಜ್ಞ ಭಾಷೆಯ ಅಭ್ಯಾಸವುಳ್ಳವರಾಗಿ, ಶೌಚಾಚಾರ ವಿವರ್ಜಿತಾಃ-ಶೌಚಾಚಾರ ಶೂನ್ಯರಾಗಿ ಇರುತ್ತಾರೆ॥ ತಾ॥ ಬ್ರಾಹ್ಮಣರು ಯಜ್ಞಾದಿ ಕರ್ಮಗಳನ್ನು ಬಿಟ್ಟವರಾಗಿ ವೇದವನ್ನು ದೂಷಿಸುವವರಾಗಿ ಪ್ರಾಜ್ಞ ಭಾಷಾಧ್ಯಯನವನ್ನು ಮಾಡುವವರಾಗಿ ಶೌಚಾಚಾರಗಳಂನು ಬಿಟ್ಟರುತ್ತಾರೆ॥ ॥೫೦॥

ಪತಿತ-ಜಾತಿ ಭ್ರಷ್ಟರಾದವರ, ಅನ್ನ-ಅನ್ನವಂನು, ಅದನೆ-ತಿನ್ನುವದರಲ್ಲಿ. ಸಕ್ತಾಃ-ಆಸಕ್ತಿಯುಳ್ಳವರಾಗಿಯೂ, ಮೃದುವಾಚಃ-ನಯವಾದ ಮಾತುಗಳುಳ್ಳವರಾಗಿಯೂ, ಕುಶೀಲಿನಃ-ಕುತ್ಸಿತ ಸ್ವಭಾವವುಳ್ಳವರಾಗಿ, ಪರಾಂಗನಾಸು-ಪರರ ಹೆಂಡತಿಯರಲ್ಲಿ ಅಥವಾ ತನ್ನ ಸ್ತ್ರೀಯಲ್ಲದೆ ಇತರ ಸ್ತ್ರೀಯರಲ್ಲಿ, ನಿರತಾಃ-ಆಸಕ್ತರಾಗಿಯೂ,-ಸಂಧ್ಯಾಕರ್ಮ-ಮಾಡ ಬೇಕಾದ ಪ್ರಾತಃಕಾಲ ಸಾಯಂಕಾಲ ಮಧ್ಯಾಹ್ನಕಾಲದ ಸಂಧ್ಯಾವಂದನ ರೂಪವಾದ ಕೆಲಸವನ್ನು, ಬಹಿಷ್ಕೃತಾಃ-ಮಾಡದೇ ಇರುವವರಾಗಿಯೂ ॥ ತಾ ॥ ಜಾತಿ ಭ್ರಷ್ಟರಾದವರ ಅನ್ನವನ್ನು ತಿಂನುವವರಾಗಿಯೂ, ನಯವಾದ ಮಾತುಗಳಂನಾಡುತ್ತಾ ಕುತ್ಸಿತ ಸ್ವಭಾವವುಳ್ಳವರಾಗಿಯೂ, ಸ್ವಭಾರ್ಯಾತಿರಿಕ್ತರಾ

ಪ್ಯೈದುವಾಚಕ್ಕ್ಯಶೀಲಿನಃ। ಪರಾಂಗನಾಸುನಿರತಾಃಸಂಧ್ಯಾ
ಕರ್ಮಬಹಿಷ್ಕೃತಾಃ ॥೫೧॥ ಮ್ಲೆಚ್ಛಾಂನಪಾನನಿರತಾಃಮ್ಲೆ
ಚ್ಛಭೂಯಿಷ್ಠಂಚಾರಿಣಃ । ಸರ್ವೆ ಬ್ರಹ್ಮವದಿಷ್ಯಂತಿವೆದಾಂ
ತಿವ್ಯಪದೆಶತಃ ॥೫೨॥ ಶೂದ್ರಾಃಕಾಷಾಯವಸನಾಃಬ್ರಾ
ಹ್ಮಣಾನ್ ಬೊಧಯಂತಿಚ । ವೆದಶಾಸ್ತ್ರಾನಭಿಜ್ಞಾಸ್ತೆ
ಬ್ರಾಹ್ಮಣಾಃಮೂಢಬುದ್ಧಯಃ । ಶೂದ್ರಾನ್ನೆವಪ್ರಸೆವಂತೆ

ಸ್ತ್ರೀರಲ್ಲಿ ಸಂಪರ್ಕವುಳ್ಳವರಾಗಿಯೂ, ಸಂಧ್ಯಾವಂದನಾದಿ ನಿತ್ಯಕರ್ಮ ಗಳಂನು ಬಿಟ್ಟವರಾಗಿಯೂ, ಇರುತ್ತಾರೆ॥ ॥೫೧॥

ಮ್ಲೇಚ್ಛ–ಮ್ಲೇಚ್ಛರ, ಅಂನ–ಅನಂದಲ್ಲಿ, ಪಾನ–ಪಾನದಲ್ಲಿ, ನಿರತಾಃ–ಆಸಕ್ತರಾಗಿಯೂ, ಮ್ಲೇಚ್ಛಭೂಯಿಷ್ಠಂ–ಮ್ಲೇಚ್ಛದೇಶದಲ್ಲಿ, ಚಾರಿಣಃ–ಸಂಚರಿಸುವವರಾಗಿಯೂ; ವೇದಾಂತಿವ್ಯಪದೇಶತಃ–ವೇದಾಂತಿಗಳೆಂಬ ನಿಮಿತ್ತದಿಂದ, ಸರ್ವೆ–ಸಮಸ್ತರು, ಬ್ರಹ್ಮವದಿಷ್ಯಂತಿ–ಬ್ರಹ್ಮವಂನು ಹೇಳುತ್ತಿರುವರು ॥ತಾ॥ ಮ್ಲೇಚ್ಛರ ಅಂನಪಾನಗಳಲ್ಲಿ ನಿರತರಾಗಿ ಮ್ಲೇಚ್ಛದೇಶದಲ್ಲಿ ಸಂಚಾರಮಾಡುತ್ತಿರುವವರಾಗಿ ನಾವು ವೇದಾಂತಿಗಳೆಂಬ ವೇಷಧಾರಿಗಳಾಗಿ, ಬ್ರಹ್ಮವಂನು ಹೇಳುತ್ತಿರುವರು॥೫೨॥

ಶೂದ್ರಾಃ–ಶೂದ್ರರು, ಕಾಷಾಯವಸನಾಃ–ಕಾವಿಬಟ್ಟೆಯಂನು ಧರಿಸಿದವರಾಗಿ, ಬ್ರಾಹ್ಮಣಾನ್–ಬ್ರಾಹ್ಮಣರಂನು ಕುರಿತು, ಬೋಧಯಂತಿ–ಭಕ್ತಿ ಜ್ಞಾನ ವೈರಾಗ್ಯಗಳಂನು ಬೋಧಿಸುವರಾಗುತ್ತಾರೆ, ವೇದಶಾಸ್ತ್ರಾನಭಿಜ್ಞಾಃ–ವೇದ–ವೇದಗಳಂನು, ಶಾಸ್ತ್ರ–ಶಾಸ್ತ್ರಗಳಂನು, ಅನಭಿಜ್ಞಾಃ–ತಿಳಿಯದೇ ಇರುವವರಾದ, ಮೂಢಬುದ್ಧಯಃ–ಮೂಢ–ಸ್ತಬ್ಧವಾದ, ಬುದ್ಧಯಃ–ಜ್ಞಾನವುಳ್ಳವರಾದ, ಬ್ರಾಹ್ಮಣಾಃ–ಬ್ರಾಹ್ಮಣರು, ತಂ–ಆ ಶೂದ್ರನಂನು, ವರಂ–ಶ್ರೇಷ್ಠನನ್ನಾಗಿ, ಗುರುಂ–ಗುರುವಂನಾಗಿ, ಮನ್ಯಾನಾಃ–ತಿಳಿದವರಾಗಿ, ಶೂದ್ರಾನ್ನೇವ–ಅಂಥಾಶೂದ್ರರಂನೇ, ಪ್ರಸೇವಂತೆ–ಸೇವಿಸುತ್ತಾರೆ ॥ತಾ॥ಕೆಂಪುವಸ್ತ್ರಧಾರಿಗಳಾಗಿ ಶೂದ್ರರು, ವಿರಕ್ತರೆಂಬದಾಗಿ ನಟಿಸುತ್ತಾ, ಬ್ರಾಹ್ಮಣರಿಗೆ ಭಕ್ತಿಜ್ಞಾನವೈರಾಗ್ಯಗಳಂನು ಬೋಧಿಸುವರು, ವೇದಶಾಸ್ತ್ರಗಳಂನುತಿಳಿಯದೆ ಮಂ

ಮನ್ವಾನಾಸ್ತಂಗುರುಂವರಂ ॥೫೩॥ ವಿಣಾಗಾನಾದಿಭಿಃಗ್ರಾ
ಥಾಂಗಾಯಂತಂವೃಷಲಂದ್ವಿಜಾಃ । ದೃಷ್ಟ್ವಾತಂಗುರುವ
ದ್ಜ್ಞಾತ್ವಾಪತಂತಿನರಕೇಶುಚೌ॥೫೪॥ ರಾಜಾನಶ್ಚೋರವೃ
ತ್ತೀಯಶ್ಚೋರಾರಾಜನ್ಯವೃತ್ತಯಃ । ಬ್ರಾಹ್ಮಣಾನೆ
ವಬಾಧಂತೆಧರ್ಮನಿಷ್ಠಾಂಶ್ಚನಿರ್ಧನಾನ್ ॥೫೫॥ ರಾಕ್ಷಸಾಕ್ಕಲಿ

ದಬುದ್ಧಿಗಳಾದ ಬ್ರಾಹ್ಮಣರು, ಶ್ರೇಷ್ಠನಾದ ಗುರುವೆಂಬದಾಗಿ ಆ ಶೂ
ದ್ರನಂನು ಭಾವಿಸುತ್ತಾ, ಕೆಂಪುವಸ್ತ್ರಗಳಂನು ಧರಿಸಿದಮಾತ್ರದಿಂದ
ಯತಿಗಳಂತೆ ವಿರಕ್ತರೆಂದು ನಟಿಸುವವರಾದ ಆ ಶೂದ್ರರಂನೇ ಸೇವಿಸು
ಸುತ್ತಾ ಬರುತ್ತಾರೆ॥ ॥೫೩॥

ದ್ವಿಜಾಃ–ಬ್ರಾಹ್ಮಣರು, ವೀಣಾಗಾನಾದಿಭಿಃ–ವೀಣೆ ತಂಬೂರಿಮೊದ
ಲಾದವುಗಳಿಂದ, ಗಾಥಾಂ–ಪದಗಳು ಮುಂತಾದವುಗಳಂನು, ಗಾಯಂ
ತಂ–ಹಾಡುತ್ತಿರುವ, ವೃಷಲಂ–ಶೂದ್ರಪುತ್ರನಾದ ಅಧಾರ್ಮಿಕನಂನು
ದೃಷ್ಟ್ವಾ–ನೋಡಿ, ತಂ–ಅವನಂನು,ಗುರುವತ್–ಗುರುವಿನಂತೆ,ಜ್ಞಾ
ತ್ವಾ–ತಿಳಿದು, ತಥಾ–ಹಾಗೆ, ನರಕೆ–ನರಕದಲ್ಲಿ, ಪತಂತಿ–ಬೀಳುವರು
॥ತಾ॥ವೀಣೆ ತಂಬೂರಿ ಮುಂತಾದವುಗಳಿಂದ ಹರಿಕಥೆಯಂನು ಮಾಡು
ತ್ತೇನೆಂಬದಾಗಿ, ಗಾನಮಾಡುತ್ತಿರುವ ಅಧಾರ್ಮಿಕನಾದ ಶೂದ್ರಪುತ್ರ
ನಂನುಬ್ರಾಹ್ಮಣರು ನೋಡಿ, ಅವನೇ ಗುರುವೆಂಬದಾಗಿತಿಳಿದವರಾಗಿ,ಅ
ಶುಚಿಯಾದ ನರಕದಲ್ಲಿ ಬೀಳುವರು,(ಅಥವಾ)ಈ ಲೋಕದಲ್ಲಿ ಅಪರಿಶು
ದ್ಧತೆಯಲ್ಲಿಯೂ, ಪರಲೋಕದೊಳಗೆ ನರಕದಲ್ಲಿಯೂ ಬೀಳುವರು॥೫೪॥

ರಾಜಾನಃ–ದೊರೆಗಳು, ಚೋರವೃತ್ತೀಯಾಃ–ಕಳ್ಳರಂತೆ ವ್ಯಾಪಾರ
ವುಳ್ಳವರಾಗಿಯೂ ಚೋರಾಃ–ಚೋರರಾದವರು,ರಾಜನ್ಯರೂಪಿಣಃ–ರಾ
ಜರ ನಡತೆಯುಳ್ಳವರಾಗಿಯೂ, ಧರ್ಮಿಷ್ಠಾನ್–ಧರ್ಮನಿರತರಾದ, ನಿರ್ಧ
ನಾನ್–ದ್ರವ್ಯಹೀನರಾದ, ಬ್ರಾಹ್ಮಣಾನೇವ–ಬ್ರಾಹ್ಮಣರನ್ನೇ ಬಾಧಂ
ತೆ–ಬಾಧೆಮಾಡುತ್ತಿರುವರು ॥ ತಾ ॥ ರಾಜರೆಂಬದಾಗಿ ಹೆಸರುಳ್ಳ
ಚೋರವ್ಯಾಪಾರವುಳ್ಳವರಾಗಿಯೂ ಚೋರರಾದವರು ರಾಜರ ನ
ಯುಳ್ಳವರಾಗಿಯೂ ಧನಹೀನರಾದ ಶ್ರೋತ್ರಿಯರಾದ ಬ್ರಾಹ್ಮಣ
ನು ಬಾಧಿಸುತ್ತಿರುವರು ॥ ॥೫೫

ಮಾಶ್ರಿತ್ಯಜಾಯಂತೆಬ್ರಹ್ಮಯೋನಿಷು । ಬ್ರಾಹ್ಮಣಾನೆವ
ಬಾಧಂತೆತತ್ರಾಪಿಶ್ರೋತ್ರಿಯಾನ್ ಕೃಶಾನ್ ॥೫೬॥ ಪಿತಾಪು
ತ್ರೀಂತಥಾಭ್ರಾತಾಭಗಿನೀಂಗುರುಸುಂದರೀಂ ॥ ಮಾತು
ಲಾನೀಂಮಾತರಂಚೆಗಮಿಷ್ಯಂತಿಕಲೌಯುಗೆ ॥ ೫೭ ॥ ಕ
ನ್ಯಾಃವಿದ್ಯಾಃಪಠಿಷ್ಯಂತಿರಾಜಾನಸ್ತತ್ಸಹಾಯಕಾಃ। ಅಧಿ

ರಾಕ್ಷಸಾಃ—ರಾಕ್ಷಸರು, ಕಲಿಂ—ಕಲಿಯುಗವನ್ನು, ಆಶ್ರಿತ್ಯ—ಆಶ್ರಯಿಸಿ, ಬ್ರಹ್ಮಯೋನಿಷು—ಬ್ರಾಹ್ಮಣ ಯೋನಿಗಳಲ್ಲಿ, ಜಾಯಂತೆ—ಹುಟ್ಟುವರು ॥ ತತ್ರಾಪಿ—ಅಲ್ಲಿಯೂ, ಶ್ರೋತ್ರಿಯಾನ್—ಯೋಗ್ಯರಾದ, ಕೃಶಾನ್ ತಪಸ್ಸಿನಿಂದ ಕೃಶರಾದ, ಬ್ರಾಹ್ಮಣಾನೇವ—ಬ್ರಾಹ್ಮಣರನ್ನೇ; ಬಾಧಂತೆ—ಬಾಧಿಸುವರು ॥ ತಾ ॥ ಕಲಿಯುಗದಲ್ಲಿ ರಾಕ್ಷಸರು ಬ್ರಾಹ್ಮಣಯೋನಿಗಳಲ್ಲಿ ಜನಿಸುವವರಾಗಿ, ಯೋಗ್ಯರಾಗಿಯೂ ಕೃಶರಾಗಿಯೂ ಇರುವ ಬ್ರಾಹ್ಮಣರನ್ನೇ ಬಾಧಿಸುತ್ತಾರೆ ॥ ॥೫೬॥

ಪಿತಾ—ತಂದೆಯು, ಪುತ್ರೀಂ—ಮಗಳನ್ನು, ತಥಾ—ಹಾಗೆ, ಭ್ರಾತಾ—ಸಹೋದರನು, ಭಗಿನೀಂ—ತಂಗಿಯನ್ನು, ಗುರುಸುಂದರೀಂ—ಗುರು ಪತ್ನಿಯನ್ನು, ಮಾತುಲಾನೀಂ—ಸೋದರತ್ತೆಯನ್ನು, ಮಾತರಂಚ—ತಾಯಿಯನ್ನು, ಸ್ನುಷಾಂ—ಸೊಸೆಯನ್ನು, ಕಲೌ—ಕಲಿಯುಗದಲ್ಲಿ, ಗಮಿಷ್ಯಂತಿ—ಸಂಗಮ ಮಾಡುವರು ॥ ತಾ ॥ ತಂದೆಯು ಮಗಳನ್ನು ಸಹೋದರನಾದವನು, ಒಡಹುಟ್ಟಿದವಳನ್ನು ಹಾಗೆ ಗುರುಪತ್ನಿಯನ್ನು ಸೋದರತ್ತೆಯನ್ನು ತಾಯಿಯನ್ನು ಸೊಸೆಯನ್ನು ಕಲಿಯುಗದಲ್ಲಿ ಜನರು ಕೂಡುತ್ತಾರೆ ॥ ॥೫೭॥

ಕನ್ಯಾಃ—ಹುಡಿಗಿಯರು, ವಿದ್ಯಾಃ—ವಿದ್ಯೆಗಳನ್ನು ಪಠಿಷ್ಯಂತಿ—ಪ್ರೋತ್ತಾರೆ, ರಾಜಾನಃ—ಧೊರೆಗಳು, ತತ್ಸಹಾಯಕಾಃ—ಆ ಸ್ತ್ರೀವಿದ್ಯಾಭ್ಯಾಸಕ್ಕೆ ಸಹಾಯಕರಾಗುವರು, ತಥಾ—ಹಾಗೆ, ಸರ್ವೆ—ಸಮಸ್ತರಾದ ಧಿಕಾರಿಣಃ—ಲೌಕಿಕ ವೈದಿಕ ಕರ್ಮಾಧಿಕಾರಿಗಳಾದ, ಉದ್ಯೋಗಸ್ಥರು ಪಂಡಿತರು, ಅಪ್ರದಕ್ಷಿಣಂ—ಅಯುಕ್ತವಾದ್ದನ್ನು, ಕರಿಷ್ಯಂತಿ—ಮಾಡುತ್ತಾರೆ ॥ ತಾ ॥ ಹೆಣ್ಣುಗಳು ವಿದ್ಯಾಭ್ಯಾಸ ಮಾಡುತ್ತಾರೆ, ಆ

ಕಾರಿಣಸ್ತಥಾಸರ್ವೆ ಕರಿಷ್ಯಂತ್ಯಪ್ರದಕ್ಷಿಣಂ॥೫೮॥ ವಿದ್ಯಾ
ಬಲಾದ್ವೃದ್ಧಿಮಾಪ್ತಾಃ ಸುಂದರ್ಯೋ ಸುಂದರಪ್ರಿಯಾಃ
ತ್ಯಕ್ತ್ವಾಪತಿಂನಿಜಗೃಹೇಅನ್ಯಂಯಾಂತಿಮಹಾನಿಶಿ ॥ ೫೯ ॥
ಜನಕೇನಾದೃತಾಸ್ಸರ್ವಾಃಮಾತ್ರಾಭರ್ತ್ರಾಕ್ವಚಿಸ್ತ್ರಿಯಃ।
ಕಾಮೈಕತತ್ಪರಾಸ್ಸಂತಃಸಮ್ಯಕ್ಸಂಪ್ರಾಪ್ತವೇತನಾಃ॥೬೦॥

ವಿದ್ಯಾಭ್ಯಾಸಕ್ಕೆ ರಾಜರು ಸಹಾಯ ಮಾಡುತ್ತಾರೆ, ಲೌಕಿಕರು ವೈದಿಕರು ಅದಕ್ಕೆ ಸಹಾಯಕರಾಗಿ ಅಯೋಗ್ಯವಾದ್ದನ್ನು ಮಾಡುವರು॥೫೮॥

ವಿದ್ಯಾಬಲಾತ್-ಅಲಂಕಾರ ಸಂಗೀತ ಸಾಹಿತ್ಯ ತರ್ಕ ಮುಂತಾದ ವಿದ್ಯೆಗಳಬಲದಿಂದ ವೃದ್ಧಿಂ-ಧನಯೌವ್ವನದುರ್ಜ್ಞಾಗನಗಳಅಭಿವೃದ್ಧಿಯಂನು ಆಪ್ತಾಃ-ಪಡದ್ಧವರಾದ, ಸುಂದರ್ಯಃ-ಹೆಂಗಸರು, ಸುಂದರಪ್ರಿಯಾಃ-ಸುಂದರ ಪುರುಷರಮೇಲೆ ಮೋಹವುಳ್ಳವರಾಗಿ, ನಿಜಗೃಹೆ-ತಂನ ಮನೆಯಲ್ಲಿ ಪತಿಂ-ಗಂಡನಂನು, ತ್ಯಕ್ತ್ವಾ-ಮರೆಮಾಜಿಬಿಟ್ಟು, ಮಹಾನಿಶಿ-ಅರ್ಧರಾತ್ರಿಯಲ್ಲಿ ಅನ್ಯಂ-ಮತ್ತೊಬ್ಬನಂನು ಕುರಿತು ಯಾಂತಿ-ರತ್ಯರ್ಥವಾಗಿ ಹೋಗುತ್ತಲಿದ್ದಾರೆ ॥ ತಾ ॥ ಸಂಗೀತ ಸಾಹಿತ್ಯ ಮುಂತಾದ ವಿದ್ಯೆಗಳಂನು ಅಭ್ಯಾಸ ಮಾಡಿರುವ ಸಾಮರ್ಥ್ಯದಿಂದ ಹೆಂಗಸರು ಧನ ಯೌವ್ವನ ದುರ್ಜ್ಞಾನಗಳಅಭಿವೃದ್ಧಿಯಂನು ಪಡದವರಾಗಿ ಚೆಲುವಿಕೆಯುಳ್ಳವರಮೇಲೆ ಮೋಹವುಳ್ಳವರಾಗಿ ತಂನ ಗಂಡನಂನು ಮನೆಯಲ್ಲಿ ಬಿಟ್ಟು ಅರ್ಧರಾತ್ರಿಯಲ್ಲಿ ಪರ ಪುರುಷನ ಬಳಿಗೆ ಹೋಗುವರು ॥ ॥೫೯॥

ಸ್ತ್ರೀಯಃ-ಹೆಂಗಸರು, ಜನಕೇನ-ತಂದೆಯಿಂದ, ಮಾತ್ರಾ-ತಾಯಿಯಿಂದಲೂ ಕ್ವಚಿತ್-ಕೆಲವುವೇಳೆ, ಭರ್ತ್ರಾ-ಗಂಡನಿಂದಲೂ, ಆದೃತಾಃ-ಆದರಿಸಲ್ಪಟ್ಟವರಾಗಿ, ಕಾಮೈಕತತ್ಪರಾಃ-ಕಾಮದಲ್ಲಿಯೇ ಮುಖ್ಯವಾದ ತಾತ್ಪರ್ಯ ವುಳ್ಳವರಾಗಿ, ಸಮ್ಯಕ್-ಚೆಂನಾಗಿ, ಸಂಪ್ರಾಪ್ತ-ಉಂಟಾದ, ವೇತನಾಃ-ಸಂಬಳಗಳುಳ್ಳವರಾಗಿ ॥ ತಾ ॥ ತಂದೆಯಿಂದಲೇ ತಾಯಿಯಿಂದಲೂ ಆದರಣೆ ಮಾಡಲ್ಪಟ್ಟವರಾದ ಹೆಂಗಸರು ಕೆಲವ್ವಾಳೆ ಗಂಡನಿಂದಲೂ ಆದರಣೆಮಾಡಲ್ಪಟ್ಟವರಾಗಿ ಕಾಮದಲ್ಲಿ ಮುಖ್ಯಾಸಕ್ತಿ ಯುಳ್ಳವರಾಗಿ, ಮತ್ತು ಸಂಬಳವುಳ್ಳವರಾಗಿ॥ ॥೬೦॥

ಭರ್ತಾರಂನಾನುಮನ್ಯಂತೆ ಪೀತಮಂಡಾಂಸುರಾಮಿವ ।
ಮೃತ್ಯುಸ್ವರೂಪಾಗೃಹಿಣೀಕಲೌಭರ್ತುರ್ಗೃಹೇಗೃಹೆ ॥೬೧॥
ನಿಸ್ಸ್ವಾಧ್ಯಾಯವಷಟ್ಕಾರಾಹಾಹಾಭೂತದಿಗಂತರಾ । ಅ
ಚಿರೇಣೈವಕಾಲೇನಭೂಮಿರ್ದುರ್ಜನಸಂಯುತಾ । ಅಯೋ
ಗ್ಯರೂಪಾಭವತಿಜನಃಕರಹತೋಭವೇತ್ ॥ ೬೨ ॥ ತ್ಯಾಜ

ಪೀತಮಂಡಾಂ–ಸಾರಾಂಶವಾದನೊರೆಯಿಲ್ಲದ, ಸುರಾಂಮಿವ–ಹೆಂಡ ದಂತೆ; ಭರ್ತಾರಂ–ಗಂಡನನ್ನು, ನಾನುಮನ್ಯಂತೆ–ಸಮ್ಮತಿಸಿರುವದಿಲ್ಲ, ಕಲೌ–ಕಲಿಯುಗದಲ್ಲಿ, ಗೃಹಿಣೀ–ಹೆಂಡತಿಯು, ಭರ್ತುಃ–ಗಂಡನಿಗೆ, ಗೃಹೇಗೃಹೆ–ಪ್ರತಿ ಮನೆಯಲ್ಲಿಯೂ, ಮೃತ್ಯು ಸ್ವರೂಪಾ–ಮೃತ್ಯುವಿನಂ ತೆ ಬಾಧೆಯನ್ನು ಮಾಡುವವಳಾಗುವಳು॥ ತಾ ॥ ನೊರೆತೆಗದ ಹೆಂಡದಂ ತೆ ಗಂಡನನ್ನು ಅನುಸರಿಸಿ ಹೋಗುವವರಾಗುವದಿಲ್ಲ ಕಲಿಯುಗದಲ್ಲಿ ಹೆಂಡತಿಯಾದವಳು ಅವರವರ ಮನೆಯಲ್ಲಿ ಗಂಡನಿಗೆ ಮೃತ್ಯು ಸ್ವರೂಪ ಳಾಗಿರುವಳು ॥ ॥೬೧॥

ಭೂಮಿಃ–ನೆಲವು, ನಿಸ್ಸ್ವಾಧ್ಯಾಯವಷಟ್ಕಾರಾ–ವೇದ ವಷಟ್ಕಾರಾದಿಗ ಳಿಲ್ಲದ್ದಾಗಿಯೂ, ಹಾಹಾಭೂತದಿಗಂತರಾ–ಹಾಹಾಕಾರದಿಂದ ಕೂ ಡಿದ ದಿಕ್ತಟಗಳುಳ್ಳದ್ದಾಗಿಯೂ, ಅಚಿರೇಣ–ಜಾಗ್ರತೆಯಾಗಿ, ಕಾಲೇನ– ಸಮಯ ಪರತಂತ್ರತೆಯಿಂದ, ದುರ್ಜನಸಂಯುತಾ–ದುಷ್ಟಜನರಿಂದ ಕೂಡಿರುವದಾಗಿಯೂ, ಅಯೋಗ್ಯರೂಪಾ–ಯೋಗ್ಯವಾದಸ್ವರೂಪವಿ ಲ್ಲದ್ದಾಗಿಯೂ ಇರುವದು,ಅಂದರೆ ಬೆಳೆಯಿಲ್ಲದೆ ಆಗಾಗ್ಯೆ ಜನರಿಗೆ ವಾಸ ಕ್ಕೆ ಅಯೋಗ್ಯವಾಗಿ ಹೋಗುವದೆಂಬ ಭಾವವು ॥ ಜನಃ–ಜನವು, ಕರ ಹತಃ–ತೀರುವೆಗಳುಳ್ಳವರಾಗಿ, ಭವೇತ್–ಆದೀತು ॥ ತಾ ॥ ಭೂಮಿಯು ವೇದವಷಟ್ಕಾರಶಬ್ದೋಚ್ಚಾರಣೆಯು ಇಲ್ಲದ್ದಾಗಿಯೂ ಹಾಹಾಕಾರದಿಂ ದ ಕೂಡಿರುವ ದಿಕ್ತಟಗಳುಳ್ಳದ್ದಾಗಿಯೂ ದುಷ್ಟಜನರಿಂದ ಕೂ ವದಾಗಿಯೂ ಆಗಿ ಅಲ್ಪಕಾಲದಲ್ಲಿಯೇ ತೃಣಕಾಷ್ಠ ಜಲಧಾನ್ಯ ವೃದ್ಧಿಗಳಿಲ್ಲದೆ ವಾಸಕ್ಕೆಯೋಗ್ಯವಾಗದೇ ಇರುವದು ॥ ಜನರು ಕಂ ಯ ಕಾಣಿಕೆ ಕಪ್ಪಗಳಿಂದ ಪೀಡಿತರಾಗುವರು ॥ ॥೬೨॥

ತಾ–ತಂದೆಯು, ಬಕವೃತ್ತಿಂ–ಕೊಕ್ಕರೆಯಂತೆ ಮೌನವಾಗಿಯೂ ಯೂ ಮೋಸಂಗಿಯಾಗಿ ಇದ್ದುಕೊಂಡು, ಭರ್ತಾರಂ–ಗಂ

ಮಿತ್ವಾತುಭರ್ತಾರಂ ಬಕವೃತ್ತಿಂ ಸಮಾಶ್ರಿತಃ । ಪಿತಾಪು
ತ್ರೀಂಪಾಲಯತಿಜ್ಞಾತ್ವಾಧರ್ಮಾನಪಿಸ್ವಯಂ ॥ ೬೩ ॥
ಭೃತಕಾಧ್ಯಾಪಕಾಸ್ಸರ್ವೇಭೃತಕಾಧ್ಯಾಯಿನಸ್ಸದಾ । ಸಂ
ಧ್ಯಾದಿಕರ್ಮರಹಿತಾಃಪಾಠಯಂತಿಶ್ರುತಿಂದ್ವಿಜಾಃ ॥ ೬೪ ॥
ಪಿತುಃಶ್ರಾದ್ಧಂ ಕರಿಷ್ಯಂತಿ ನಿಯಮೇನ ವಿವರ್ಜಿತಾಃ ।

ಡನಂನು, ತ್ಯಾಜಯಿತ್ವಾ-ಬಿಡಿಸಿ, ಸ್ವಯಂ-ತಾನು, ಧರ್ಮಾ–ಸ್ತ್ರೀ ಧರ್ಮಗಳಂನು, ಜ್ಞಾತ್ವಾಪಿ-ತಿಳಿದವನಾದಾಗ್ಯೂ ಪುತ್ರೀಂ-ಮಗಳಂನು ಪಾಲಯತಿ-ತಂನ ಮನೆಯಲ್ಲಿಯೇ ಇಟ್ಟುಕೊಂಡು, ಕಾಪಾಡುತ್ತಿರುವನು ॥ತಾ॥ ತಂದೆಯಾದವನು ತಾನು ಸಮಸ್ತ ಧರ್ಮಗಳಂನು ತಿಳಿದವನಾದಾಗ್ಯೂ ಗಂಡನಂನು ಪರಿತ್ಯಾಗ ಮಾಡಿಸಿ ಕೊಕ್ಕರೆಯಂತೆ ತಾನು ಏನೂ ತಿಳಿಯದವನಂತೆ ಇರುವವನಾಗಿ ತಂನ ಮಗಳಂನು ಕಾಪಾಡುತ್ತಿರುವನು ॥ ॥ ೬೩ ॥

ಸರ್ವೇದ್ವಿಜಾಃ-ಸಮಸ್ತ ಬ್ರಾಹ್ಮಣರು, ವೇದವಂನು ಸಂಬಳತೆಗೆದುಕೊಂಡುಹೇಳುತ್ತಿರುವವರಾಗಿ ಸದಾ-ಯಾವಾಗಲೂ, ಭೃತಕಾಧ್ಯಾಯಿನಃ-ಭೃತಕದಿಂದ ವೇದವಂನು ಹೇಳುವವರಲ್ಲಿ ತಾವು ಓದುವವರಾಗಿ ಸಂಧ್ಯಾದಿಕರ್ಮರಹಿತಾಃ-ಸಂಧ್ಯಾವಂದನೆ, ಅಗ್ನಿಕಾರ್ಯ,ಔಪಾಸನಾದಿಗಳಂನುಬಿಟ್ಟವರಾಗಿ, ಶ್ರುತಿಂ-ವೇದಮಂತ್ರವಂನು, ಪಾಠಯಂತಿ ಹೇಳಿಕೊಡುತ್ತಿರುವರು ॥ ತಾ ॥ ವೇದವಂನು ಓದಿದವರಾದ, ಸಮಸ್ತ ಬ್ರಾಹ್ಮಣರು ಸಂಬಳವಂನು ತೆಗೆದುಕೊಂಡು ವೇದಗಳಂನು ಶಿಷ್ಯರಿಗೆ ಹೇಳುವರು ॥ ಶಿಷ್ಯರಾದವರು ಭೃತಕಾಧ್ಯಾಪನ ಮಾಡುವರ ಬಳಿಯಲ್ಲಿಯೇ ಓದುತ್ತಾ ಇರುವವರಾಗುವರು ॥ ಈ ಗುರುಶಿಷ್ಯರಿಬ್ಬರು ಸಂಧ್ಯಾವಂದನೆ ಔಪಾಸನೆ ಅಗ್ನಿಕಾರ್ಯಗಳಂನು ಮಾಡದೇ ಶ್ರುತಿಯಂಸಾಧಿಸುತ್ತಿರುವರು ॥ ॥

ನಿಯಮೇನ-ಶ್ರಾದ್ಧಕ್ಕೆ ಹೇಳಿರುವ, ನಿಯಮದಿಂದ, ವಿವರ್ಜಿತಾ ರಹಿತರಾಗಿ, ಪಿತುಃ-ತಂದೆಗೆ, ಶ್ರಾದ್ಧಂ-ತಿಥಿಯಂನು ಕರಿಷ್ಯಂತಿ-ಡುತ್ತಾರೆ, ಅಂನಾನಾಂ-ಆಮಾಂನ, ಶೂದ್ರಾಂನ, ಗಣಿಕಾಂನ, ದ್ಧಾಂನ ಮುಂತಾದ ಅಂನಗಳು, ನಿಯಮಃ-ತಿಂನಬಾರದೆ

ಅನ್ನಾನಾಂ ನಿಯಮೋನಾಸ್ತಿಯೋನೀನಾಂ ನಿಯಮೋನ
ಹಿ ‖ ೬೫‖ ದದಾತಿಯಸ್ಯಯೊಮರ್ತ್ಯಃಸಸಸ್ವಾಮಿಕಲೌ
ಯುಗೆ‖ಕಲೌಸತ್ಯವಿಹೀನಾಶ್ಚ ನೀಚಾನ್ನ ನಿರತಾಸ್ಸದಾ‖ಜ
ಪಸಂಧ್ಯಾಭಾಸಯುತಾಃಡಾಂಭಿಕಾಃಪಶುವೃತ್ತಯಃ‖
ನೀಚಸ್ತ್ರೀನಿರತಾಸ್ಸರ್ವೆತೇಜೋಹೀನಾಭವಂತಿಹಿ ‖೬೭‖

ವು, ನಾಸ್ತಿ–ಇಲ್ಲವು, ಯೋನೀನಾಂ–ಹೆಂಡತಿ, ತಾಯಿ; ತಂಗಿ, ಎಂಬ ಯೋನಿಗಳ, ನಿಯಮಃ–ಹೋಗಬಹುದು ಹೋಗಬಾರದೆಂಬ ನಿಯಮ ವು ನಹಿ–ಇರುವದಿಲ್ಲ ‖ ತಾ ‖ ಶ್ರಾದ್ಧಕ್ಕೆ ಹೇಳಿರುವ ನಿಯಮಗಳನ್ನು ಬಿಟ್ಟು ಶ್ರಾದ್ಧವನ್ನು ತಂದೆಗೆ ಮಾಡುತ್ತಿರುವರು, ಈ ಅನ್ನ ತಿನ್ನಬ ಹುದು ಈ ಅನ್ನ ತಿಂನಬಾರದೆಂಬ ನಿಯಮವಿಲ್ಲದೆ ಇರುತ್ತಾರೆ ‖ ಅಕ್ಕೆ ತಂಗಿ ತಾಯಿ ಹೆಂಡತಿ ಎಂಬ ವಾವಿವರಸೆಗಳಂನು ಬಿಟ್ಟು ನಡೆಯುವಂ ಥಾವರಾಗುವರು‖ ‖೬೫‖

ಯಸ್ಯ–ಯಾವನಿಗೆ, ಯಃಮರ್ತ್ಯಃ–ಯಾವ ಮನುಷ್ಯ,ವಿತ್ತಂ–ಹಣವ ನ್ನು ದದಾತಿ–ಕೊಡುತ್ತಾನೋ, ಸಃಸಃ–ಅವನವನು–ಅವನು, ಕಲೌ ಯುಗೆ–ಕಲಿಯುಗದಲ್ಲಿ,ಸ್ವಾಮೀ–ಪ್ರಭುವಾಗುವನು‖ಕಲೌ–ಕಲಿಯುಗ ದಲ್ಲಿ,ಸದಾ–ಯಾವಾಗಲೂ, ಸತ್ಯವಿಹೀನಾಶ್ಚ–ಸ- ವಿಲ್ಲದವರಾಗಿಯೂ, ನೀಚಾನ್ನ ನಿರತಾಃ–ನೀಚವಾದ ಅನ್ನವನ್ನು ತಿನ್ನುವವರಾಗಿಯೂ,ಜಪ ಸಂಧ್ಯಾಭಾಸಯುತಾಃ–ಜಪ, ಸಂಧ್ಯಾವಂದನೆ ಮುಂತಾದ ಕರ್ಮಗಳ ಆ ಭಾಸವುಳ್ಳವರಾಗಿಯೂ,ಡಾಂಭಿಕಾಃ–ಡಂಭವುಳ್ಳವರಾಗಿಯೂ,ಪಶುವೃತ್ತ ಯಃ–ದನಗಳಂತೆ ಆಹಾರ ನಿದ್ರಾಮೈಥುನಗಳೆಂಬ ಪಶುಧರ್ಮಗಳುಳ್ಳವ ರಾಗಿಯೂ,ನೀಚಸ್ತ್ರೀನಿರತಾಃ–ವಿಧವೆ ಮುಂತಾದ ಜಾರಸ್ತ್ರೀನಿರತ ರಾಗಿಯೂ, ಸರ್ವೆ–ಸಮಸ್ತ ದ್ವಿಜರು,ತೇಜೋ ಹೀನಾಃ–ಬ್ರಹ್ಮತೇ ಜೋರಹಿತರಾಗಿಯೂ, ಭವಂತಿ–ಆಗುತ್ತಲಿದ್ದಾರೆ ‖ತಾ‖ ಕಲಿಯುಗದ ಲ್ಲಿ ಯಾವ ಮನುಷ್ಯನು ಯಾರಿಗೆ ಧನವನ್ನು ಕೊಡುವನೊ ಅವನೇ ಅ ವನಿಗೆ ಪ್ರಭುವಾಗಿರುವನು ‖ ಕಲಿಯುಗದಲ್ಲಿ ಸತ್ಯವಿಲ್ಲದವರಾಗಿ, ನೀಚ ಜಾತಿಗಳ ಅನ್ನವನ್ನು ತಿನ್ನುತ್ತಿರುವರು ‖ ಜಪಸಂಧ್ಯಾಕಾರ್ಯಗಳನ್ನು ಬಿಟ್ಟು, ಪಶುಗಳಂತೆ ಆಹಾರನಿದ್ರಾ ಮೈಥುನಗಳುಳ್ಳವರಾಗಿ, ಡಂಭವು

ತತಶ್ಚತುಸ್ಸಹಸ್ರಾಂತೇಶಿಲಾಸ್ಥಾಸ್ಸರ್ವದೇವತಾಃ । ಪರಿ
ತ್ಯಜಂತಿಭೂಭಾಗಂಯೇಧಮಾನೇಮಹಾಕಲೌ ॥೬೪॥ ಕ
ಲೌಪಂಚಸಹಸ್ರಾಂತೇಜಾಯತೇವರ್ಣಸಂಕರಃ। ವೇದಾಚಾ
ರಾಃಪ್ರಶಾಮ್ಯಂತಿಪಾಪಿನೋವೃದ್ಧಿಮಾಪ್ನುಯುಃ ॥ ೬೫ ॥

ಹ್ಟವರಾಗಿಯೂ ಇದ್ದುಕೊಂಡು, ನಿಜಜಾತಿಸ್ತ್ರೀಸಮಾಗಮವನ್ನು ಮಾಡುತ್ತಾ ತೇಜೋಹೀನರಾಗಿ ಹೋಗುವರು॥ ॥೬೩॥

ತತಃ-ಆಬಳಿಕ, ಚತುಸ್ಸಹಸ್ರಾಂತೇ-ನಾಲ್ಕು ಸಾವಿರ ವರ್ಷಗಳು ಪೂರ್ತಿಯಾಗುವ ಸಮಯದಲ್ಲಿ, ಶಿಲಾಸ್ಥಾಃ-ಕಾಶೀ ಮುಂತಾದ ಕ್ಷೇತ್ರಗಳಲ್ಲಿ ಶಿಲಾ ರೂಪದಲ್ಲಿ ಇರುತ್ತಿದ್ದ, ಸರ್ವ ದೇವತಾಃ-ಸಕಲ ದೇವತೆಗಳು, ಮಹಾಕಲೌ-ಮಹಾ ಕಲಿಯು, ಏಧಮಾನೇ-ಸತಿ-ಅಭಿವೃದ್ಧಿಯಾಗುತ್ತಾ ಬರಲು, ಭೂಭಾಗಂ--ಜಂಬೂದ್ವೀಪದಲ್ಲಿರುವ ಭರತವರ್ಷದ ಭೂಪ್ರದೇಶವನ್ನು, ಪರಿತ್ಯಜಂತಿ-ಬಿಡುವರು ॥ತಾ॥ ಮಹಾ ಕಲಿಯು ದಿನದಿನಕ್ಕೆ ಹೆಚ್ಚುತ್ತಿರಲೂ, ಜಂಬೂದ್ವೀಪದಲ್ಲಿ ಇರುವ ಶಿಲಾ ಮೂರ್ತಿಗಳಲ್ಲಿ ನೆಲೆಯಾಗಿದ್ದ ಸಕಲ ದೇವತೆಗಳು, ನಾಲ್ಕು ಸಾವಿರ ವರ್ಷಗಳು ತುಂಬುವದರೊಳಗಾಗಿ ಆ ಶಿಲಾ ಮೂರ್ತಿಗಳನ್ನು ಬಿಟ್ಟು ಹೋಗುವವು ॥ ॥೬೪॥

ಕಲೌ-ಕಲಿಯುಗದಲ್ಲಿ, ಪಂಚಸಹಸ್ರಾಂತೇ-ಐದು ಸಹಸ್ರವರ್ಷಪೂರ್ತಿಯಾಗುವಾಗ್ಯೆ. ವರ್ಣಸಂಕರಃ-ವರ್ಣಗಳ ಸಾಂಕರ್ಯವು, ಜಾಯತೇ-ಉಂಟಾಗುವದು, ವೇದಾಚಾರಾಃ-ವೇದಗಳಲ್ಲಿ ಹೇಳಲ್ಪಟ್ಟ ಆಚಾರಗಳು, ಪ್ರಶಾಂಮ್ಯಂತಿ- ಶಾಂತವಾಗುವವು, ಪಾಪಿನಃ-ಪಾಪಿಷ್ಠರಾದವರು, ವೃದ್ಧಿಂ-ಅಭಿವೃದ್ಧಿಯನ್ನು, ಆಪ್ನುಯುಃ-ಹೊಂದುವರು, ॥ ತಾ ॥ ಕಲಿಯುಗದಲ್ಲಿ ಐದುಸಾವಿರ ವರ್ಷಗಳು ಪೂರ್ತಿಯಾಗುವಾಗ್ಯೆ,(ಅಗ್ನಿಯಂ ಸೇವಿಸಬೇಕು,ಸಂಧ್ಯೆಯಂಮಾಡಬೇಕು, ಸುರಾಪಾನ ಮಾಡಬಾರದು,ಅಭಕ್ಷ್ಯಭಕ್ಷಣವನ್ನು ಮಾಡಬಾರದು, ಎನ್ನುವುದೇ ಮೊದಲಾದ ವೇದಪ್ರತಿಪಾದ್ಯವಾದಸದಾಚಾರಗಳು, ನಿಂತುಹೋಗುವವು,ಸಂಧ್ಯಾದಿ ಸತ್ಕರ್ಮಗಳನ್ನು ಬಿಟ್ಟವರಾದ ನೀಚಜನರು ಕ್ಷೇಮವುಳ್ಳವರಾದಾರು ॥ ॥೬೫॥

ಕಲೌ ಪಂಚಸಹಸ್ರಾಂತೆವಿಷ್ಣುಸ್ತ್ಯಕ್ಷ್ಯತಿಮೇದಿನೀಂ ।
ಕಲೌ ಪಂಚಸಹಸ್ರಾಂತೆಬ್ರಾಹ್ಮಣೈರ್ವೇದಪಾರಗೈಃ॥ಪ್ರಾ
ಮಾಣ್ಯಂವೇದಶಾಸ್ತ್ರಾಣಾಂಮರ್ಯಾದಾಚವಿನಶ್ಯತಿ ॥೨೦॥
ಕಲೌ ಪಂಚಸಹಸ್ರಾಂತೆಗಂಗಾತ್ಯಕ್ಷ್ಯತಿಮೇದಿನೀಂ । ಕ್ರಿ
ಮಯಸ್ಸಂಪ್ರಜಾಯಂತೆಮರ್ಕಟೀತಂತುಸನ್ನಿಭಾಃಕಲೌ
ದಶಸಹಸ್ರಾಂತೆಶಿವಸ್ತ್ಯಕ್ಷ್ಯತಿಮೇದಿನೀಂ ॥೨೧॥ಕ್ಷೇತ್ರಾ

ಕಲೌ-ಕಲಿಯುಗದಲ್ಲಿ, ಪಂಚಸಹಸ್ರಾಂತೆ-ಐದು ಸಾವಿರ ವರ್ಷ ಪೂರ್ತಿಯಾಗುವಾಗ್ಯೆ, ವಿಷ್ಣುಃ-ಯಜ್ಞಪುರುಷನು, (ಮತ್ತು ವಿಷ್ಣುಃ-ಕ್ಷತ್ರಿಯವರ್ಣವು, ಮೇದಿನೀಂ-ಭೂಮಿಯನ್ನು, ತ್ಯಕ್ಷ್ಯತಿ-ಬಿಡುತ್ತದೆ, ಅಂದರೆ ನಂದಾಂತಂಕ್ಷತ್ರಿಯಕುಲಂ-ಎಂಬ ನ್ಯಾಯದಿಂದ ಯಜ್ಞಗಳು, ಕ್ಷತ್ರಿಯರು ಇರುವದಿಲ್ಲವು॥ ಕಲೌ-ಕಲಿಯುಗದಲ್ಲಿ, ಪಂಚಸಹಸ್ರಾಂತೆ-ಐದು ಸಾವಿರ ವರ್ಷವು ಪೂರ್ತಿಯಾಗುವಾಗ್ಯೆ, ವೇದಪಾರಗೈಃ-ವೇದಜ್ಞರಾದ, ಬ್ರಾಹ್ಮಣೈಃ-ಬ್ರಾಹ್ಮಣರಿಂದ, ವೇದಶಾಸ್ತ್ರಾಣಾಂ-ವೇದಶಾಸ್ತ್ರಗಳ, ಪ್ರಾಮಾಣ್ಯಂ--ಪ್ರಮಾಣತೆಯು ಮರ್ಯಾದಾ-ಪದ್ಧತಿಯು, ವಿನಶ್ಯತಿ-ನಾಶವಾಗುವದು. ॥ತಾ॥ ಕಲಿಯುಗದಲ್ಲಿ ಐದು ಸಾವಿರ ವರ್ಷಗಳು ಪೂರ್ತಿಯಾಗುವಾಗ್ಯೆ, ಯಜ್ಞಗಳು, ಕ್ಷತ್ರಿಯರಾದ ರಾಜರು ಇರುವದಿಲ್ಲ, ವೇದಶಾಸ್ತ್ರಗಳನ್ನು ತಿಳಿದವರಾದ ಬ್ರಾಹ್ಮಣರಿಂದಲೇ,ವೇದಶಾಸ್ತ್ರಗಳ ಪ್ರಾಮಾಣ್ಯವು, ಮರ್ಯಾದೆಯು ಸಹಾ ಕೆಡಿಸಲ್ಪಡುವದು ॥ ॥೨೦॥

ಕಲೌ-ಕಲಿಯುಗದಲ್ಲಿ, ಪಂಚಸಹಸ್ರಾಂತೆ-ಐದುಸಾವಿರ ವರ್ಷಗಳು ಪೂರ್ತಿಯಾಗುವಾಗ್ಯೆ, ಗಂಗಾ-ಗಂಗೆಯು, ಮೇದಿನೀಂ-ಭೂಮಿಯನ್ನು, ತ್ಯಕ್ಷ್ಯತಿ--ಬಿಡುತ್ತಿರುವಳು, ಮರ್ಕಟೀತಂತುಸನ್ನಿಭಾಃ-ಕೋತಿಯ ಕೂದಲಿನಂತಿರುವ, ಕ್ರಿಮಯಃ-ಕ್ರಿಮಿಗಳು, ಸಂಪ್ರಜಾಯಂತೆ-ಹುಟ್ಟುವವು॥ತಾ॥ಕಲೌ-ಕಲಿಯುಗದಲ್ಲಿ, ದಶಸಹಸ್ರಾಂತೆ-ಹತ್ತು ಸಾವಿರ ವರ್ಷಗಳು ಪೂರ್ತಿಯಾಗುತ್ತಲೂ, ಶಿವಃ-ವೇದಪುರುಷನು, ಮೇದಿನಿಂ-ಭೂಮಿಯನ್ನು, ತ್ಯಕ್ಷ್ಯತಿ-ಬಿಡುವನು. ॥ತಾ॥ ಕಲಿಯುಗದಲ್ಲಿ, ಐದು ಸಾವಿರ ವರ್ಷಗಳು ಕಳೆಯುವಾಗ್ಯೆ, ಗಂಗೆಯು ಭೂ

ಣಾಂಮಹಿಮಾಗಚ್ಛತ್ಯಾಕಾಶೀಬೃಂದಾವನಂವಿನಾ॥ಕಾಶ್ಯಾಂ
ತುಮರಣಾನ್ಮುಕ್ತಿಸ್ತಥಾಬೃಂದಾವನೇಪಿಚ । ಭವಿಷ್ಯತಿನ
ಸಂದೇಹಃವಿಧಮಾನೇಮಹಾಕಲೌ ॥೭೨॥ಮದ್ಯಮಾಂಸರತಾ
ವಿಪ್ರಾಃಮ್ಲೇಚ್ಛಾಚಾರಯುತಾಸ್ಸದಾ। ಮ್ಲೇಚ್ಛದೇಶಾನ್ಪ್ರ

ಮಿಯನ್ನು ಬಿಡುವಳು, ಆಗ ಗಂಗೆಯಲ್ಲಿ ಕೋಡುಗದ ಕೊದಿಲಿಗೆ ಸರಿಯೊದ ಹುಳಗಳು ಗಂಗೆಯನ್ನಿಟ್ಟರೆ ಉಂಟಾಗುವವು॥ಹತ್ತುಸಾವಿರವರ್ಷಗಳು ಕಳಿಯುವಾಗ್ಯೆ, ವೇದಗಳು ಭೂಮಿಯಲ್ಲಿ ಇಲ್ಲದೇ ಹೋಗುವವು ॥ ॥೭೧॥

ಮಹಾಕಲೌ-ಮಹಾ ಕಲಿಯು, ವಿಧಮಾನೇಸತಿ-ಅಭಿವೃದ್ಧಿಯಾಗುತ್ತಿರಲೂ,ಕಾಶೀಬೃಂದಾವನಂ-ವಿನಾ-ಕಾಶಿಯನ್ನು, ಬೃಂದಾವನವನ್ನು ಬಿಟ್ಟು,(ಉಳಿದ) ಮಹಿಮಾ-ಪುಣ್ಯಕ್ಷೇತ್ರಗಳ ಮಹಿಮೆಯು. ಗಚ್ಛೇತ್-ಹೋಗುವದು॥ ಕಾಶ್ಯಾಂ—ಕಾಶಿಯಲ್ಲಿ, ಮರಣಾತ್_ಮೃತಿಯಿಂದ ಮುಕ್ತಿಃ-ಮೋಕ್ಷವು, ಭವಿಷ್ಯತಿ-ಲಭಿಸುವುದು, ತಥಾ-ಹಾಗೆ, ಬೃಂದಾವನೇಪಿಚ-ಬೃಂದಾವನ ಕ್ಷೇತ್ರದಲ್ಲಿಯೂ, ಭವಿಷ್ಯತಿ-ಮೋಕ್ಷವು ಲಭಿಸುವದು, ಸಂದೇಹಃ-ಸಂಶವು, ನ-ಇಲ್ಲ. ॥ತಾ॥ ಮಹಾ ಕಲಿಯು ಬೆಳೆಯುತಾ ಬರಲು, ಕಾಶೀಬೃಂದಾವನ ಕ್ಷೇತ್ರಗಳನ್ನು ಬಿಟ್ಟು, ಉಳಿದ ಪುಣ್ಯಕ್ಷೇತ್ರಗಳ ಮಹಿಮೆಯು ಹೋಗುವದು ॥ ಕಾಶಿಯಲ್ಲಿ ಬೃಂದಾವನದಲ್ಲಿಯೂ ಮರಣದಿಂದ ಕಲಿಯಲ್ಲಿಯೂ ಮುಕ್ತಿಯಾಗುವದು, ಈ ವಿಷಯದಲ್ಲಿ ಸಂದೇಹವಿಲ್ಲವು ॥ ॥೭೨॥

ವಿಪ್ರಾಃ-ಬ್ರಾಹ್ಮಣರು, ಮದ್ಯಮಾಂಸರತಾಃ-ಮದ್ಯವನ್ನು, ಮಾಂಸವನ್ನು ಸೇವಿಸುತ್ತಿರುವವರಾಗಿ,ಸದಾ-ಯಾವಾಗಲೂ,ಮ್ಲೇಚ್ಛಾಚಾರಯುತಾಃ-ಮ್ಲೇಚ್ಛಾಚಾರದಿಂದ ಕೂಡಿದವರಾಗಿ, ತ್ಯಕ್ತಧರ್ಮಾಃ-ಬ್ರಾಹ್ಮಣ ಧರ್ಮಗಳನ್ನು ಬಿಟ್ಟವರಾಗಿ, ವಿಲಕ್ಷಣಾಃ-ತಮ್ಮ ವಂಶೀಯರಿಂದ ಆಚರಿಸುತ್ತಿದ್ದ ವೇಷಭಾಷಾಚಾರಾಹಾರಗಳನ್ನು ಬಿಟ್ಟು, ತದೀಯಾಚಾರಪರರಾಗಿ. ಮ್ಲೇಚ್ಛದೇಶಾನ್--ಅಬ್ರಹ್ಮಭೂಮಿಷ್ಠಗಳನ್ನು ಕುರಿತು, ಪ್ರಯಾಸ್ಯಂತಿ—ಹೋಗುತ್ತಲಿದ್ದಾರೆ. ॥ತಾ॥ ಬ್ರಾಹ್ಮಣರು ಮದ್ಯಮಾಂಸಗಳನ್ನು ಸೇವಿಸುತ್ತಿರುವವರಾಗಿ ಮ್ಲೇಚ್ಛಾಚಾರವುಳ್ಳವ

ಯಾಸ್ಯಂತಿತ್ಯಕ್ತಧರ್ಮಾ ವಿಲಕ್ಷಣಾಃ ॥ ೭೭ ॥ ತದೀಯಾ
ಚಾರ ವೇಷಾಢ್ಯೈ ಸ್ಸಂ ಯುಕ್ತಾಯುಕ್ತಿವಾದಿನಃ । ಅ
ನ್ಯೋನ್ಯಂ ರಮಣೀಸಕ್ತಾಃಭವಿಷ್ಯಂತಿನಸಂಶಯಃ॥೭೮॥
ಪ್ರಜಾಪತಿಂ ಸಮಾರಭ್ಯ ಯಾವದ್ವಜ್ರಾಭಿ ಷೇಚನಂ ।
ತದಾದಿಶೃತಸೇನಾಂತಂಕೃಷ್ಣವಂಶಃಪ್ರವರ್ತತೇ ॥ ೭೯ ॥
ಪಿತಾಮಹಂಸಮಾರಭ್ಯಬೃಹದ್ಬಲಮುಖಾವಾಧಿ । ತದಾದಿ

ರಾಗಿ, ಧರ್ಮಗಳನ್ನು ಬಿಟ್ಟು, ತಮ್ಮ ಕುಲದವರು ನಡಿಸುತ್ತಿದ್ದ, ಕಾರ್ಯ ಗಳಿಗೆ ವಿಲಕ್ಷಣರಾಗಿ, ಮ್ಲೇಚ್ಛದೇಶಗಳನ್ನು ಕುರಿತು ಹೋಗುತ್ತಿ ರುವರು ॥ ॥೭೭॥

ತದೀಯ್ಯಾ-ಮ್ಲೇಚ್ಛಪ್ರಭೇದದವರ, ಆಚಾರವೇಷ್ಯಾಢ್ಯೈಃ-ನಡತೆ ಉಡುಪು, ತೊಡಪು ಮುಂತಾದವುಗಳಿಂದ, ಸಂಯುಕ್ತಾಃ-ಕೂಡಿರುವವ ರಾಗಿ, ಯುಕ್ತಿವಾದಿನಃ-ಕುಯುಕ್ತಿಯನ್ನು ಹೇಳುತ್ತಿರುವವರಾಗಿ. ಅ ನ್ಯೋನ್ಯಂ-ಪರಸ್ಪರವಾಗಿ, ರಮಣೀಸಕ್ತಾಃ-ಅಂಗನೆಯರಲ್ಲಿಆಸಕ್ತಿಯು ಳ್ಳವರು, ಭವಿಷ್ಯಂತಿ-ಆಗುತ್ತಲಿದ್ದಾರೆ, ನಸಂಶಯಃ-ಸಂದೇಹವಿಲ್ಲವು. ॥ತಾ॥ ಹೂಣರ-ಮತ್ತು ಮ್ಲೇಚ್ಛರ ಆಚಾರಭಾಷಾವೇಷಗಳಿಂದ ಕೂ ಡಿದವರಾದ ಬ್ರಾಹ್ಮಣರು ಶಾಸ್ತ್ರವಿರುದ್ಧವಾದ ಕುಯುಕ್ತಿಗಳನ್ನು ಹೇಳುವವರಾಗುತ್ತಾ, ಪರಸ್ಪರ ಸ್ತ್ರೀರತರಾಗುವರು, ಈ ವಿಷಯದ ಲ್ಲಿ ಸಂದೇಹವಿಲ್ಲವು ॥ ॥೭೮॥

ಪ್ರಜಾಪತಿಂ-ಬ್ರಹ್ಮನನ್ನು, ಸಮಾರಭ್ಯ-ಮೊದಲ್ಗೊಂಡು, ಯಾ ವದ್ವಜ್ರಾಭಿಷೇಚನಂ-ಬ್ರಹ್ಮನಾದಿಯಾಗಿ ಕೃಷ್ಣನ ಮೊಮ್ಮಗನಾದ ಅನಿರುದ್ಧನ ತನುಜನಾದ ವಜ್ರರಾಯನಿಗೆ ಪಟ್ಟಾಭಿಷೇಕವಾಗುವವರಿ ಗೂ, ತದಾದಿ-ವಜ್ರನಾದಿಯಾಗಿ, ಶೃತಸೇನಾಂತಂ-ಆ ವಂಶದಲ್ಲಿ ಶೃತ ಸೇನನೆಂಬ ರಾಜನು ಜನಿಸುವವರಿಗೂ, ಕೃಷ್ಣವಂಶವು, ಪ್ರವರ್ತತೇ- ನಿಲ್ಲದೆ ಕ್ರಮವಾಗಿ ನಡದುಬರುವದು. ॥ತಾ॥ ವಿಷ್ಣುವಿನಿಂದ ಬ್ರಹ್ಮ ನು ಜನಿಸಿದ ತರುವಾಯ ಕೃಷ್ಣವಂಶದಲ್ಲಿ ಹುಟ್ಟಿದ ವಜ್ರರಾಯನವ ರಿಗೂ, ವಜ್ರನಾದಿಯಾಗಿ, ಶೃತಸೇನನವರಿಗೂ, ಕೃಷ್ಣವಂಶವು ಪ್ರ ಸಿದ್ಧಿಯಾಗಿರುವದು ॥ ॥೭೯॥

ಶಾಕ್ಯಪರ್ಯಂತಂರಾಮವಂಶಃಪ್ರವರ್ತತೇ ॥೭೬॥ ಕಲೌತು
ಕಥಿತೋವಂಶವಿಸ್ತಾರಶ್ಚಂದ್ರ ಸೂರ್ಯಯೋಃ॥ ತತೋಭುವಿ
ಜನಿಷ್ಯಂತಿನರಾನರಕವಾಸಿನಃ ॥ ೭೭ ॥ ಕೃತ್ವಾಬಹೂನಿ
ಪಾಪಾನಿನರಕಾನ್ನೇವಯಾಂತಿತೇ ॥ ತಥಾಪಿ ಪುಣ್ಯವಶತಃ
ಸತ್ಸಂಗಾ ದ್ಜ್ಞಾನತೋನರಾಃ ॥ ಕೃತ್ವಾತು ಸುಕೃತಂ

ಪಿತಾಮಹಂ-ಬ್ರಹ್ಮನನ್ನು, ಸಮಾರಭ್ಯ-ಮೊದಲ್ಗೊಂಡು,ಬೃಹದ್ಬಲನೆಂಬರಾಜನು,ಮುಖಾವಧಿ—ಮೊದಲಾದವರವರಿಗೂ,ತದಾದಿ-ಬೃಹದ್ಬಲಮುಖರು ಹುಟ್ಟಿದ್ದು ಮೊದಲ್ಗೊಂಡು, ಶಾಕ್ಯ-ಪರ್ಯಂತಂ-ಶಾಕ್ಯನೆಂಬರಾಯನು ಹುಟ್ಟುವವರಿಗೂ, ರಾಮವಂಶಃ-ರಾಮದೇವರ ವಂಶವು, ಪ್ರವರ್ತತೇ-ಉಂಟಾಗಿರುವದು, ॥ತಾ॥ ಬ್ರಹ್ಮದೇವರಾದಿಯಾಗಿ ಬೃಹದ್ಬಲರಾಯನವರಿಗೂ, ಬೃಹದ್ಬಲರಾಯನಾದಿಯಾಗಿ ಶಾಕ್ಯರಾಯನವರಿಗೂ ಸೂರ್ಯವಂಶದ ಕ್ಷತ್ರಿಯರು ಶುದ್ಧರಾಗಿರುತ್ತಾರೆ, ॥೭೬॥

ಕಲೌ-ಕಲಿಯುಗದಲ್ಲಿ, ಚಂದ್ರಸೂರ್ಯಯೋಃ-ಚಂದ್ರಸೂರ್ಯರ, ವಂಶವಿಸ್ತಾರಃ-ವಂಶಪರಂಪರೆಯು, ಕಥಿತಃ-ಹೇಳಲ್ಪಟ್ಟಿತು, ತತಃ-ಕಲಿವೃದ್ಧಿಯಾಗುತ್ತಾ ಬಂದಕಾಲಾನಂತರದಲ್ಲಿ, ನರಕವಾಸಿನಃ-ನರಕಲೋಕದಲ್ಲಿ ವಾಸಿಸುವವರಾದ, ನರಾಃ-ಮನುಷ್ಯರು, ಜನಿಷ್ಯಂತಿ-ಹುಟ್ಟುತ್ತಲಿದ್ದಾರೆ, ॥ತಾ॥ ಕಲಿಯುಗದಲ್ಲಿಯೂ ಆಗುತ್ತಿರುವ ಚಂದ್ರಸೂರ್ಯರ ವಿಸ್ತಾರವಾದ ವಂಶಪರಂಪರೆಯನ್ನು ಹೇಳಿದ್ದಾಯಿತು,ಆಳಿಕ ನರಕವಾಸಿಗಳಾದಜನರು ಕಲಿಯುಗದಲ್ಲಿ ಹುಟ್ಟುತ್ತಾ ಬರುವರು. ॥೭೭॥

ಬಹೂನಿ-ಅನೇಕಗಳಾದ, ಪಾಪಾನಿ-ಅಯೋಗ್ಯಗಳಾದ ಬ್ರಹ್ಮಹತ್ಯಾದಿಮಹಾಪಾಪಗಳನ್ನು, ಕೃತ್ವಾ-ಮಾಡಿ, ತೇ-ಆನರಕದಿಂದ ಬಂದಜನರು, ನರಕಾನ್ನೇವ-ನರಕಗಳನ್ನೆ, ಯಾಂತಿ-ಸೇರುತ್ತಾರೆ, ತಥಾಪಿ-ಅಂಥಾಕಲಿಕಾಲವಲ್ಲಿಯೂ, ಪುಣ್ಯವಶತಃ-ಸಂಚಿತಪುಣ್ಯದ ದಶೆಯಿಂದ, ಸತ್ಸಂಗಾತ್-ಯೋಗ್ಯರಸಹವಾಸದಿಂದ, ಜ್ಞಾನತಃ-ಆತ್ಮಜ್ಞಾನದಿಂದ, ನರಾಃ-ಮನುಷ್ಯರು, ಸುಕೃತಂ-ಪುಣ್ಯವನ್ನು, ಕೃತ್ವಾ-ಮಾಡಿ, ಭಕ್ತಿಮಾರ್ಗತಃ-ಭಕ್ತಿಯೋಗವೆಂಬ ದಾರಿಯಿಂದ,ಸುಲೋಕಾ-ಸ್ವರ್ಗಾದಿಲೋಕಗಳನ್ನು ಕುರಿತು, ಯಾಂತಿ-ಹೋಗುತ್ತಾರೆ, ॥ ತಾ॥

ಯಾಂತಿಸುಲೋಕಾ೯ಭಕ್ತಿಮಾರ್ಗತಃ ॥ ೨೪ ॥ ತತಃಕ
ರ್ಮಾನುಸಾರೇಣ ದ್ವಾಪರಾದಿ ಷುಮಾನುಷಾಃ । ಭೂತ್ವಾ
ಯಾಂತ್ಯುತ್ತಮಾ೯ಲೋಕಾ೯ಕ್ರಿಯಾಜ್ಞಾನೇನಮುಚ್ಯ

ನರಕದಿಂದಬಂದವರು, ಪಾಪನಿರತರಾಗಿಯೇ ಇದ್ದು ಪುನಃ ನರಕ ಗಳನ್ನೇ ಸೇರುತ್ತಾರೆ,ಕಲಿಯುಗದಲ್ಲಿ–ಜನ್ಮಾಂತರದಲ್ಲಿ ಸಂಪಾದಿಸಿದ್ದ ಪು ಣ್ಯಪರಿಪಾಕದಿಂದ, ಸತ್ಸಹವಾಸದಿಂದುಂಟಾದ ಭಕ್ತಿಮಾರ್ಗದಿಂದ, ಪು ಣ್ಯಸಂಪಾದಕ ಕೆಲಸಗಳನ್ನು ಮಾಡಿ, ಸ್ವರ್ಗಾದಿಲೋಕಗಳನ್ನು ಹೊಂ ದುತ್ತಾರೆ, ॥೨೪॥

ತತಃ–ಆಮೇಲೆ, ಕರ್ಮಾನುಸಾರೇಣ–ಅವರವರುಮಾಡಿರುವ–ಪುಣ್ಯಕ ರ್ಮಗಳ, ತಾರತಮ್ಯಾನುಸಾರವಾಗಿ, ದ್ವಾಪರಾದಿಷು–ದ್ವಾಪರಯುಗ ತ್ರೇತಾಯುಗ, ಕೃತಯುಗಾದಿಗಳಲ್ಲಿ, ಮಾನುಷಾಃ–ಮನುಷ್ಯರು, ಅಂ ದರೆ–ಬ್ರಹ್ಮ, ಕ್ಷತ್ರಿಯ, ವೈಶ್ಯ,ಶೂದ್ರ,ಚಂಡಾಲಾದಿಗಳ–ಮತ್ತು ಸಂ ಕರಜಾತಿಗಳ ಜನರಾಗಿಯೇ, ಭೂತ್ವಾ–ಹುಟ್ಟಿ, ಉತ್ತಮಾ೯–ಯೋ ಗ್ಯಗಳಾದ, ಲೋಕಾ೯–ಎ ಸ್ವರ್ಗಲೋಕಗಳನ್ನಾಗಲಿ, ತಪೋಲೋ ಕಾದಿ ಲೋಕಗಳನ್ನಾಗಲಿ, ಯಾಂತಿ–ಸೇರುತ್ತಾರೆ, ಕ್ರಿಯಾಜ್ಞಾನೇನ-ಕರ್ಮಸಹಕೃತವಾದ ಜ್ಞಾನದಿಂದ, ಅಥವಾ–ಕ್ರಿಯಾ–ನಾಮರೂಪಗಳ ನ್ನು ಆಶ್ರಯಿಸಿ ಉಂಟಾಗಿರುವ ಕರ್ಮವು, ಜ್ಞಾನೇನ–ಆತ್ಮಜ್ಞಾನದಿಂ ದ, ಮುಚ್ಯತೇ–ವಿಮುಕ್ತಿಯನ್ನೈದುತ್ತದೆ, ॥ತಾ॥ ಈರೀತಿಯಾಗಿ ಭೂ ಲೋಕದಲ್ಲಿ ಜನಿಸಿದ ಮನುಷ್ಯರು, ಅವರವರ ಪುಣ್ಯಕರ್ಮದಂತೆ, ದ್ವಾ ಪರಯುಗದಲ್ಲಿಯಾಗಲಿ,ತ್ರೇತಾಯುಗದಲ್ಲಿಯಾಗಲಿ,ಕೃತಯುಗದಲ್ಲಿಯಾ ಗಲಿಹುಟ್ಟಿದವರಾಗುತ್ತಾ,ಕರ್ಮವನ್ನು ಮಾಡುತ್ತಾ ಜ್ಞಾನವನ್ನು ಸಂಪಾ ದಿಸಿದರೆ ಅದರಿಂದ ಮುಕ್ತಿಯನ್ನೈದುವರು,ನಾಮರೂಪಾತ್ಮಕಪ್ರಪಂ ಚದಲ್ಲಿ ಹುಟ್ಟಿದೇಹಧಾರಿಯಾಗಿರುವ ಕಾರಣದೇಹವಿರುವವರಿಗೂವರ್ಣಾ ಶ್ರಮೋಚಿತ ಕರ್ಮವನ್ನು ಮಾಡುತ್ತಾ ಆತ್ಮಜ್ಞಾನವನ್ನು ಸಂಪಾದಿ ಸಿದವನಾದರೆ ಮೋಕ್ಷವನ್ನು ಪಡಿಯುವದನು,ವರ್ಣಾಶ್ರಮೋಚಿತ ಧರ್ಮ ಕರ್ಮಗಳನ್ನು ಬಿಟ್ಟವನು, ವರ್ಣಾಶ್ರಗಳಿಗಲ್ಲದ ಧರ್ಮಗಳನ್ನು ನಡಿಸು ವವನು ಸಹಾ, ಉತ್ತಮಗತಿಯನ್ನು ಪಡೆಯಲಾರನೆಂಬ ಭಾವವು॥೨೯॥

ತೇ ॥ ೭೯ ॥ ಕಲೌಪಾಪಪರಾಜಾತಾಃ-ನರಕೇನಿವಸಂತಿತೇ ।
ಪುನಃಕಲೌಜನಿಷ್ಯಂತಿನಿವೃತ್ತಾಃಪಾಪಿನೋತತಃ ॥ ೮೦॥
ಯದಾಕಲೇರಂತ್ಯಭಾಗಃ ಸಂಧಿಃಕೃತಯುಗಸ್ಯತು। ಮ್ಲೇ
ಚ್ಛಸಂಘಸಮಾಯುಕ್ತಾಮ್ಲೇಚ್ಛರಾಜಸಮಾವೃತಾ॥೮೧॥
ತದಾಹ್ಯವತರಾಮ್ಯಂಗ ತಾಮ್ರಪರ್ಣೀ ತಟೇಶುಭೇ । ಮಂ
ಗಳೇಶಂಬಳಗ್ರಾಮೇಬ್ರಾಹ್ಮಣಾಧಿಷ್ಠಿತೇವರೇ ॥ ಭವನೇವಿಷ್ಣು
ಯಶಸಃಕಲ್ಕಿ ರ್ಭೂತ್ವಾಶುಬಾಲಕಃ ॥ ಮ್ಲೇಚ್ಛಬಾಲ್ಯೆ

ಕಲೌ-ಕಲಿಯುಗದಲ್ಲಿ, ಜಾತಾಃ-ಹುಟ್ಟಿದವರು, ಪಾಪಪರಾಃ-ಸ್ವರ್ಣಸ್ತೇಯ-ಸುರಾಪಾನ-ಅಗಮ್ಯಾಗಮನ ಅಭಕ್ಷ್ಯ ಭಕ್ಷಣ ಮುಂತಾದ ಪಾಪಗಳನ್ನು ಮಾಡಿದವರಾದ, ತೇ-ಅವರು, ನರಕೇ-ಅಸಿಪತ್ರವುಂತಾದ ನರಕಗಳಲ್ಲಿ, ನಿವಸಂತಿ-ಇರುತ್ತಾರೆ, ತತಃ-ನರಕದಿಂದ, ನಿವೃತ್ತಾಃ-ನರಕಾನುಭವವಾದ ಬಳಿಕಹೊರಟು ಬರುವವರಾದ, ಪಾಪಿನಃ-ದುಷ್ಟರು, ಪುನಃ-ಮತ್ತು, ಕಲೌ-ಕಲಿಯುಗದಲ್ಲಿ, ಜನಿಷ್ಯಂತಿ-ಹುಟ್ಟುತ್ತಾರೆ, ॥ತಾ॥ ಕಲಿಯುಗದಲ್ಲಿ ಹುಟ್ಟಿ ಮಹಾಪಾಪಗಳನ್ನು ಮಾಡುತ್ತಿರುವ ದುಷ್ಟರು, ದೇಹಾವಸಾನದಲ್ಲಿ, ನರಕಕ್ಕೆ-ಹೋಗಿ, ಪುನಃ-ಕಲಿಯುಗದಲ್ಲಿ ಹುಟ್ಟುತ್ತಾರೆ, ॥೮೦॥

ಯದಾ-ಯಾವಾಗ, ಕಲೇಃ-ಕಲಿಯುಗದ, ಅಂತ್ಯಭಾಗಃ-ಕಡೆಯಕಾಲವು, ಕೃತಯುಗಸ್ಯ-ಕೃತಯುಗದ, ಸಂಧಿಃ-ಬರುವಕಾಲವು ಉಂಟಾಗುವದೋ, ತದಾ-ಆಗ, ಮ್ಲೇಚ್ಛರಾಜ-ತುರುಷ್ಕಧೊರಗಳಿಂದ, ಸಮಾವೃತಾ-ಕೂಡಿದ್ದಾಗಿ, ಮ್ಲೇಚ್ಛ ತುರುಷ್ಕರ, ಸಂಘ-ಸಮೂಹಗಳಿಂದ, ಸಮಾಯುಕ್ತಾ-ಕೂಡಿರುವಂಥಾದ್ದು, (ಭೂಮಿಯು ಆಗುತ್ತೆ ॥೮೧॥

ತದಾ-ಆಗ, ಅಂಗ-ಪ್ರಿಯಭಕ್ತನಾದ ವೈಶಾಸನೇ, ಶುಭೇ-ಮಂಗಳಕರವಾದ, ತಾಂಮ್ರ ಪರ್ಣೀತಟೇ-ತಾಂಮ್ರಪರ್ಣೀನದಿಯತೀರದಲ್ಲಿ, ಮಂಗಳೇ-ಶುಭಕರವಾದ, ಬ್ರಾಹ್ಮಣಾಧಿಷ್ಠಿತೇ-ಬ್ರಾಹ್ಮರಿಂದಶೇರಿರುವ, ವರೇ-ಉತ್ತಮವಾದ, ಶಂಬಳಗ್ರಾಮೇ-ಶಂಬಳವೆಂಬಊರಿನಲ್ಲಿ, ವಿಷ್ಣುಯಶಸಃ-ವಿಷ್ಣುಯಶಸ್ಸೆಂಬಬ್ರಾಹ್ಮಣನ, ಭವನೇ-ಮನೆಯಲ್ಲಿ, ಕಲ್ಕಿಃ-ಕಲ್ಕಿಯೆಂಬ ಹೆಸರುಳ್ಳ, ಬಾಲಕಃ-ಪುತ್ರನು, ಭೂತ್ವಾ-ಆಗಿ, ಅವತರಾಮಿ-ನಾನೇ ಅವ

ಶ್ಚ ಕಲಹಾತ್ ದಸ್ಯೂನ್ತಾನ್ನೃಪ ಲಾಂಛನಾನ್ ॥ ಅಶ್ವ
ಮಾಶುಗಮಾರುಹ್ಯ ಕರವಾಲಾದ್ಧನಿಷ್ಯತಿ ॥ ತದಾ ಕೃತ
ಯುಗಂವಿದ್ಧಿ ಪ್ರಜಾಸೂತಿಶ್ಚ ಸಾತ್ವಿಕೀ ॥೪೨॥ ಯದಾದೀ
ಪಕ್ಷಯೋಭೂಯಾ ದ್ವಿಮಾನಪತನಂಯದಾ । ತದಾಕೃತ

ತಾರ ಮಾಡುತ್ತೇನೆ, ಮ್ಲೇಚ್ಛ ಬಾಲೈಶ್ಚ–ತುರುಷ್ಕ ಹುಡುಗರಿಂದ, ಕಲಹಾತ್–ಜಗಳಬರುವದ್ದರಿಂದ, ನೃಪಲಾಂಛನಾನ್–ಧೊರೆಗಳೆಂಬ ಗುರ್ತುಮಾತ್ರದವರಾಗಿ ರಾಜಧರ್ಮಗಳಿಲ್ಲದೆ ಇರುವವರಾದ, ತಾನ್–ದಸ್ಯೂನ್–ಪ್ರಜಾದ್ರವ್ಯಾಪಹಾರಕರಾದ ಆ ಚೋರರನ್ನು,ಆಶುಗಂ–ವೇಗವುಳ್ಳದ್ದಾದ, ಅಶ್ವಂ–ಕುದುರೆಯನ್ನು,ಆರುಹ್ಯ–ಹತ್ತಿಕೊಂಡು, ಕರವಾಲಾತ್–ಕತ್ತಿಯಿಂದ, ಹನಿಷ್ಯತಿ–ಕೊಲ್ಲುತ್ತಾನೆ, ತದಾ–ಆಗ, ಕೃತಯುಗಂ–ಕೃತಯುಗ ಹುಟ್ಟಿದ್ದನ್ನಾಗಿ, ವಿದ್ಧಿ–ತಿಳಿಯುವವನಾಗು. ಪ್ರಜಾಸೂತಿಶ್ಚ–ಜನರ ಉತ್ಪತ್ತಿಯು, ಸಾತ್ವಿಕೀ–ಸತ್ವಗುಣಪ್ರಧಾನವುಳ್ಳದ್ದಾಗಿರುವುದು, ॥ತಾ॥ ಎಲೈಭಕ್ತನಾದವೈಖಾನಸಮುನಿಯೇ, ಆಗ ಭೂಮಿಯೆಲ್ಲಾ ಮ್ಲೇಚ್ಛರಾಜಾಧೀನವಾಗಿರಲು,ಶುಭವಾದ ತಾಂಮ್ರಪರ್ಣೀ ತೀರದದಲ್ಲಿರುವ–ಮಂಗಳಕರವಾದ ಶಂಬಳವೆಂಬ ಗ್ರಾಮದಲ್ಲಿ ವಾಸಸ್ಥಳವುಳ್ಳವನಾದ ವಿಷ್ಣು ಯಶಸ್ಸಿನ ಮನೆಯಲ್ಲಿ,ಆತನಿಗೆ ಕಲ್ಕಿಯೆಂಬ ಹೆಸರಿನಿಂದ ಮಗನಾಗಿ ಹುಟ್ಟಿ, ತುರುಷ್ಕರ ಹುಡುಗರ ಮೂಲಕವಾಗಿ ಉಂಟಾಗುವ ಕಲಹದಿಂಧ-ರಾಜರೆಂಬ ಹೆಸರಿಟ್ಟುಕೊಂಡು, ಪ್ರಜೆಗಳ ಸ್ವತ್ತುಗಳನ್ನು ಕಂದಾಯ ಮೂಲಕವಾಗಿ ಅಪಹರಿಸಿ,-ಬಲಾತ್ಕಾರದಿಂದಗ್ರಹಿಸುತ್ತಿರುವ ಕಂಟಕರನ್ನು ಅಶ್ವವನ್ನೇರಿದವನಾಗಿ, ಕತ್ತಿಯಿಂದಲೆಸಹ್ಮರಿಸಿ ಕಲ್ಕಿಯು ಧರ್ಮವನ್ನು ಸ್ಥಾಪಿಸುತ್ತಾನೆ, ಆಗ ಕೃತಯುಗವುಪ್ರಾರಂಭವಾಗುತ್ತದೆ, ಪ್ರಜೆಗಳ ಸೃಷ್ಟಿಯು ಸತ್ವಗುಣ ಪ್ರಧಾನವಾಗುತ್ತಾ ಬರುವದು ॥ ॥೪೨॥

ಯದಾ–ಯಾವಾಗ, ದೀಪಪಕ್ಷಯಃ–ನನ್ನ ಬಳಿಯಲ್ಲಿ ಇರುವ, ದೀವಿಗೆಯು, ಎಣ್ಣೆಯೇ ಇಲ್ಲದೆ ನಾಶವಾಗುವದು. ಯದಾ–ಯಾವಾಗ, ವಿಮಾನ–ಗೋಪುರದ,ಪತನಂ–ಬೀಳುವಿಕೆಯು,ಭೂಯಾತ್–ಆದೀತು,ತದಾ–ಆಗ,ಕೃತಯುಗಂ–ಕೃತಯುಗವೆಂದು, ವಿದ್ಧಿ–ತಿಳಿಯುವವನಾಗು,

ಯೊಗಂವಿದ್ಧಿ ತದಾಧರ್ಮೋಚತುಷ್ಪದಃ ॥ ೪೩ ॥ ತಪೋ
ಯಜ್ಞಪರಾವಿಪ್ರಾಃ ತದಾಸ್ಯುರ್ನಾತ್ರಸಂಶಯಃ ॥ ಕ
ಲೌಧರ್ಮರತಾಯೇತುತೆವೈಕರ್ಮಾನುಸಾರತಃ । ಯುಗ
ತ್ರಯೇಜನಿಷ್ಯಂತಿ ಕ್ರಮಾದ್ವೃದ್ಧಿಂಪ್ರಜಂತಿತೆ ॥೪೪॥
ದ್ವಾತ್ರಿಂಶದ್ಭಿಸ್ಸಹಸ್ರೈಶ್ಚ ಚತುರ್ಲಕ್ಷೈಣಸಮ್ಮಿತೆ। ಕ್ರೂ

ತದಾ–ಆಗ, ಧರ್ಮಃ–ಧರ್ಮವು,ಚತುಷ್ಪದಃ–ನಾಲ್ಕು ಪಾದಗಳುಳ್ಳದ್ದಾಗಿ ರುವದು. ॥ತಾ॥ ಯಾವಾಗ ಬ್ರಹ್ಮನಿಂದ ಇರಿಸಲ್ಪಟ್ಟ ದೀಪವು ನಾಶ ನಾಗುವದೊ ಯಾವಾಗ ಗೋಪುರವು ಮುರಿದು ಬೀಳುವದೋ,ಆಗ ಕೃ ತಯುಗವು ಆರಂಭವಾಗಿ ಧರ್ಮವು ನಾಲ್ಕು ಪಾದಗಳಿಂದ ಪೂರ್ಣವಾ ಗಿ ನಡೆಯುವದು ॥ ॥೪೩॥

ವಿಪ್ರಾಃ–ಬ್ರಾಹ್ಮಣರು, ತಪೊಯಜ್ಞಪರಾಃ–ತಪಸ್ಸನ್ನು,ಯಜ್ಞ ಗಳನ್ನು ಮಾಡುವವರು,ತದಾ–ಆಗ ,ಸ್ಯುಃ–ಆಗುತ್ತಾರೆ, ಅತ್ರ–ಈ ವಿಷ ಯದಲ್ಲಿ,ಸಂಶಯಃ–ಸಂದೇಹವು,ನ–ಇಲ್ಲ. ಕಲೌ–ಕಲಿಯುಗದಲ್ಲಿ,ಯೇ ತು–ಯಾರಾದರೇನೊ,ಧರ್ಮರತಾಃ–ಧರ್ಮಪರರಾಗಿರುತ್ತಾರೊ, ತೆವೈ–ಅ ವರೇ, ಕರ್ಮಾನುಸಾರತಃ–ಅವರು ನಡಿಸಿದ ಕೃತ್ಯದಂತೆ,ಯುಗತ್ರಯೆ– ಕೃತಾದಿ ಯುಗ ಮೂರರಲ್ಲಿ, ಕ್ರಮಾತ್–ಪಾಜ್ತಪಾಗಿ, ಜನಿಷ್ಯಂತಿ– ಹುಟ್ಟುತ್ತಾರೆ, ತೆ–ಅವರು, ವೃದ್ಧಿಂ–ಪುಣ್ಯಾಭಿವೃದ್ಧಿಯನ್ನು, ವ್ರಜಂ ತಿ–ಹೊಂದುತ್ತಾರೆ. ॥ತಾ॥ ಬ್ರಾಹ್ಮಣರು ಯಜ್ಞಗಳನ್ನು,ತಪಸ್ಸನ್ನು ಕೃತಯುಗವು ಹುಟ್ಟುವದನ್ನು ಮಾಡುತ್ತಾ ಬರುವರು. ಈ ಅರ್ಥದ ಲ್ಲಿ ಸಂಶಯವಿಲ್ಲವು.ಕಲಿಯುಗದಲ್ಲಿ ಧರ್ಮರತರಾದವರು ಅವರವರ ಕರ್ಮಾ ನುಸಾರವಾಗಿ ದ್ವಾಪರಾದಿಯುಗಗಳಲ್ಲಿ ಹುಟ್ಟಿ, ಪುಣ್ಯವೃದ್ಧಿಯನ್ನೈ ದುವರು॥ ॥೪೪॥

ಬ್ರಹ್ಮನ್–ವೈಖಾನಸಮುನಿಯೇ, ಚತುರ್ಲಕ್ಷೈಣ–ನಾಲ್ಕು ಲಕ್ಷಗಳಿಂ ದಲೂ, ದ್ವಾತ್ರಿಂಶತ್ಸಹಸ್ರೈಶ್ಚ––ಮೂವ್ವತ್ತೆರಡು ಸಾವಿರ ಸಂಖ್ಯೆ ಯಿಂದಲೂ, ಸಂಮ್ಮಿತೆ–ಸಂವತ್ಸರ ಪ್ರಮಾಣವುಳ್ಳ, ಕ್ರೂರೆ–ಕಠಿನವಾ ದ, ಕಲಿಯುಗೆ–ಕಲಿಯುಗದಲ್ಲಿ,ಯದಾ–ಯಾವಾಗ, ಧರ್ಮಕ್ಷಯಃ–ಧರ್ಮ ನಾಶವು, ಭವೇತ್–ಉಂಟಾಗುವದೋ, (ತದಾ ತದಾ ಆಗ ಆಗ,) ಧರ್ಮ

ರೇಕಲಿಯುಗೇಬ್ರಹ್ಮಕ್ಷಯೇಹ್ಯಧರ್ಮಕ್ಷಯೋಭವೇತ್ । ಸ್ಥಾ
ಪನಾಯತುಧರ್ಮಸ್ಯಕಲೌಕಶ್ಚಿದ್ಭವಿಷ್ಯತಿ ॥ ೪೫ ॥ ಕಲಿಧ
ರ್ಮಶ್ಚತವಪ್ರೋಕ್ತೋ ವರ್ಣಸಂಕರಸಂಯುತಃ । ಕಿಮನ್ಯದಿ
ಚ್ಛಸಿಶ್ರೋತುಂತತ್ತೇವಕ್ಷ್ಯಾಮಿಸಾಂಪ್ರತಂ॥೪೬॥

ಇತಿ ಶ್ರೀವೆಂಕಟೇಶ ಮಾಹಾತ್ಮ್ಯೆ ಉತ್ತರಭಾಗೆ
ಕಲಿಸ್ವರೂಪಕಥನಂನಾಮ ದ್ವಿತೀಯೋಽಧ್ಯಾಯಃ॥

---

ಸ್ಯ-ಧರ್ಮದ, ಸ್ಥಾಪನಾಯ—ಸ್ಥಾಪನೆಗಾಗಿ, ಕಲೌ—ಕಲಿಯುಗದಲ್ಲಿ, ಕಶ್ಚಿತ್-ಒಬ್ಬಾನೊಬ್ಬ ಮಹಾ ಪುರುಷನು,ಭವಿಷ್ಯತಿ—ಆಗುತ್ತಿರುವನು.॥ತಾ॥ನಾಲ್ಕು ಲಕ್ಷವೂ ಮುವ್ವತ್ತೆರಡುಸಾವಿರ ವರ್ಷಗಳ ಕಾಲ ಸಂಖ್ಯೆಯುಳ್ಳ ಕಲಿಯುಗದಲ್ಲಿ,ಆಗಾಗ್ಯೆ-ಜೈನಜಾದ್ಧಚಾರ್ವಾಕ,ಹೂಣಮ್ಲೇಚ್ಛಕಿರಾತಾದಿಗಳಿಂದ ವೈದಿಕ ಧರ್ಮವು ನಾಶವಾಗುತ್ತಾಬರಲು, ಧರ್ಮೋದ್ಧಾರವನ್ನು ಮಾಡುವದಕ್ಕಾಗಿ, ಒಬ್ಬ ಮಹಾ ಪುರುಷನು ಹುಟ್ಟಿ ವರ್ಣಾಶ್ರಮಧರ್ಮಗಳನ್ನು ಸ್ಥಾಪಿಸುತ್ತಾ ಬರುತ್ತಾನೆ॥ ॥೪೫॥

ವರ್ಣಸಂಕರ-ವರ್ಣಗಳ ಸಾಂಕರ್ಯದಿಂದ, ಸಂಯುತಃ-ಕೂಡಿರುವದಾದ, ಕಲಿಧರ್ಮಃ-ಕಲಿಯುಗದ ನಡತೆಯು, ತವ-ನಿನಗೆ, ಪ್ರೋಕ್ತಃ-ಹೇಳಲ್ಪಟ್ಟಿತು, ಅನ್ಯತ್—ಬೇರೆಯಾದ ಯಾವದನ್ನು, ಶ್ರೋತುಂ-ಕೇಳುವದಕ್ಕೆ, ಕಿಮಿಚ್ಛಸಿ-ಏನು ಅಪೇಕ್ಷಿಸುತ್ತೀ,ತತ್—ಅದನ್ನು, ತೇ—ನಿನಗೆ, ಸಾಂಪ್ರತಂ-ಈಗ, ವಕ್ಷ್ಯಾಮಿ—ಹೇಳುತ್ತೇನೆ. ॥ತಾ॥ ವರ್ಣಸಾಂಕರ್ಯಕ್ಕೆ ಸಮಯವಾದ ಕಲಿಯುಗದ ಧರ್ಮಗಳನ್ನು ತಿಳಿಸಿದೆನು, ಇನ್ನು ಯಾವದನ್ನು ಹೇಳಬೇಕು ಕೇಳು ಹೇಳುತ್ತೇನೆ ॥ ॥೪೬॥

ಇಂತು ಭವಿಷ್ಯೋತ್ತರಪುರಾಣದೊಳು ವೆಂಕಟೇಶ
ಮಹಾತ್ಮ್ಯೆಯ ಉತ್ತರ ಭಾಗದಲ್ಲಿ ಕಲಿಸ್ವ
ರೂಪಕಥನವೆಂಬ ಎರಡನೇ ಅಧ್ಯಾ
ಯ ವು.

---

ಶ್ರೀನಿವಾಸವಚಶ್ಶ್ರುತ್ವಾಮುನಿರ್ವೈಖಾನಸೋಬ್ರವೀತ್ ॥
ಏವಂಪ್ರವೃತ್ತೇತುಕಲೌಕಾಮವಸ್ಥಾಂಸಮಾಶ್ರಿತಾಃ । ಕ
ಥಂಧನ್ಯಾಭವಿಷ್ಯಂತಿ ಮನುಜಾಸ್ಸ್ವರ್ಗಗಾಮಿನಃ ॥೧॥ ಅಥ
ವಾನಿರಯಂಯಾಂತಿ ಉಪಾಯಸ್ತರಣೇಕಿಮು । ತ್ವಯಿಸ
ರ್ವೇಶ್ವರೇದೇವೇಏವಮುಕ್ತೇಕಥಂಭವೇತ್॥೨॥ಶ್ರೀನಿವಾಸೊ

ಶ್ರೀನಿವಾಸವಚಃ—ಶ್ರೀನಿವಾಸದೇವರ ಮಾತನ್ನು,ಶ್ರುತ್ವಾ—ಕೇಳಿ, ಮುನಿಃ—ಮನನಶೀಲನಾದ, ವೈಖಾನಸಃ—ವೈಖಾನಸರುಷಿಯು, ಅಬ್ರವೀತ್-ಹೇಳಿದನು. ಕಲೌ-ಕಲಿಯುಗವು,ಏವಂ—ಈ ರೀತಿಯಾಗಿ,ಪ್ರವೃತ್ತೇತು—ನಡೆಯುತ್ತಿರುವಾಗ, ಮನುಜಾಃ-ಮನುಷ್ಯರು, ಕಾಂ-ಯಾವ, ಅವಸ್ಥಾಂ-ಸ್ಥಿತಿಯನ್ನು, ಸಮಾಶ್ರಿತಾಃ-ಅನುಸರಿಸಿದವರಾಗಿ, ಕಥಂ-ಹೇಗೆ, ಧನ್ಯಾಃ-ಕೃತಾರ್ಥರು, ಸ್ವರ್ಗಗಾಮಿನಃ-ಸ್ವರ್ಗವನ್ನು ಪಡೆಯುವವರು, ಭವಿಷ್ಯಂತಿ—ಆಗುತ್ತಲಿದ್ದಾರೆ. ತಾ॥ ಆಗ ಬ್ರಾಹ್ಮಣರು ಕೃಛ್ರಚಾಂದ್ರಾಯಣಾದಿ ತಪಸ್ಸಂಪನ್ನರಾಗಿರುವವರಾಗುತ್ತಾರೆ. ಈವಿಷಯದಲ್ಲಿ ಸಂದೇಹವಿಲ್ಲವು,ಎಂಬದಾಗಿ ಶ್ರೀನಿವಾಸನು ಹೇಳಿದ ಮಾತನ್ನು ಕೇಳಿ, ವೈಖಾನಸಮುನಿಯು ಪ್ರಶ್ನೆ ಮಾಡಿದವನಾದನು. ಕಲಿಯುಗದಲ್ಲಿ ಈ ರೀತಿಯಾಗಿ ನಡಿಯುತ್ತಿರುವಾಗ ಮನುಷ್ಯರು ಹೇಗೆ ಕೃತಾರ್ಥರಾಗುವರು, ಮತ್ತು ಹೇಗೆ ಸ್ವರ್ಗವನ್ನು ಪಡೆಯುತ್ತಾರೆ ॥ ॥೧॥

ಅಥವಾ ಹಾಗೆ ಇಲ್ಲದೆ, ನಿರಯಂ—ನರಕವನ್ನು, ಯಾಂತಿ—ಸೇರುತ್ತಾರೆ, ತರಣೇ—ನರಕ ಬಾಧೆಯನ್ನು ಕಳಕೊಳ್ಳಬೇಕಾದರೆ, ಉಪಾಯಃ—ಯುಕ್ತಿಯು, ಕಿಮು—ಏನಿರುವದು ॥ ಸರ್ವೇಶ್ವರೇ—ಸಮಸ್ತಕ್ಕೂ ನಿಯಾಮಕನಾದ, ತ್ವಯಿ—ನೀನು, ಏವಂ—ಈ ರೀತಿಯಾಗಿ, ಉಕ್ತೇ—ಹೇಳುತ್ತಿರಲೂ, ಕಥಂಭವೇತ್—ಹೇಗೆ ಆದೀತು. ॥ತಾ॥ ಹಾಗೆ ಅಲ್ಲದೆ ಜನರು ನರಕವನ್ನೇ ಹೊಂದುವರಾದಾರೆ ? ಸಕಲ ಜಗನ್ನಿಯಾಮಕನಾದ ನೀನು ಈ ರೀತಿಯಾಗಿ ಹೇಳಿದರೆ ಹೇಗೆ ಆದೀತು ॥ ॥೨॥

ಶ್ರೀನಿವಾಸಉವಾಚ—ಶ್ರೀನಿವಾಸನು ಹೇಳುತ್ತಲಿದ್ದಾನೆ ॥ ವಿಪ್ರ—ಎಲೈ ಬ್ರಾಹ್ಮಣನೇ, ಕಲಿ—ಕಲಿಯನ್ನು, ತಾರಣಿ—ಅತಿಕ್ರಮಿಸುವ ವಿ

ವಾಚ॥ ಶೃಣಾವಿಪ್ರಾದ್ಭುತಂವಕ್ಷ್ಯೇರಹಸ್ಯಂ–ಕಲಿತಾರಣೆ।
ಶೂದ್ರಸ್ಸಾಧು ಸ್ತ್ರಿಯಸ್ಸಾಧುಃಕಲಿ ಸ್ಸಾಧುರ್ನ ಸಂಶ
ಯಃ॥೩॥ಯತ್ಕೃತೇದಶಭಿರ್ವರ್ಷೈಸ್ತ್ರೇತಾಯಾಂಹಾಯನೇ
ನತತ್।ದ್ವಾಪರೇತಚ್ಚ ಮಾಸೇನಅಹೋರಾತ್ರೇಣತತ್ಕಲೌ॥೪॥

ಷಯದಲ್ಲಿ,ಅದ್ಭುತಂ–ಆಶ್ಚರ್ಯಕರವಾದ, ರಹಸ್ಯಂ–ಗುಪ್ತವಾದ ಸಂಗತಿ ಯನ್ನು,ವಕ್ಷ್ಯೇ–ಹೇಳುತ್ತೇನೆ, ಶೃಣು–ಕೇಳು,ಶೂದ್ರಃ–ಶೂದ್ರನು,ಸಾ ಧುಃ–ಸಾಧುವಾಗಿರುವವನು, ಅಂದರೆ ಶೂದ್ರನಿಗೆ ಅಲ್ಪಪ್ರಯಾಸದಿಂದ ಮಹತ್ಫಲ ಉಂಟಾಗುವದು, ಆದ್ದರಿಂದ ಕಲಿಯಲ್ಲಿ ಶೂದ್ರನಕೆಲಸವು ಅ ನುಕೂಲವಾಗಿರುವದು, ಸ್ತ್ರಿಯಃ–ಹೆಂಗಸರು,ಸಾಧುಃ–ಅನುಕೂಲತೆ ಯುಳ್ಳವರಾಗುವರು,ಕಲಿಃ–ಕಲಿಯುಗವು,ಅನುಕೂಲವಾಗಿರುವದು,ಸಂ ಶಯಃ–ಸಂದೇಹವು,ನ–ಇಲ್ಲ. ॥ತಾ॥ ಎಲೈ ವೈಖಾನಸ ಬ್ರಾಹ್ಮಣನೇ ಕೇಳು ಕಲಿ ಬಾಧೆಯನ್ನು ತಪ್ಪಿಸಿಕೊಳ್ಳುವವಕ್ಕೆ ಆಶ್ಚರ್ಯಕರವಾದ ರ ಹಸ್ಯವನ್ನು ಹೇಳುತ್ತೇನೆ, ಶೂದ್ರನಿಗೆ ಅನುಕೂಲವಾಗಿಯೂ, ಸ್ತ್ರೀ ರಿಗೆ ಅನುಕೂಲವಾಗಿಯೂ. ಕಲಿಯುಗವು ಯುಗಗಳೊಳಗೆ ಜನರಿಗೆ ಅನುಕೂಲವಾಗಿಯೂ,ಇರುವದು,ಈ ವಿಷಯದಲ್ಲಿ ಸಂದೇಹವಿಲ್ಲವು॥ ೩॥

ಕೃತೇ–ಕೃತಯುಗದಲ್ಲಿ,ದಶಭಿಃ–ಹತ್ತಾದ, ವರ್ಷೈಃ–ಸಂವತ್ಸರಗಳಿಂ ದ, ಯತ್–ಯಾವ ವಿಧವಾದ ಸುಕೃತವನ್ನು ಸಂಪಾದಿಸಬಹುದೋ, ತ ತ್–ಅದು, ತ್ರೇತಾಯಾಂ–ತ್ರೇತಾಯುಗದಲ್ಲಿ, ಹಾಯನೇನ ಒಂದು ವ ರ್ಷದಿಂದ, ಭವತಿ–ಆಗುತ್ತೆ, ದ್ವಾಪರೇ–ದ್ವಾಪರಯುಗದಲ್ಲಿ, ತಚ್ಚ–ಆ ಸುಕೃತವು, ಮಾಸೇನ–ಒಂದು ತಿಂಗಳಿಂದ, ಭವತಿ–ಆಗುತ್ತೆ, ಕಲೌ– ಕಲಿಯುಗದಲ್ಲಿ, ತಚ್ಚ–ಅದು, ಅಹೋರಾತ್ರೇಣ–ಒಂದು ದಿನದಲ್ಲಿ, ಭವ ತಿ–ಉಂಟಾಗುತ್ತೆ. ॥ತಾ॥ ಕೃತಯುಗದಲ್ಲಿ ೧೦ ವರ್ಷಗಳವರಿಗೂ ಮಾ ಡುತ್ತಾ ಬಂದರೆ ಸಿದ್ಧಿಸುವದಾದ ಪುಣ್ಯವು, ತ್ರೇತಾಯುಗದಲ್ಲಿ–ಒಂದು ವರ್ಷದೊಳಗೆ ಸಿದ್ಧಿಸುತ್ತದೆ, ದ್ವಾಪರಯುಗದಲ್ಲಿ–ಅದು ಒಂದು ತಿಂಗ ಳೊಳಗಾಗಿ ಸಿದ್ಧಿಸುವದು, ಕಲಿಯುಗದಲ್ಲಿಅಹೋರಾತ್ರಿಯಲ್ಲಿಯೇ ಸಿದ್ಧಿ ಸುವದು, ಆದ್ದರಿಂದ ಕಲಿಯುಗವು ಇತರ ಯುಗಗಳಿಗಿಂತ ಅನುಕೂಲ ವಾಗಿರುವದು. ॥೪॥

ಬಹುದೋಷೈಸ್ಸಂಯುತೇ ಪಿಕಲೌ ಏಕೋಮಹಾ
ನ್ಗುಣಃ । ತಸ್ಮಾತ್ಕಲೌತ ಪಸ್ತಪ್ತಂ ಕ್ಷಣಕಾಲೇನ ಸಿದ್ಧಿ
ದಂ ॥೫॥ ಕೃತೇತುಮಾನವಾ ಧರ್ಮಾಃತ್ರೇತಾಯಾಂಗೌತಮಾ
ಸ್ಮೃತಾಃ। ದ್ವಾಪರೇಶಂಖಲಿಖಿತಾಃಕಲೌಪಾರಾಶರಾಸ್ಮೃ
ತಾಃ॥೬॥ವೃದ್ಧಪಾರಾಶರಾಧರ್ಮಾಃಬೃಹತ್ಪಾರಾಶರಾಸ್ತಥಾ

ಬಹುದೋಷೈಃ-ಅನೇಕ ಪಾಪಗಳಿಂದ ಕೂಡಿರುವದಾದ, ಕಲೌ-ಕಲಿಯುಗವಲ್ಲಿ, ಮಹಾನ್-ದೊಡ್ಡದಾದ, ಏಕಃ-ಒಂದಾದ, ಗುಣಃ-ಗುಣವು, ಉಂಟಾಗಿರುವದು, ತಸ್ಮಾತ್-ಆ ಕಾರಣದಿಂದ, ತಪ್ತಂ-ಮಾಡಲ್ಪಟ್ಟ, ತಪಃ-ತಪಸ್ಸು, ಕ್ಷಣಕಾಲೇನ-ಕ್ಷಣಸಮಯದಲ್ಲಿಯೇ. ಸಿದ್ಧಿದಂ-ಫಲಸಿದ್ಧಿಯನ್ನು ಕೊಡುವದಾಗುವದು. ॥ತಾ॥ ಅನೇಕ ದೋಷಗಳಿಂದ ಕೂಡಿರುವದಾದ ಕಲಿಯುಗದಲ್ಲಿ ಒಂದುದೊಡ್ಡಗುಣವಿರುವದು, ಆದ್ದರಿಂದ ಕಲಿಯಲ್ಲಿ ಕ್ರಮವಾಗಿ ಮಾಡಲ್ಪಟ್ಟ ತಪಸ್ಸು ಕ್ಷಣಕಾಲದಲ್ಲಿಯೇ ಸಿದ್ಧಿಸುವದು ॥ ॥೫॥

ಕೃತೇತು-ಕೃತಯುಗಲ್ಲಾದರೇನೋ,ಮಾನವಾಃ-ಮನುಪ್ರೋಕ್ತಗಳಾದ,ಧರ್ಮಾಃ-ಧರ್ಮಗಳು,ತ್ರೇತಾಯಾಂತ್ರೇತಾಯುಗದಲ್ಲಿ,ಗೌತಮಾಃ-ಗೌತಮರುಷಿಪ್ರೋಕ್ತಗಳಾದ ಧರ್ಮಗಳು,ದ್ವಾಪರೆ-ದ್ವಾಪರಯುಗದಲ್ಲಿ, ಶಂಖಲಿಖಿತಾಃ-ಶಂಖನೆಂಬ ಲಿಖಿತನೆಂಬ ರುಷಿಗಳಿಂದ ಮಾಡಲ್ಪಟ್ಟ ಧರ್ಮಗಳು,ಕಲೌ-ಕಲಿಯುಗದಲ್ಲಿ,ಪಾರಾಶರಾಃ-ಪರಾಶರಮುನಿಯಿಂದಹೇಳಲ್ಪಟ್ಟ ಧರ್ಮಗಳು, ಸ್ಮೃತಾಃ-ನಡಿಸಲ್ಪಡಬೇಕು. ॥ತಾ॥ ಕೃತಯುಗದಲ್ಲಿ-ಸ್ವಾಯಂಭುವಮನುವು ವೇದಾರ್ಥವನ್ನು ಪ್ರಕಟಿಸಿ ಹೇಳಿರುವ ಮನುಧರ್ಮ ಶಾಸ್ತ್ರದಲ್ಲಿ ಹೇಳಿರುವಂತೆಯೂ, ತ್ರೇತಾಯುಗದಲ್ಲಿ, ಆ ಯುಗದ ಜನರ ಯೋಗ್ಯತಾನುಸಾರವಾಗಿ ಗೌತಮರುಷಿಯಿಂದಹೇಳಲ್ಪಟ್ಟಧರ್ಮಶಾಸ್ತ್ರದಲ್ಲಿಹೇಳಿರುವಂತೆಯೂ,ದ್ವಾಪರಯುಗದಲ್ಲಿಶಂಖಲಿಖಿತರುಷಿಗಳಿಂದಹೇಳಲ್ಪಟ್ಟಧರ್ಮಶಾಸ್ತ್ರದಲ್ಲಿಹೇಳಿರುವಂತೆಯೂ,ಕಲಿಯುಗದಲ್ಲಿಪರಾಶರಮುನಿಯಿಂದಹೇಳಲ್ಪಟ್ಟಿರುವಧರ್ಮಶಾಸ್ತ್ರದಂತೆಯೂ. ಆಚಾರವ್ಯವಹಾರ ಪ್ರಾಯಶ್ಚಿತ್ತಾದಿ ಧರ್ಮಗಳನ್ನು ನಡಿಸಬೇಕು ॥ ॥೬॥

ವೃದ್ಧಪಾರಾಶರಾಃ-ವೃದ್ಧಪರಾಶರರು, ಹೇಳಿರುವವುಗಳಾದ, ಧ

ಪಾರಾಶರಾಸ್ತಥಾ ಧರ್ಮಾಃ ಕಲೌ ಗ್ರಾಹ್ಯಾ ದ್ವಿಜಾತಿಭಿಃ ॥ ೩॥
ವೃದ್ಧಪಾರಾಶರಾ ಧರ್ಮಾಃ ಕಲಿವರ್ಜ್ಯಪ್ರಶಂಸಕಾಃ। ಉಭಾ
ಭ್ಯಾಮುಕ್ತಧರ್ಮಾಸ್ತು ಕಲೌ ಕರ್ತವ್ಯಬೋಧಕಾಃ ॥೪॥ ತ್ಯ
ಜೇದ್ದೇಶಂ ಕೃತಯುಗೇ ತ್ರೇತಾಯಾಂ ಗ್ರಾಮಮುತ್ಸೃಜೇ

ರ್ಮಾಃ-ಧರ್ಮಗಳು, ಬೃಹತ್ಪಾರಾಶರಾಃ-ಬೃಹತ್ಪರಾಶರಮುನಿಯು ಹೇಳಿರುವ, ಧರ್ಮಾಃ-ಧರ್ಮಗಳು, ತಥಾ-ಹಾಗೆ, ಪಾರಾಶರಾಃ-ಪರಾಶರಮುನಿಯು ಹೇಳಿರುವ, ಧರ್ಮಾಃ-ಧರ್ಮಗಳು, ಕಲೌ-ಕಲಿಯುಗದಲ್ಲಿ, ದ್ವಿಜಾತಿಭಿಃ-ಬ್ರಹ್ಮಕ್ಷತ್ರಿಯ ವೈಶ್ಯರಿಂದ, ಗ್ರಾಹ್ಯಾಃ-ನಡಿಸಲ್ಪಡಬೇಕಾದವುಗಳು. ॥ತಾ॥ ವೃದ್ಧಪರಾಶರ-ಬೃಹತ್ಪರಾಶರ. ಪರಾಶರ ಮುನಿಗಳಿಂದ ಹೇಳಲ್ಪಟ್ಟ ಸ್ಮೃತಿಗಳಂತೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು, ಧರ್ಮಗಳನ್ನು ನಡಿಸುತ್ತಿರಬೇಕು ॥ ॥೩॥

ವೃದ್ಧಪಾರಾಶರಾಃ-ವೃದ್ಧಪರಾಶರರುಪಿ ಪ್ರೋಕ್ತಗಳಾದ, ಧರ್ಮಾಃ-ಧರ್ಮಗಳು, ಕಲಿ-ಕಲಿಯುಗದಲ್ಲಿ, ವರ್ಜ-ಮಾಡಬಾರದ್ದನ್ನು, ಪ್ರಶಂಸಕಾಃ-ಬೋಧಿಸುವಂಥಾದ್ದಾಗಿವೆ. ಉಭಾಭ್ಯಾಂ-ಬೃಹತ್ಪರಾ ಶರ-ಪರಾಶರರಿಂದ, ಉಕ್ತ-ಹೇಳಲ್ಪಟ್ಟವುಗಳಾದ, ಧರ್ಮಾಃ-ಧರ್ಮಗಳು, ಕಲೌ-ಕಲಿಯುಗದಲ್ಲಿ, ಕರ್ತವ್ಯ-ಮಾಡಬೇಕಾದ್ದನ್ನು, ಬೋಧಕಾಃ-ತಿಳಿಸುವಂಥಾದ್ದಾಗಿವೆ, ॥ತಾ॥ ವೃದ್ಧಪರಾಶರಮುನಿಯಿಂದ ಹೇಳಲ್ಪಟ್ಟಧರ್ಮಗಳು-ಕಲಿಯುಗದಲ್ಲಿ ಇಂಥಾದ್ದನ್ನು ಮಾಡಬಾರದೆಂಬದಾಗಿ ತಿಳಿಸುವವು, ಬೃಹತ್ಪಾರಾಶರ-ಪರಾಶರ ಧರ್ಮಗಳು, ಕಲಿಯುಗದಲ್ಲಿ ಮಾಡಬೇಕಾದ ಆಚಾರವ್ಯವಹಾರ-ಪ್ರಾಯಶ್ಚಿತ್ತಬೋಧಕಗಳಾಗಿರುವವು, ॥೪॥

ಕೃತಯುಗೇ-ಕೃತಯುಗದಲ್ಲಿ, ದೇಶಂ-ದೇಶವನ್ನು, ತ್ಯಜೇತ್-ಬಿಡಬೇಕು, ತ್ರೇತಾಯಾಂ-ತ್ರೇತಾಯುಗದಲ್ಲಿ ಗ್ರಾಮಂ-ಗ್ರಾಮವನ್ನು, ಉತ್ಸೃಜೇತ್-ಬಿಡಬೇಕೂ, ದ್ವಾಪರೇ-ದ್ವಾಪರಯುಗದಲ್ಲಿ, ಏಕಂ-ಬಂದಾದ, ಕುಲಂ-ಪಾಪಮಾಡಿದವನ ಕುಲವನ್ನು, ತ್ಯಜೇತ್-ಬಿಡಬೇಕು, ಕಲೌ-ಯುಗೇ, ಕಲಿಯುಗದಲ್ಲಿ, ಕರ್ತಾರಂ-ಪಾಪಮಾಡಿದವನನ್ನು ಮಾತ್ರ, ತ್ಯಜೇತ್-ಬಿಡಬೇಕು, ॥ತಾ॥ ಕೃತಯುಗದಲ್ಲಿ ಮಹಾಪಾಪಿಯಾದವನು-ಯಾವದೇಶದಲ್ಲಿ ಇರುತ್ತಾನೋ ಆದೇಶವನ್ನೇ ಬಿಡಬೇ

ತ್। ದ್ವಾಪರೇ ಕುಲಮೇಕಂ ತು ಕರ್ತಾರಂ ತು ಕಲೌ ಯುಗೇ॥೯॥
ಕೃತೇ ಸಂಭಾಷಣಾದೇವ ತ್ರೇತಾಯಾಂ ಸ್ಪರ್ಶನೇನ ತು। ದ್ವಾ
ಪರೇ ತ್ವನ್ನಮಾದಾಯ ಕಲೌ ಪತತಿ ಕರ್ಮಣಾ॥೧೦॥ ಕೃತೇ ತತ್
ಕ್ಷಣಿಕಃ ಶಾಪಃ ತ್ರೇತಾಯಾಂ ದಶಭಿರ್ದಿನೈಃ। ದ್ವಾಪರೇ ಚೈಕ

ಕು, ತ್ರೇತಾಯುಗದಲ್ಲಿ. ಆ ಮಹಾಪಾಪಿಯು ಇರುವ ಗ್ರಾಮವನ್ನು ಬಿಡಬೇಕು,—ದ್ವಾಪರಯುಗದಲ್ಲಿ, ಆ ಮಹಾಪಾಪಿಯಾದವನ ಕೂಡಬೋ ಜನವನ್ನು ಬಿಡಬೇಕು, ಕಲಿಯುಗದಲ್ಲಿ—ಪಾಪವಮಾಡಿದವನನ್ನು ಬಿಡಬೇಕು, ॥೯॥

ಕೃತೇ-ಕೃತಯುಗದಲ್ಲಿ, ಸಂಭಾಷಣಾದೇವ-ಪತಿತನಸಂಗಡ ಮಾತ ಮಾಡುವದರಿಂದ, ತ್ರೇತಾಯಾಂ—ತ್ರೇತಾಯುಗದಲ್ಲಿ, ಸ್ಪರ್ಶನೇನ ತು—ಪತಿತನನ್ನು ಮುಟ್ಟಿದ ಮಾತ್ರದಿಂದ, ದ್ವಾಪರೇ—ದ್ವಾಪರಯುಗದಲ್ಲಿ, ಅನ್ನಂ—ಅನ್ನವನ್ನು, ಆದಾಯ—ಪತಿತನಿಂದ ತಿಂದದ್ದರಿಂದ, ಕಲೌ—ಕಲಿಯುಗದಲ್ಲಿ, ಕರ್ಮಣಾ—ಮಹಾಪಾಪಗಳನ್ನು ಮಾಡುವ ಕೆಲಸದಿಂದ, ಪತತಿ-ತಾನು ಭ್ರಷ್ಟನಾಗುತ್ತಾನೆ ॥ತಾ॥ ಮಹಾಪಾತಕಿಯಾದ ಪತಿತನಸಂಗಡ, ಕೃತಯುಗದಲ್ಲಿ, ಮಾತಾಡಿದರೆ—ಪಾಪವು ಬರುವದು, ತ್ರೇತಾಯುಗದಲ್ಲಿ, ಪತಿತನನ್ನು ಮುಟ್ಟಿದ ಮಾತ್ರದಿಂದ ಪಾಪವುಂಟಾಗುವದು, ದ್ವಾಪರಯುಗದಲ್ಲಿ, ಪತಿತಾನ್ನವನ್ನು ತಿಂದದ್ದರಿಂದ, ಪತಿತನಾಗುವನು, ಕಲಿಯುಗದಲ್ಲಿ ತಾನು ಮಹಾಪಾಪಗಳನ್ನು ಮಾಡಿದರೆ ಪತಿತನಾಗುತ್ತಾನೆ, ॥೧೦॥

ಕೃತೇ—ಕೃತಯುಗದಲ್ಲಿ, ಶಾಪಃ-ಶಾಪವು, ತತ್ಕ್ಷಣಿಕಃ—ಆಗಲೇ ಫಲಿಸುವದು, ತ್ರೇತಾಯಾಂ—ತ್ರೇತಾಯುಗದಲ್ಲಿ, ದಶಭಿಃ ಹತ್ತಾದ, ದಿನೈಃ-ದಿವಸಗಳಿಂದ, ಫಲಿಸುವದು, ದ್ವಾಪರೇ—ದ್ವಾಪರಯುಗದಲ್ಲಿ, ಏಕಮಾಸೇನ—ಒಂದುತಿಗಳಿಂದ, ಶಾಪವುತಟ್ಟುವುದು, ಕಲೌ-ಕಲಿಯುಗದಲ್ಲಿ, ಸಂವತ್ಸರೇಣ ತು—ಒಂದುವರ್ಷದಿಂದ ಕೊಟ್ಟಶಾಪವು ಫಲಿಸುವದು ॥ತಾ॥ ಕೃತಯುಗದಲ್ಲಿ ಶಾಪವನ್ನು ಕೊಟ್ಟರೆ ಅದು ಆಗಲೇ ಫಲಿಸುವದು, ತ್ರೇತಾಯುಗದಲ್ಲಿ ಕೊಟ್ಟಶಾಪವು ಹತ್ತುದಿನಗಳಿಗೆ, ಫಲಿಸುವದು, ದ್ವಾಪರಯುಗದಲ್ಲಿ ಕೊಟ್ಟಶಾಪವು ಒಂದುತಿಂಗಳಿಗೆ ಆಗುವದು,

ಮಾಸೇನಕಲೌಸಂವತ್ಸರೇಣತು ||೧೧|| ಅಭಿಗಮ್ಯಕೃತೇದಾ
ನಂತ್ರೇತಾಸ್ವಾಹೂಯದೀಯತೇ। ದ್ವಾಪರೇಯಾಚಮಾನಾ
ಯಸೇವಯಾದೀಯತೇ ಕಲೌ ||೧೨|| ಅಭಿಗಮ್ಯೋತ್ತಮಂ
ದಾನಮಾಹೂಯೈವತುಮಧ್ಯಮಂ।ಅಧಮಂಯಾಚಮಾನಾ

ಕಲಿಯುಗದಲ್ಲಿ ಕೊಟ್ಟಶಾಪವು ಒಂದು ವರ್ಷಕ್ಕೆ ಫಲಿಸುವದು, ||೧೧||

ಕೃತೇ–ಕೃತಯುಗದಲ್ಲಿ, ಅಭಿಗಮ್ಯ–ತಾನು ಇತರರ ಬಳಿಗೆ ಹೋಗಿ, ದಾನಂ–ದಾನವು, ದೀಯತೇ–ಕೊಡಲ್ಪಡುವದು, ತ್ರೇತಾಸು–ತ್ರೇತಾಯುಗದಲ್ಲಿ, ಆಹೂಯ–ಕರಿಸಿ, ದೀಯತೇ–ದಾನವುಕೊಡಲ್ಪಡುವದು, ದ್ವಾಪರೇ–ದ್ವಾಪರಯುಗದಲ್ಲಿ,ಯಾಚಮಾನಾಯ–ಬೇಡಿದವನಿಗೆ, ದಾನವು,ದೀಯತೇ–ಕೊಡಲ್ಪಡುತ್ತೆ, ಕಲೌ–ಕಲಿಯುಗದಲ್ಲಿ, ಸೇವಯಾ–ಕೂಲಿಯವನಂತೆ ಕೆಲಸಮಾಡುವದ್ದರಿಂದ, ದೀಯತೇ–ದಾನವು ಕೊಡಲ್ಪಡುತ್ತೆ. ||ತಾ|| ಕೃತಯುಗದಲ್ಲಿ ದಾನಮಾಡಬೇಕಾದರೆ, ಬ್ರಾಹ್ಮಣರ ಮನೆಗೆ ಹೋಗಿ ಬೇಡಿಕೊಂಡು, ದಾನವನ್ನು ಕೊಡುವರು, ತ್ರೇತಾಯುಗದಲ್ಲಿ ಬ್ರಾಹ್ಮಣರನ್ನು ತಮ್ಮ ಮನೆಗೆ ಬರಮಾಡಿಕೊಂಡು, ದಾನವನ್ನು ಮಾಡುವರು. ದ್ವಾಪರಯುಗದಲ್ಲಿ ಹೋಗಿ ಯಾಚನೆ ಮಾಡುವವನಿಗೆ ದಾನವನ್ನು ಕೊಡುವರು, ಕಲಿಯುಗದಲ್ಲಿ ಚಾಕರಿಯನ್ನು ಮಾಡಿದವನಿಗೆ, ಹವ್ಯ,ಕವ್ಯಗಳಲ್ಲಿ ದಾನವನ್ನು ಮಾಡುವರು|| ||೧೨||

ಅಭಿಗಮ್ಯ–ತಾನೇ ಇತರ ಯೋಗ್ಯರ ಮನೆಗೆ ಹೋಗಿ,ದಾನಂ–ಕೊಡುವುದು,ಉತ್ತಮಂ–ಶ್ರೇಷ್ಠವಾದದ್ದು,ಆಹೂಯ–ಕರೆಸಿ, ದಾನಂ–ಕೊಡುವದು,ಮಧ್ಯಮಂ–ಮಧ್ಯಮಪರ್ಯಾಯವಾಗಿರುವದು, ಯಾಚಮಾನಾಯ–ಬೇಡುವ ಮನುಜನಿಗೆ, ದಾನಂ–ಕೊಡುವದು, ಅಧಮಂ–ನೀಚವಾದದ್ದು,ಸೇವಾ–ಸೇವೆಯಿಂದ,ದಾನಂತು–ಕೊಡುವದು ಆದರೇನ್ನೂ,ನಿಷ್ಫಲಂ–ವ್ಯರ್ಥವಾಗಿರುವದು. ||ತಾ|| ತಾನೇ ಇತರರ ಮನೆಗೆ ಹೋಗಿ, ದಾನವನ್ನು ಕೊಡುವದು ಸತ್ವಗುಣಪ್ರಧಾನವಾದ್ದರಿಂದ ಶ್ರೇಷ್ಠವಾಗಿರುವದು, ತನ್ನ ಮನೆಗೆ ಇತರರನ್ನು ಕರೆಸಿ ಕೊಡುವದು ರಜೋಗುಣಪ್ರಧಾನವಾದ್ದರಿಂದ,ಮಧ್ಯಮವಾಗಿರುವದು, ತಾನೇಬಂದು ಬೇಡುವವನಿಗೆ ಕೊಡುವದಾನವು ತಮೋಗುಣಪ್ರಧಾನವಾದ್ದರಿಂದ,ಈದಾನವು ಅಧಮ

ಯಸ್ಸೇವಾದಾನಂತಾನಿಷ್ಫಲಂ ॥೧೩॥ಜಿತೊಧರ್ಮೊಹ್ಯಧರ್ಮೇ
ಣಾಸತ್ಯಂಚೈವಾ ನೃತೇನಚ । ಜಿತಾಶ್ಚೋರೈಶ್ಚ ರಾಜಾನಃ
ಸ್ತ್ರೀಭಿಶ್ಚ ಪುರುಷಾಃಕಲೌ ॥೧೪॥ ಕೃತೇತ್ವಸ್ಥಗತಾಃಪ್ರಾ
ಣಾಃ ತ್ರೇತಾಯಾಂಮಾಂಸಮಾಶ್ರಿತಾಃ । ದ್ವಾಪರೇರುಧಿರಂ

ವೆನಿಸುವದು, ಸೇವೆಯನ್ನು ಮಾಡಿಸಿಕೊಂಡು ದಾನವನ್ನು ಮಾಡುವ ದು ವ್ಯರ್ಥವಾಗಿ ಹೋಗುವದು ॥ ॥೧೩॥

ಕಲೌ-ಕಲಿಯುಗದಲ್ಲಿ, ಧರ್ಮಃ-ಧರ್ಮವು, ಅಧರ್ಮೇಣ-ಅಧರ್ಮದಿಂದ, ಜಿತಃ-ಜಯಿಸಲ್ಪಡುವದು, ಸತ್ಯಂ-ಯಥಾರ್ಥವು,ಅನೃತೇನಚ-ಸುಳ್ಳಿನಿಂದ,ಜಿತಂ-ಜಯಿಸಲ್ಪಡುವದು,ರಾಜಾನಃ-ಧೊರೆಗಳು,ಚೋರೈಃ-ಕಳ್ಳರಿಂದ, ಜಿತಾಃ-ಜಯಿಸಲ್ಪಡುವರು, ಪುರುಷಾಃ-ಗಂಡುಸರು, ಸ್ತ್ರೀಭಿಃ-ಹೆಂಗಸರಿಂದ,ಜಿತಾಃ-ಜಯಿಸಲ್ಪಡುವರು. ॥ತಾ॥ ಅಧರ್ಮಿಗಳಾದ ಜನರು ಪ್ರಬಲವಾಗಿ ಅವರ ಅಧರ್ಮದಿಂದ ಧರ್ಮಿಷ್ಠರಾದವರು, ಧರ್ಮವನ್ನು,ನಡಿಸದಂತೆ ಆಗುವದು, ಸುಳ್ಳು ಆಡುವವರು ಪ್ರಬಲವಾಗಿ, ಅವರು ಮಾಡುವ ಸುಳ್ಳು ಕೆಲಸಗಳಿಂದ ನಿಜವಾಗಿರುವ ವರ-ನಿಜವು ನಡಿಯದೇ ಹೋಗುವದು, ಕಪಟಿಗಳಾದ ದಸ್ಯುಗಳು ಪ್ರಬಲರಾಗಿ, ಅವರ ಕುಯುಕ್ತಿಯಿಂದ, ಸದ್ವಂಶೀಯರಾದ ರಾಜರು ತಿರಸ್ಕೃತರಾಗಿ,ಬಡವರಾಗಿ ಹೋಗುವರು, ಹೆಂಗಸರಿಗೆ ಸ್ವಾತಂತ್ರ್ಯ ಉಂಟಾಗುವದ್ದರಿಂದ ಅಂಥಾ ಸ್ತ್ರೀರಿಂದ ಪುರುಷರು ಯತ್ನವಿಲ್ಲದೇ ಜಯಿಸಲ್ಪಟ್ಟು, ಹೆಂಗಸಿನ ಮಾತಿನಂತೆ ನಡಿಯುತ್ತಾ ಗುಲಾಮರಾಗಿರುವರು ॥ ॥೧೪॥

ಕೃತೆ-ಕೃತಯುಗದಲ್ಲಿ, ಪ್ರಾಣಾಃ-ಪ್ರಾಣಗಳು, ಅಸ್ಥಿಗತಾಃ-ಎಲುಬನ್ನು ಹೊಂದಿರುವವು, ತ್ರೇತಾಯಾಂ-ತ್ರೇತಾಯುಗದಲ್ಲಿ, ಮಾಂಸಂ-ಮಾಂಸವನ್ನು, ಆಶ್ರಿತಾಃ-ಹೊಂದಿರುವವು, ದ್ವಾಪರೆ-ದ್ವಾಪರಯುಗದಲ್ಲಿ, ರುಧಿರಂ-ರಕ್ತವನ್ನು, ಆಶ್ರಿತಾಃ-ಆಶ್ರಯಿಸಿರುವವು, ಕಲೌ-ಕಲಿಯುಗದಲ್ಲಿ, ಅನ್ನಾದಿಷು-ಅನ್ನವೇ ಮೊದಲಾದ ಆಹಾರಗಳಲ್ಲಿ, ಸ್ಥಿತಾಃ-ಇರುವವುಗಳಾಗುವವು. ॥ತಾ॥ ಕೃತಯುಗದಲ್ಲಿ, ಎಲುಬುಗಳು ಸವೆದು ಹೋಗುವವರಿಗೂ ಪ್ರಾಣಗಳಿರುವವು. ತ್ರೇತಾಯುಗದಲ್ಲಿ ಮಾಂಸಖಂಡಗಳು ಕ್ಷಯಿಸುವವರಿಗೂ ಪ್ರಾಣಗಳಿರುತ್ತವೆ. ದ್ವಾಪರ

ಚ್ಛೈವಕಲೌತ್ರ್ವನ್ನಾದಿಷುಸ್ಥಿತಾಃ ॥೧೫॥ ಸನ್ನಿಯಮ್ಯೇಂ
ದ್ರಿಯಗ್ರಾಮಂಶಾಂತೋದಾಂತಃಸಮಾಹಿತಃ। ಯದ್ಯತ್ಕ
ರೋತಿಮನುಜಸ್ತತ್ಸರ್ವಂಸಿಧ್ಯತಿಕ್ಷಣಾತ್ । ತಸ್ಮಾತ್ಕಲಿ
ಸ್ಸಾಧುರೇವ ಅನ್ಯಚ್ಚಾಪಿನಿಶಾಮಯ॥೧೬॥ ಬ್ರಹ್ಮಚರ್ಯಂ

ಯುಗದಲ್ಲಿ ರಕ್ತವು ಇರುವವರಿಗೂ ಪ್ರಾಣಗಳಿರುವವು, ಕಲಿಯುಗದಲ್ಲಿ ಅನ್ನವನ್ನು ತಿನ್ನುತ್ತಾ ಇರುವವರಿಗೂ ಪ್ರಾಣಗಳಿರುವವು ॥ ॥೧೫॥

ಇಂದ್ರಿಯ-ಚಕ್ಷುರಾದಿ ಇಂದ್ರಿಯಗಳ, ಗ್ರಾಮಂ-ಸಮೂಹವನ್ನು, ಸನ್ನಿಯಮ್ಯ-ತನ್ನ ಅಧೀನದಲ್ಲಿ ಇರಿಸಿಕೊಂಡು ಶಾಂತಃ-ಕ್ರೋಧವಿಲ್ಲದವನಾಗಿ, ಸಮಾಹಿತಃ-ಸ್ಥಿರನಾಗಿ, ದಾಂತಃ-ಅಂತರಿಂದ್ರಿಯ ನಿಗ್ರಹವುಳ್ಳವನಾಗಿ, ಮನುಜಃ-ಮನುಷ್ಯನು,ಯತ್-ಯತ್-ಯಾವಾವದನ್ನು, ಕರೋತಿ-ಮಾಡುತ್ತಾನೊ, ತತ್ಸರ್ವಂ-ಅದೆಲ್ಲವೂ, ಕ್ಷಣಾತ್-ನಿಮಿಷಮಾತ್ರದಲ್ಲಿ, ಸಿಧ್ಯತಿ-ಲಭಿಸುತ್ತದೆ. ತಸ್ಮಾತ್-ಆದ್ದರಿಂದ, ಕಲಿ-ಕಲಿಯುಗವು, ಸಾಧುರೇವ-ಜನರಿಗೆ ಅನುಕೂಲವಾದದ್ದು, ಅನ್ಯಚಾಪಿ-ಮತ್ತೊಂದನ್ನು, ನಿಶಾಮಯ-ಕೇಳು. ॥ತಾ॥ಅಂತರಿಂದ್ರಿಯಬಹಿರಿಂದ್ರಿಯನಿಗ್ರಹಯುಳ್ಳವನಾಗಿ ಮನುಷ್ಯನು ಯಾವ ಯಾವ ಕೆಲಸವನ್ನು ನಿಶ್ಚಲನಾಗಿ ಮಾಡುತ್ತಾನೊ, ಅದೆಲ್ಲವು ಆಗುವದು. ಆದಕಾರಣ ಕಲಿಯುಗವು ಜನರಿಗೆ ಅನುಕೂಲವಾದದ್ದು, ಮತ್ತೊಂದನ್ನು ಹೇಳುತ್ತೇನೆ ಕೇಳು ॥ ॥೧೬॥

ಬ್ರಹ್ಮನ್-ಬ್ರಾಹ್ಮಣನಾದ ವೈಖಾನಸಮುನಿಯೇ,ಕಲೌ-ಕಲಿಯುಗದಲ್ಲಿ, ಸ್ತ್ರೀಣಾಂ-ಹೆಂಗಸರಿಗೆ, ಬ್ರಹ್ಮಚರ್ಯಂ-ಉಪನಯನಾದಿ ಸಂಸ್ಕಾರವಾದಮೇಲೆ ಮಾಡಬೇಕಾದ, ವೇದಾಧ್ಯಯನ-ಭಿಕ್ಷಾಟನ, ಗುರುಕುಲವಾಸವೇ ಮುಂತಾದ ಬ್ರಹ್ಮಚಾರಿತನವು, ತಪಃ-ಕೃಛ್ರಚಾಂದ್ರಾಯಣಾದಿರೂಪವಾದ, ನಿರಶನಾದಿರೂಪವಾದ ತಪವು, ಯಾಗಃ-ಯಜ್ಞವು, ವಿವಿಧಾಃ-ಇನ್ನೂ ಬಗೆಬಗೆಯಾದ, ಕ್ರಿಯಾಃ-ಕರ್ಮಗಳು, ನಾಸ್ತಿ-ಇಲ್ಲ, ತಾಃ-ಆ ಹೆಂಗಸರು, ಪತಿಭಕ್ತ್ಯಾ-ಗಂಡನಲ್ಲಿ ಅವ್ಯಭಿಚರಿತವಾದ ವಿಶ್ವಾಸದಿಂದ, ತರಂತಿ-ಸಂಸಾರದುಃಖವನ್ನು ದಾಟುವರು. ॥ತಾ॥ ವೈಖಾನಸಮುನಿಯೇ, ಕಲಿಯುಗದಲ್ಲಿ, ಹೆಂಗಸರಿಗೆ ಯಜ್ಞಾದಿ ಕರ್ಮಗಳು ಕೃಛ್ರಚಾಂದ್ರಾಯಣಾದಿ ತಪಸ್ಸುಗಳು, ಉಪನೀತಳಾಗಿ ವೇದಾಧ್ಯ

ತಪ್ರೋಯೋಗಃಜಪಾದಿವಿವಿಧಾಕ್ರಿಯಾಃ। ನಾಸ್ತಿಸ್ತ್ರೀಣಾಂ
ಕಲೌಬ್ರಹ್ಮ ಪತಿಭಕ್ತ್ಯಾತರಂತಿತಾಃ ॥ ೧೭ ॥ ಮಿತಂ
ದದಾತಿಹಿಪಿತಾಮಿತಂಭ್ರಾತಾಮಿತಂಸುತಃ ॥ ಅಮಿತಸ್ಯ
ತುದಾತಾರಂಪತಿಂಭಾರ್ಯಾನಲಂಘಯೇತ್ ॥ ೧೮ ॥ ಬಾಲ್ಯೆ

ಯೆನವು ಗುರುಕುಲದಲ್ಲಿರುವದು-ಸಂಧ್ಯಾವಂದನಾದಿಕರ್ಮಗಳು ಅವಶ್ಯ ಕವಿಲ್ಲವು, ಅವರು ಗಂಡನಲ್ಲಿ ಅವ್ಯಭಿಚರಿತವಾದ ಭಕ್ತಿಯಿಂದಲೇ ಕೃತಾರ್ಥರಾಗುವರು. ಹೆಂಗಸರಿಗೆ ಉಪನಯನಕ್ಕೆ ಬದುಲಾಗಿಯೇ ವಿವಾಹಸಂಸ್ಕಾರವು ಪತಿಯಿಂದ ಆಗಬೇಕು, ಹಾಗೆ ಪತಿಯಿಂದ ವಿವಾಹ ಸಂಸ್ಕಾರವಾಗದೇ ಹೋದರೆ, ಪರಲೋಕಗತಿಯು ಅವಳಿಗೆ ಉಂಟಾಗುವದಿಲ್ಲವೆಂಬ ಭಾವವು. ॥ಶ್ಲೋ॥ ಸ್ತ್ರೀಣಾಮುಪನಯಸ್ಥಾನೆ ವಿವಾಹಂಮನುರಬ್ರವೀತ್ ॥ ಭಾರತೆ॥ ಅಸಂಸ್ಕೃತಾಯಾಃಕನ್ಯಾಯಾಃ ಕುತೋಲೋಕಾಸ್ತವಾನಘೆ ॥ ॥೧೭॥

ಪಿತಾ-ತಂದೆಯು, ಮಿತಂ-ಕ್ಲುಪ್ತವಾದ ಸಹಾಯವನ್ನು, ಭ್ರಾತಾ-ಸಹೋದರನು, ಮಿತಂ-ಕ್ಲುಪ್ತವಾದ್ದನ್ನು, ಸುತಃ-ಮಗನು, ಮಿತಂ-ಕ್ಲುಪ್ತವಾದ್ದನ್ನು, ದದಾತಿ-ಕೊಡುತ್ತಲಿದ್ದಾನೆ, ಅಮಿತಸ್ಯ-ಕ್ಲುಪ್ತವಿಲ್ಲದ, ಅಂದರೆ ಇಹ ಪರಲೋಕಗಳಲ್ಲಿ, ಅಪರಿಮಿತಸುಖವನ್ನು, ದಾತಾರಂ-ಕೊಡುವವನಾದ, ಪತಿಂ-ಗಂಡನನ್ನು, ಭಾರ್ಯಾ-ಹೆಂಡತಿಯು, ನಲಂಘಯೇತ್-ಮೀರಿಹೋಗಕೂಡದು, ಅಂದರೆ ಪತಿಯ ಅನುಮತಿಯಂತೆ, ಧರ್ಮಮಾರ್ಗವನ್ನು ಮೀರದೆ ಇರಬೇಕೆಂಬ ಭಾವವು. ॥ತಾ॥ ತಂದೆಯು. ಅಣ್ಣತಮ್ಮಂದಿರು, ಸುತರು ಮಿತವಾದ ಸುಖವನ್ನು ಕೊಡುತ್ತಾರೆ. ಅಪರಿಮಿತವಾದ ಇಹ ಪರ ಸುಖಪ್ರದನಾದ ಗಂಡನನ್ನು ಹೆಂಡತಿಯು ಮೀರಿ ನಡೆಯಬಾರದು ॥ ॥೧೮॥

ಬಾಲ್ಯೆ-ಚಿಕ್ಕಂದಿನಲ್ಲಿ, ಪಿತೃವಶೆ-ತಂದೆಯ ಸ್ವಾಧೀನವಲ್ಲಿ, ತಿಷ್ಠೇತ್-ಇರಬೇಕು, ಯೌವನೆ-ಪ್ರಾಯಬಂದಮೇಲೆ, ಪಾಣಿಗ್ರಾಹಸ್ಯ-ತನ್ನ ಕೈಹಿಡಿದು ಸಪ್ತಪದೀವರಿಗೆ ವಿವಾಹಕರ್ಮವು ಪೂರ್ತಿಯಾದ ಗಂಡನ, (ವಶೆ-ಸ್ವಾಧೀನದಲ್ಲಿಯೂ) ಭರ್ತರಿ-ಗಂಡನು, ಪ್ರೇತೆ-ಸತ್ತಬಳಿಕ, ಪುತ್ರಾಣಾಂ-ಮಕ್ಕಳ (ವಶೆ-ಸ್ವಾಧೀನದಲ್ಲಿ) ತಿಷ್ಠೇತ್-ಇರಬೇಕು,

ಪಿತೃವಶೇತಿಷ್ಠೇತ್ಪಾಣಿಗ್ರಾಹಸ್ಯಯೌವ್ವನೆ।ಪುತ್ರಾಣಾಂ
ಭರ್ತರಿಪ್ರೇತೆನಭಜೇತ್ಸ್ತ್ರೀಸ್ವತಂತ್ರತಾಂ ॥೧೯॥ ಪ್ರ
ಥಮಂಪ್ರತಿಬುಧ್ಯಾಶುಚರಮಂ ಸಂವಿಶಂತಿಯಾಃ। ಭರ್ತೃ
ಶುಶ್ರೂಷಣರತಾಃ ಬ್ರಹ್ಮಲೋಕಂವ್ರಜಂತಿತಾಃ ॥ ೨೦॥ ನಾ
ಸ್ತಿಸ್ತ್ರೀಣಾಂಪೃಥಗ್ಯಜ್ಞೋನವ್ರತಂನಾಪ್ಯುಪೋಷಣಂ।

ಸ್ತ್ರೀ-ಹೆಂಗಸು, ಸ್ವತಂತ್ರತಾಂ-ಸ್ವಾತಂತ್ರ್ಯವನ್ನು ನಭಜೇತ್-ಹೊಂದಕೂಡದು. ॥ತಾ॥ ಹೆಂಗಸು ಚಿಕ್ಕಂದಿನಲ್ಲಿ ತಂದೆಯ ಬಳಿಯಲ್ಲಿಯೂ,ಪ್ರಾಯದಲ್ಲಿಗಂಡನಸ್ವಾಧೀನದಲ್ಲಿಯೂ,ಗಂಡನು ಸತ್ತರೆಮಕ್ಕಳ ಸ್ವಾಧೀನದಲ್ಲಿಯೂಇರಬೇಕೇಹೊರ್ತು,ಸ್ವತಂತ್ರಳಾಗಿರಕೂಡದು, ಹೆಂಗಸರು ಸ್ವತಂತ್ರರಾಗಿದ್ದರೆ ಭ್ರಷ್ಟರಾಗುವರಾದ್ದರಿಂದ ಅಂಥಾ ಹೆಂಗಸರನ್ನು ರಾಜನು ಧರ್ಮವಾಗಿ ಪಾಲಿಸಬೇಕು ॥ ॥೧೯॥

ಯಾಃ-ಯಾವ ಹೆಂಗಸರು, ಪ್ರಥಮಂ-ಮೊದಲು, ಆಶು-ಜಾಗ್ರತೆಯಾಗಿ, ಪ್ರತಿಬುಧ್ಯ-ಎದ್ದು, ಚರಮಂ-ಕೊನೆಯಲ್ಲಿ, ಸಂವಿಶಂತಿ-ಮಲಗುವವರಾಗುವರೋ, ತಾಃ-ಅಂಥಾವರಾದ, ಭರ್ತೃ-ಗಂಡನ, ಶುಶ್ರೂಷಣ-ಅವ್ಯಭಿಚರಿತವಾದ ಸೇವೆಯಲ್ಲಿ, ರತಾಃ-ಆಸಕ್ತರಾದ, ಹೆಂಗಸರು, ಬ್ರಹ್ಮಲೋಕಂ-ಸತ್ಯಲೋಕವನ್ನು ಕುರಿತು, ವ್ರಜಂತಿ-ಹೋಗುತ್ತಲಿದ್ದಾರೆ. ॥ತಾ॥ ಯಾವ ಹೆಂಗಸರು ಮನೆಯಲ್ಲಿ ಎಲ್ಲರೂ ಏಳುವದಕ್ಕೆ ಮುಂಚೆ ಎದ್ದು, ಎಲ್ಲರೂ ಮಲಗಿದಮೇಲೆ ಮಲಗಿಕೊಂಡು ಇರುವರೋ ಅಂಥಾವರಾದ ನಿರ್ದುಷ್ಟವಾದಪತಿಸೇವೆಯುಳ್ಳ ಸ್ತ್ರೀರು, ಬ್ರಹ್ಮಲೋಕವನ್ನು ಹೊಂದುವರು ॥ ॥೨೦॥

ಸ್ತ್ರೀಣಾಂ-ಹೆಂಗಸರಿಗೆ ಪೃಥಕ್-ಪತಿಯಾಜ್ಞೆಯಿಲ್ಲದೆ ಪ್ರತ್ಯೇಕವಾಗಿ, ಯಜ್ಞಃ-ಜಪಾದಿಯಜ್ಞವು,ನಾಸ್ತಿ-ಇಲ್ಲ, ವ್ರತಂ-ಏಕಾದಶ್ಯಾದಿ ಶುದ್ಧೋಪವಾಸವ್ರತಗಳು, ಉಪೋಷಣಂ-ಅಮಾವಾಸ್ಯೆಭಾನುವಾರ, ಶಿವರಾತ್ರಿ ಇಷ್ಟಿ ಮುಂತಾದ ದಿನಗಳಲ್ಲಿ, ರಾತ್ರಿಯಲ್ಲಿಯೇ ಆಗಲಿ, ಹಗಲೂ ರಾತ್ರಿಗಳಲ್ಲಿಯೇ ಆಗಲಿ ಉಪವಾಸವು, ನಾಸ್ತಿ-ಇಲ್ಲ, ಯಾಸಾಂ-ಯಾವ ಹೆಂಗಸರಿಗೆ,ಭರ್ತಾ-ಗಂಡನು. ಪ್ರಿಯಃ-ಹಿತನಾದ, ದೇವಃ-ದೇವರು, ಎಂಬದಾಗಿ ನಿಷ್ಕರ್ಷೆ ಉಂಟಾಗಿರುವುದೋ,ತಾಸಾಂ

ಯಾಸಾಂಭರ್ತಾ ಪ್ರಿಯೋದೇವಸ್ತಾಸಾಂ ಲೋಕಾಮ
ಹೋದಯಾಃ॥೧॥ದುಶ್ಶೀಲಃಕಾಮವೃತ್ತೋವಾ ಗುಣೈರ್ವಾ
ಪಿವಿವರ್ಜಿತಃ।ಯಾಸಾಂಸ್ತ್ರೀಣಾಂಪ್ರಿಯೋಭರ್ತಾತಾಸಾಂ
ಲೋಕಾಮಹೋದಯಾಃ ॥೨॥ ಪತಿಂಯಾನಾಭಿಚರತಿ

ಅಂಥಾಹೆಂಗಸರಿಗೆ,ಮಹೋದಯಾಃ–ಮಹಾಪುಣ್ಯೋದಯವುಳ್ಳ, ಲೋಕಾಃ-ಬ್ರಹ್ಮಾದಿ ಲೋಕಗಳು (ಭವಂತಿ-ಉಂಟಾಗುವವು.) ॥ತಾ॥ ಹೆಂಗಸರಿಗೆ ಜಪ ಯಜ್ಞಾದಿ ಕರ್ಮಗಳು, ಏಕಾದಶ್ಯಾದಿ ಶುದ್ಧೋಪವಾಸವ್ರತಗಳು, ಅಮಾವಾಸ್ಯೆಭಾನುವಾರ ಸಂಕ್ರಮಣ ಶಿವರಾತ್ರಿ, ಅಷ್ಟಮಿ ಮುಂತಾದವುಗಳ ಹಗಲಾಗಲಿ, ರಾತ್ರಿಯಲ್ಲಿಯಾಗಲಿ, ಹಗಲೂ ರಾತ್ರಿ ಕೂಡ ಆಗಲಿ ಉಪವಾಸವು ಮಾಡತಕ್ಕ ಅವಶ್ಯಕವಿಲ್ಲ. ಗಂಡನೇ ದೇವರೆಂಬದಾಗಿ ಭಾವನೆಯುಳ್ಳ ಹೆಂಗಸರಿಗೆ ಬ್ರಹ್ಮಾದಿ ಪುಣ್ಯಲೋಕಪ್ರಾಪ್ತಿಯಾಗುವದು ॥ ॥೧॥

ದುಶ್ಶೀಲಃ–ಕೆಟ್ಟಸ್ವಭಾವವುಳ್ಳವನಾದಾಗ್ಯೂ, ಕಾಮವೃತ್ತೋವಾ–ಇತರ ಸ್ತ್ರೀರಲ್ಲಿಕಾಮುಕಸ್ವಭಾವದವನಾಗಿದ್ದಾಗ್ಯೂ, ಗುಣೈಃ–ಸದ್ಗುಣಗಳಿಂದ, ವಿವರ್ಜಿತೋಪಿ- ರಹಿತನಾಗಿದ್ದಾಗ್ಯೂ, ಯಾಸಾಂ–ಯಾವ, ಸ್ತ್ರೀಣಾಂ-ಹೆಂಗಸರಿಗೆ, ಭರ್ತಾ–ಗಂಡನಾದವನು, ಪ್ರಿಯಃ–ಪ್ರೀತಿಪಾತ್ರನಾಗುತ್ತಾನೋ, ತಾಸಾಂ–ಅಂಥಾ ಹೆಂಗಸರಿಗೆ, ಮಹೋದಯಾಃ–ಅಧಿಕ ಆನಂದವುಳ್ಳ, ಲೋಕಾಃ–ಸತ್ಯಲೋಕವೆ ಮೊದಲಾದ ಲೋಕಗಳು, (ಭವಂತಿ–ಆಗುವವು) ॥ತಾ॥ ಗಂಡನು ದುಷ್ಟನಾಗಿದ್ದಾಗ್ಯೂ ಸುಗುಣಗಳಿಲ್ಲದವನಾಗಿದ್ದಾಗ್ಯೂ, ಜಾರನಾಗಿದ್ದಾಗ್ಯೂ, ಹೆಂಡತಿಯು ಗಂಡನಲ್ಲಿ ಭಕ್ತಿವಿಶ್ವಾಸಗಳಿಂದ ನಡಿಯುತ್ತಿರುವವಳಾದರೆ ಉತ್ತಮಲೋಕಗಳನ್ನು ಪಡೆಯುವಳು. ॥೨॥

ಯಾ–ಯಾವಹೆಂಗಸು, ಪತಿಂ–ಗಂಡನನ್ನು, ಮನೋವಾಗ್ದೇಹಸಂಯತಾ–ಮನಸ್ಸಿನಿಂದ, ಮಾತಿನಿಂದ, ಶರೀರದಿಂದ, ನಿಯಾತಳಾಗಿ, ನಾಭಿಚರತಿ–ವ್ಯಭಿಚಾರಾದಿಕೃತ್ಯಗಳಿಂದ ತಿರಸ್ಕರಿಸಿರುವದಿಲ್ಲವೋ, ಸಾ–ಅಂಥಾಪತಿವ್ರತೆಯಾದ ಹೆಂಗಸು, ಮೃತಾಸತಿ–ಸಾಯುತ್ತಾ, ಬ್ರಹ್ಮಪರಾಯಣಾಃ-ಬ್ರಹ್ಮಚಿಂತಕರಾದ ಜನರು, ಯಥಾ–ಹೇಗೋ,ಹಾಗೆ

ಮನೋವಾಗ್ದೇಹಸಂಯುಕ್ತಾ ।ಸಾಮೃತತಾ ಲಭತೇಸ್ವರ್ಗಂ
ಯಥಾಬ್ರಹ್ಮಪರಾಯಣಾಃ ॥ ೨೦ ॥ ಅಪ್ರಜಾಂದಶಮೇವ

ಳಿಕ ಬ್ರಹ್ಮಚಿಂತಕರ ಹಾಗೆ ಬ್ರಹ್ಮಾದಿ ದೇವಲೋಕಗಳನ್ನು ಪಡಿ ಸ್ವರ್ಗಂ–ದೇವಲೋಕವನ್ನು, ಲಭತೇ–ಹೊಂದುತ್ತಾಳೆ, ॥ ತಾ ॥ ಯಾವ ಹೆಂಗಸು, ಕಾಯಿಕವಾಚಕಮಾನಸಿಕಗಳಿಂದ, ಪತಿಯನ್ನು ತಿರಸ್ಕರಿಸಿ,ವ್ಯಭಿಚಾರಾದಿಗಳನ್ನು ಮಾಡದೇ ಇರುತ್ತಾಳೋ, ಅವಳು ಸತ್ತಬ ಯುವಳು, ॥೨೧॥

ದಶಮೇವರ್ಷೇ–ಹತ್ತುವರ್ಷಗಳಾದ ಮೇಲೆ, ಅಪ್ರಜಾಂ–ಸಂತಾನವನ್ನು ಪಡೆಯದೇ ಇರುವ ಹೆಂಡತಿಯನ್ನು, ದ್ವಾದಶೇ–ಹನ್ನೆರಡುವರ್ಷಗಳಾದ ಮೇಲೆ, ಸ್ತ್ರೀಪ್ರಜಾಂ–ಹೆಣ್ಣುಗಳನ್ನೇ ಹೆರುತ್ತಿರುವ ಹೆಂಡತಿಯನ್ನು, ಪಂಚದಶೇ–ಹದಿನೈದು ವರ್ಷಗಳಾದಮೇಲೆ, ಮೃತಪ್ರಜಾಂ–ಮಕ್ಕಳುಹುಟ್ಟಿಸಾಯುತ್ತಿರುವಸ್ವಭಾವವುಳ್ಳಹೆಂಡತಿಯನ್ನು, ಅಪ್ರಿಯವಾದಿನೀಂ–ಅಹಿತವಾದ, ಮಾತನ್ನು ಆಡುವ ಹೆಂಡತಿಯನ್ನು ಅಂದರೆ, ಗಂಡನು ನೋಡುವಂತೆವ್ಯಭಿಚಾರಮುಂತಾದ ದುರ್ನಡತೆಯನ್ನು ನಡೆಯುತ್ತಿರುವ ಹೆಂಡತಿಯನ್ನು, ಸದ್ಯಃ–ಆಕ್ಷಣವೆ, (ತ್ಯಜೇತ್–ಪರಿತ್ಯಜಿಸಬೇಕು ॥ತಾ॥ಹತ್ತುವರ್ಷಗಳವರಿಗೆ ಮಕ್ಕಳಿಲ್ಲದೆ ಇರುವ ಹೆಂಡತಿಯು ಪತಿವ್ರತೆಯಾಗಿಯೇ ಇದ್ದಪಕ್ಷದಲ್ಲಿ, ಅವಳನ್ನು ಅನ್ನವಸ್ತ್ರಾದಿಗಳಿಂದ ಪೋಷಿಸುತ್ತಾ, ಅವಳ ಸಮಾಗಮವನ್ನು ಪರಿತ್ಯಜಿಸಬೇಕು, ಆಬಳಿಕ–ಪಿತೃರುಣವಿಮುಕ್ತಿಗಾಗಿ ಮತ್ತೊಬ್ಬಳನ್ನು ಮದುವೆಯಾಗಿ ಪುತ್ರರನ್ನು ಪಡೆಯಬೇಕು (ತೈತ್ತಿರೀಯ್ಯಾಕ) ಆಚಾರ್ಯಾಯ ಪ್ರಿಯಂಧನ ಮಾಹೃತ್ಯ ಪ್ರಜಾತಂತುಂಮಾವ್ಯವಚ್ಛೇತ್ಸೀಃ॥ಶ್ರುತಿಃ॥ ಪ್ರಜಯಾಹಿಮನುಷ್ಯಃ ಪೂರ್ಣಃ॥ ಆದ್ದರಿಂದ ಹತ್ತುವರ್ಷದವರಿಗೂ ಮಕ್ಕಳಿಲ್ಲದೆ ಇರುವ ಹೆಂಡತಿಯಲ್ಲಿ ಸಂಗಮವನ್ನು ಪರಿತ್ಯಜಿಸಬೇಕೆಂಬಭಾವವು, ಹಾಗೆ ಪರಿತ್ಯಜಿಸದೇಇದ್ದಲ್ಲಿ–ಗರ್ಭೋದಯಕ್ಕೆ ಅಯೋಗ್ಯವಾದಕ್ಷೇತ್ರದಲ್ಲಿ ರೇತಸ್ಸನ್ನು ನಿಷ್ಫಲವೆಂದುತಿಳಿದುಬಿಡುತ್ತಾಬರುವದ್ದರಿಂದಅಯೋನಿರೇತಸ್ಸೇಕಪ್ರತ್ಯವಾಯವುಂಟಾಗುವದೆಂಬಭಾವವು, ಹೆಣ್ಣುಗಳನ್ನೇ ಹೆರುತ್ತಿರುವ ಹೆಂಡತಿಯನ್ನು ಹನ್ನೆರಡುವರ್ಷಗಳವರಿಗೂನೋಡಿಬಿಡುವ

ಶೇ ಸ್ತ್ರೀಪ್ರಜಾಂದ್ವಾದಶೇತಥಾ । ಮೃತಪ್ರಜಾಂ ಪಂಚ
ದಶೇಸದ್ಯಸ್ತ್ವಪ್ರಿಯವಾದಿನೀಂ ॥೭೮॥ ವ್ಯಭಿಚಾರರತಾನಾ
ರೀ ಭರ್ತುರಪ್ರಿಯವಾದಿನೀ । ತಸ್ಮಾತ್ತಾಂ ವಿಸೃಜೇದ್ವಿ

ಳಿಗೆ ಗಂಡುಮಕ್ಕಳು ಹುಟ್ಟದೇ ಇದ್ದ ಪಕ್ಷದಲ್ಲಿ, ಆಕೆಯ ಸಂಯೋಗವನ್ನು ಬಿಟ್ಟು, ಬೇರೆ ಮದಿವೆಯಾಗಿ ಪುತ್ರರನ್ನು ಪಡೆಯಬಹುದು. ಹುಟ್ಟಿ ಸಾಯುತ್ತಿರುವ ಮಕ್ಕಳನ್ನು ಹೆರುತ್ತಿರುವ ಹೆಂಡತಿಯನ್ನು ಹದಿನೈದು ವರ್ಷಗಳವರಿಗೂ ನಿರೀಕ್ಷಿಸಿ ಆಬಳಿಕ ಆಕೆಯ ಸಂಯೋಗವನ್ನು ಬಿಟ್ಟು, ಮತ್ತೊಬ್ಬಳನ್ನು ಮದಿವೆಯಾಗಿ, ಮಕ್ಕಳನ್ನು ಪಡೆಯಬಹುದು, ಈಮೂರುಮಂದಿ ಹೆಂಗಸರ ಸಂಗಮವನ್ನು ಮಾತ್ರ ಪರಿತ್ಯಜಿಸಬೇಕೇ ಹೊರ್ತು ಇತರ ಸವ್ಯವಹಾರ ಪರಿತ್ಯಾಗವನ್ನು ಮಾಡಕೂಡದು, ಗಂಡನನ್ನು ಲಕ್ಷ್ಯಮಾಡದೆ ಹರಾಹರಿಕೆಯಾಗಿ ವ್ಯಭಿಚಾರಮಾಡಿದ್ದು ಗಂಡನಿಗೆ ತಿಳಿಯಬಂದ ಕೂಡ್ಲೆ ಅಂಥಾ ಹೆಂಡತಿಯನ್ನು ಆಗಲೆ-ಸಂಭಾಷಣ ಸ್ಪರ್ಶನಭೋಜನಾದಿಗಳನ್ನು ಬಿಡುವದಲ್ಲದೆ ಘಟಶ್ರಾದ್ಧ ಮುಂತಾದ ಕರ್ಮನಿವೃತ್ತಿಯಿಂದ ಅವಳಿಗೂ ತನಿಗೂ ಇರುವ ಕರ್ಮಸಂಬಂಧವನ್ನೂ ತಪ್ಪಿಸಿಕೊಳ್ಳಬೇಕು, ಹಾಗೆಮಾಡದೇ ಹೋದಲ್ಲಿ ಸಾಂಕರ್ಯದಿಂದ ವಂಶವು ಕೆಡುವುದು. ॥೭೮॥

ವ್ಯಭಿಚಾರ_ಜಾರತ್ವದಲ್ಲಿ, ರತಾ-ಆಸಕ್ತಳಾದ, ನಾರೀ-ಹೆಂಗಸು, ಭರ್ತುಃ-ಗಂಡನಿಗೆ, ಅಪ್ರಿಯವಾದಿನೀ-ಅಹಿತವಾದದ್ದನ್ನು ಹೇಳಿದವಳಾಗುವಳು, ತಸ್ಮಾತ್-ಆದ್ದರಿಂದ, ವಿದ್ವಾನ್-ಪಂಡಿತನಾದವನು, ತಾಂ-ವ್ಯಭಿಚಾರರತಳಾದ, ಹೆಂಡತಿಯನ್ನು, ವಿಸೃಜೇತ್-ಪರಿತ್ಯಜಿಸಬೇಕು, ಅನ್ಯಥಾ-ವ್ಯಭಿಚಾರಮಾಡದೆ ಇದ್ದ ಪಕ್ಷದಲ್ಲಿ, ತ್ಯಾಗಂ-ಪರಿತ್ಯಾಗವನ್ನು ನಾರ್ಹತಿ_ಪಡೆಯತಕ್ಕವಳಾಗುವದಿಲ್ಲ, ॥ತಾ॥ ವ್ಯಭಿಚಾರವನ್ನು ಮಾಡುವ ಹೆಂಗಸೇ ಗಂಡನಿಗೆ ಅಹಿತವನ್ನು ಮಾಡಿದವಳಾಗುವಳು, ಆದ್ದರಿಂದ, ವ್ಯಭಿಚಾರಮಾಡಿದ ಹೆಂಗಸನ್ನು ಪಂಡಿತನಾದವನು ಘಟಶ್ರಾದ್ಧಪುರಸ್ಸರವಾಗಿ ಬಿಡಬೇಕು, ವ್ಯಭಿಚಾರವನ್ನು ಮಾತ್ರ ಮಾಡದೆ, ಗಂಡನಿಗೆ ಅಹಿತವಾದ ಮಾತುಗಳನ್ನು ಆಡಿದ ಹೆಂಗಸನ್ನು ಘಟಶ್ರಾದ್ಧ ಪುರಸ್ಸ

ದ್ವಾಸ್ಸ್ನ್ಯಧಾತ್ಯಾಗಮರ್ಹತಿ॥೨೫॥ಅತಯೆಽಪಸ್ತ್ರಿಯಃ ಸಾಧುಃ ಕಲೌಬ್ರಹ್ಮನ್ವಿಶೇಷತಃ ।ಸೇವಯಾವಿಪ್ರಪರ್ಯಸ್ಯ ಶೂದ್ರೋಸದ್ಗತಿಮಾಪ್ನುಯಾತ್ ॥ ೨೬॥ ಅಷ್ಟಚತ್ವಾರಿ ವರ್ಷಾಣಿಬ್ರಹ್ಮಚರ್ಯಂಕೃತೇಚರೇತ್ । ಷತ್ರಿಂಶದ್ವರ್ಷ ಪರ್ಯಂತಂತ್ರೇತಾಯಾಂತತ್ಪ್ರಕೀರ್ತಿತಂ ॥ ೨೭॥ ದ್ವಾಪರೆ

ರವಾಗಿ ಪರಿತ್ಯಾಗಮಾಡಕೂಡದು॥ ॥೨೫॥

ಬ್ರಹ್ಮನ್-ವೈಖಾನಸಮುನಿಯೇ, ಅತೆಯೆಪ-ಹೆಂಗಸರುಪತಿವ್ರತೆಯರಾಗಿರುವದರಿಂದಲೇ ಕೃತಾರ್ಥರಾಗಿ ಬ್ರಹ್ಮಲೋಕವನ್ನು ಪಡೆಯುತ್ತಾರಾದ್ದರಿಂದ, ಕಲೌ--ಕಲಿಯುಗದಲ್ಲಿ,ಸ್ತ್ರಿಯಃ-ಹೆಂಗಸರು, ಸಾಧುಃ-ಸುಲಭವಾಗಿ ಸದ್ಗತಿಯನ್ನು ಹೊಂದುವದಕ್ಕೆ, ಅನುಕೂಲವು, ಶೂದ್ರಃ-ಒಕ್ಕಲಿಗನು,ವಿಪ್ರಪರ್ಯಸ್ಯ-ಬ್ರಾಹ್ಮಣ ಶ್ರೇಷ್ಠನ, ಸೇವಯಾ-ಶುಶ್ರೂಷೆಯಿಂದ, ವಿಶೇಷತಃ-ಅಧಿಕವಾಗಿ, ಸದ್ಗತಿಂ-ಒಳ್ಳೇ ಗತಿಯನ್ನು, ಆಪ್ನುಯಾತ್-ಪಡೆಯುವವನಾಗುವನು, ॥ತಾ॥ ವೈಖಾನಸಮುನಿಯೇ, ಹೆಂಗಸುಪತಿವ್ರತೆಯಾಗಿರುವದರಿಂದಲೆ ಸುಲಭವಾಗಿ ಸದ್ಗತಿಯನ್ನು ಪಡೆಯುತ್ತಾಳೆ,ಶೂದ್ರನು-ವಿಶೇಷವಾಗಿ ಬ್ರಾಹ್ಮಣರಸೇವೆಯನ್ನು ಮಾಡುತ್ತಾ ಬರುವದ್ದರಿಂದ ಉತ್ತಮಗತಿಯನ್ನು ಪಡೆಯುತ್ತಾನೆ॥ ॥೨೬॥

ಕೃತೆ-ಕೃತಯುಗದಲ್ಲಿ ಅಷ್ಟಚತ್ವಾರಿ-ನಲವತ್ತೆಂಟು, ವರ್ಷಾಣಿ-ಸಂವತ್ಸರಗಳು, ಬ್ರಹ್ಮಚರ್ಯಂ--ಬ್ರಹ್ಮಚರ್ಯಾಶ್ರಮವನ್ನು, ಚರೇತ್--ನಡಿಸುವವನಾಗಬೇಕು, ತ್ರೇತಾಯಾಂ-ತ್ರೇತಾಯುಗದಲ್ಲಿ, ಷಟ್ತ್ರಿಂಶದ್ವರ್ಷಪರ್ಯಂತಂ-ಮುವ್ವತ್ತಾರು ಸಂವತ್ಸರಗಳವರಿಗೂ, ತತ್-ಬ್ರಹ್ಮಚರ್ಯವು, ಪ್ರಕೀರ್ತಿತಂ-ನಡಿಸಬಹುದೆಂದು ಹೇಳಲ್ಪಡುವದು.॥ತಾ॥ಕೃತಯುಗದಲ್ಲಿ ನಲವತ್ತೆಂಟು ವರ್ಷಗಳ ಪರ್ಯಂತರವೂ ತ್ರೇತಾಯುಗದಲ್ಲಿ ಮುವ್ವತ್ತಾರು ವರ್ಷಗಳ ಪರ್ಯಂತರವೂ, ಬ್ರಹ್ಮಚರ್ಯವನ್ನು ನಡಿಸುತ್ತಿರಬಹುದು ॥ ॥೨೭॥

ದ್ವಾಪರೆತು-ದ್ವಾಪರಯುಗದಲ್ಲಿ ಆದರೇನೋ, ಚತುರ್ವಿಂಶದ್ವರ್ಷಪರ್ಯಂತಂ-ಇಪ್ಪತ್ನಾಲ್ಕು ವರ್ಷಗಳವರಿಗೂ, ಈರಿತಂ-ಬ್ರಹ್ಮಚರ್ಯದಲ್ಲಿ

ತುಶ್ಚತುರ್ವಿಂಶದ್ವರ್ಷಪರ್ಯಂತಮೀರಿತಂ ॥ ಕಲೌದ್ವಾದಶ
ವರ್ಷೀಯೋಬ್ರಹ್ಮಚರ್ಯಾಶ್ರಮೋಭವೇತ್ ॥೧೭॥ ಅಥವಾತ್ರೀ
ಣಿಷಟ್ಸಪ್ತ ವರ್ಷಾಣಿ ವ್ರತಮಾಚರೇತ್ ॥ ತದಭಾವೇಬ್ರ
ಹ್ಮತೇಜೋ ವಿಹೀನಃಪುರುಷೋಭವೇತ್ । ಬ್ರಾಹ್ಮೀಶಕ್ತಿ
ರ್ವಿನಶ್ಯೇತ ನಿಗ್ರಹಾ ನುಗ್ರಹಾತ್ಮಿಕಾ ॥ ಮಂತ್ರಾಃಪರಾ

ಇರಬಹುದೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು, ಕಲೌ–ಕಲಿಯುಗ ದಲ್ಲಿ,ದ್ವಾದಶವರ್ಷೀಯಃ–ಹನ್ನೆರಡು ವರ್ಷಗಳ ಕಾಲ ಪ್ರಮಾಣವುಳ್ಳ ದ್ದಾದ, ಬ್ರಹ್ಮಚರ್ಯಾಶ್ರಮಃ–ಬ್ರಹ್ಮಚರ್ಯಾಶ್ರಮವು, ಭವೇತ್–ಆದೀ ತು ॥ತಾ॥ ದ್ವಾಪರಯುಗದಲ್ಲಿ ಇಪ್ಪತ್ನಾಲ್ಕು ವರ್ಷಗಳವರಿಗೂ,ಕ ಲಿಯುಗವಲ್ಲಿ ಹನ್ನೆರಡು ವರ್ಷಗಳವರಿಗೂ, ಬ್ರಹ್ಮಚರ್ಯಾಶ್ರಮದಲ್ಲಿ ಇ ರಬಹುದು ॥ ॥೧೭॥

ಅಥವಾ ಕಲಿಯುಗದಲ್ಲಿ ಮಾತ್ರ ೧೨ ವರ್ಷಗಳವರಿಗೂ ಬ್ರಹ್ಮಚ ರ್ಯಾಶ್ರಮವನ್ನು ನಡಿಸುವದಕ್ಕೆ ಆಗದೇ ಇದ್ದ ವಿಷಯದಲ್ಲಿ, ಸಪ್ತ–ಏ ಳು,ಷಟ್–ಆರು,ತ್ರೀಣಿ–ಮೂರು, ವರ್ಷಾಣಿ–ಸಂವತ್ಸರಗಳು,ವ್ರತಂ– ಬ್ರಹ್ಮಚರ್ಯನಿಯಮವನ್ನು, ಅಂದರೆ ಗುರುಕುಲದಲ್ಲಿ ವೇದಾಧ್ಯಯನ ವನ್ನು ಮಾಡುತ್ತಾ ಭಿಕ್ಷಾನ್ನಾಶಿಯಾಗಿ, ಗಾಯತ್ರೀಜಪನಿರತನಾಗಿ ದ್ದುಕೊಂಡು ಬ್ರಹ್ಮಚರ್ಯನಿಯಮವನ್ನು, ಚರೇತ್–ನಡಿಸುತ್ತಿರಬೇ ಕು, ತದಭಾವೇ–ಹಾಗೆ, ಗುರುಕುಲವಾಸಿಯಾಗಿ ಗಾಯತ್ರೀಜಪ ವೇ ದಾಧ್ಯಯನಾದಿಗಳನ್ನು ಮಾಡಿಕೊಂಡು ಬ್ರಹ್ಮಚರ್ಯನಿಯಮವನ್ನು ನಡಿಸದೇ ಹೋದರೆ, ಪುರುಷಃ–ಬ್ರಾಹ್ಮಣನು, ಬ್ರಹ್ಮತೇಜೋವಿಹೀ ನಃ–ಬ್ರಹ್ಮತೇಜೋ ಶೂನ್ಯನಾದವನು, ಭವೇತ್–ಆಗುತ್ತಾನೆ, ನಿಗ್ರ ಹಾನುಗ್ರಹಾತ್ಮಿಕಾ––ಶಾಪಾನುಗ್ರಹರೂಪವಾದ, ಬ್ರಾಹ್ಮೀಶಕ್ತಿಃ– ಬ್ರಹ್ಮತೇಜೋಶಕ್ತಿಯು, ವಿನಶ್ಯೇತ–ಕ್ಷೀಣವಾಗುವದು, ಮಂತ್ರಾಃ– ವೇದಮಂತ್ರಗಳು,ಪರಾಙ್ಮುಖಾಃ–ಇವನನ್ನು ಬಿಟ್ಟು,ಹಿಂದಕ್ಕೆ ತಿರುಗು ವಂಥಾವುಗಳು, (ಆಗಿ) ಯಾಂತಿ–ಹೋಗುತ್ತಲಿವೆ, ಪಿತರಃ–ಪಿತೃದೇವ ತೆಗಳು, ಸುರಾಃ–ಬ್ರಹ್ಮಾದಿ ದೇವತೆಗಳು, ಕುಪ್ಯಂತಿ–ಸಿಟ್ಟುಗೊಳ್ಳುವ ರು. ॥ತಾ॥ ಕಲಿಯುಗದಲ್ಲಿ ಹನ್ನೆರಡು ವರ್ಷಗಳವರಿಗೆ ಬ್ರಹ್ಮಚರ್ಯ

ಬ್ರಹ್ಮತೇಜೋಯಾಂತಿ ಶಪ್ಯಂತಿ ಪಿತರಸ್ಸುರಾಃ ॥೨೯॥ ಕುವಿವಾ
ಹೈಃ ಕ್ರಿಯಾಲೋಪೈರ್ವೇದಾನಧ್ಯಯನೇನಚ। ಕುಲಾನ್ಯಕು
ಲತಾಂಯಾಂತಿ ದುಷ್ಪ್ರಜಾಸ್ಸಂಭವಂತಿಚ ॥೩೦॥ ತಸ್ಮಾ
ತ್ಕಲೌತು ಮುನಿಭಿಃ ಕ್ರಿಯತೇ ಧರ್ಮನಿಶ್ಚಯಃ । ಋಷಿಧರ್ಮಾ

ದಲ್ಲಿ ಇರಲು ಆಗದ ಪಕ್ಷದಲ್ಲಿ ಏಳು, ಆರು, ಮೂರು ವರ್ಷಗಳವರಿಗಾದ ರೂ ಬ್ರಹ್ಮಚರ್ಯಧರ್ಮದಲ್ಲಿ ಇರಬೇಕು, ಅಷ್ಟುಮಟ್ಟಿಗೂ ನಡಿಸದೇ ಹೋದಲ್ಲಿ ಶಾಪಾನುಗ್ರಹರೂಪವಾದ ಬ್ರಹ್ಮತೇಜೋಶಕ್ತಿಯು ನಾಶ ವಾಗುವದು, ಪಿತೃಗಳು ದೇವತೆಗಳು ಶಾಪವನ್ನು ಕೊಡುವರು॥ ॥೨೯॥

ಕುವಿವಾಹೈಃ–ಕುತ್ಸಿತವಾದ ವಿವಾಹಗಳಿಂದ, ಕ್ರಿಯಾಲೋಪೈಃ– ಕರ್ಮಗಳ ಲೋಪಗಳಿಂದ, ವೇದಾನಧ್ಯಯನೇನಚ––ವೇದಗಳನ್ನು ಅ ಭ್ಯಾಸಮಾಡದೇ ಬಿಡುತ್ತಾ ಬರುವದ್ದರಿಂದಲೂ, ಕುಲಾನಿ–ಮಹಾಋ ಷಿಗಳವಂಶಗಳು, ಅಕುಲತಾಂ–ದುಷ್ಕುಲತ್ವವನ್ನು, ಯಾಂತಿ–ಹೊಂ ದುವದು, ದುಷ್ಪ್ರಜಾಃ–ದುಷ್ಟ ಸಂತಾನಗಳು, ಸಂಭವಂತಿಚ–ಹು ಟ್ಟುವವು. ॥ತಾ॥ ಐದು ದಿನಗಳಲ್ಲಿದೀಕ್ಷೆಯಾಗಿ ಮಾಡಬೇಕಾದ ವಿವಾ ಹ ಸಂಸ್ಕಾರವನ್ನು ಒಂದು ದಿನದಲ್ಲಿಯೇ ಮಾಡುವ ದುರ್ವಿವಾಹಗಳಿಂ ದಲೂ, ಗರ್ಭಾದಾನಾದಿ ಕರ್ಮಗಳನ್ನು ಮಾಡದೇ ಬಿಡುವದರಿಂದ,ಆ ಕ ರ್ಮಗಳನ್ನು ಮಾಡಿಸುವಕಾಲದಲ್ಲಿ ಮಂತ್ರಗಳನ್ನು ಕ್ರಮವಾಗಿ ಹೇಳದೆ ಮಾಡಿಸುವದರಿಂದಲೂ, ಬ್ರಾಹ್ಮಣರು ನಿಯಮವಾಗಿ ಬ್ರಹ್ಮಚರ್ಯಕಾಲ ದಲ್ಲಿ ವೇದಗಳನ್ನು ಗುರುಸೇವೆಮಾಡಿ,ಅಭ್ಯಾಸವನ್ನು ಮಾಡದೇಇರುವದ್ದ ರಿಂದಲೂ,ಮಹರ್ಷಿಗಳ ವಂಶದಲ್ಲಿ ಹುಟ್ಟಿದವರಾಗಿದ್ದಾಗ್ಯೂ,ಬ್ರಾಹ್ಮಣ ಕುಲಗಳು ನೀಚಕುಲಗಳಲ್ಲಿ ಹುಟ್ಟಿದವರಂತೆ ತಪೋಹೀನರಾಗಿ,ದುಷ್ಕು ಲೀನರಾಗಿ ಹೋಗುವರು. ಕುವಿವಾಹಾದಿಗಳಿಂದ ಸುಸ್ಕೃತರಾದ ಸತಿ ಪ ತಿಗಳಲ್ಲಿ ಜನಿಸುವಮಕ್ಕಳು ಅಬ್ರಾಹ್ಮಣರಾಗಿಯೂ,ನಾಮಧಾರಕ ಬ್ರಾ ಹ್ಮಣರಾಗಿಯೂ ಹುಟ್ಟಿ,ಮ್ಲೇಛ್ಛಾಚಾರಪರರಾಗಿ ಹೋಗುವರು॥ ॥೩೦॥

ತಸ್ಮಾತ್–ಆ ಕಾರಣದಿಂದ, ಕಲೌ–ಕಲಿಯುಗದಲ್ಲಿ, ಮುನಿಭಿಃ–ಋ ಷಿಗಳಿಂದ, ಧರ್ಮ–ಕಲಿಯುಗದಲ್ಲಿ ನಡಿಯಬೇಕಾದ ಧರ್ಮಗಳ, ನಿಶ್ಚ ಯಃ–ನಿಷ್ಕರ್ಷೆಯು, ಕ್ರಿಯತೇ–ಮಾಡಲ್ಪಡುವದು, ನರಣಾ–ಕಲಿಯು

ನನುಸೃತ್ಯವರ್ತಿತವ್ಯಂನರೇಣಹಿ॥೩೧॥ಮನ್ವಾದಿಸ್ಮೃತಿಸಂ
ಘೇಷುಪ್ರೋಕ್ತಾಧರ್ಮಾವಿಶೇಷತಃ । ವರ್ಣಾಶ್ರಮಾನುಗು
ಣ್ಯೇನಗ್ರಾಹ್ಯಾನೋಚೇತ್ಪತತ್ಯಧಃ ॥೩೨॥ ಷಟ್ಕರ್ಮಾಭಿ

ಗದಲ್ಲಿ ಜನಿಸುವ ಮನುಷ್ಯನಿಂದ, ಕಲಿಧರ್ಮಾ—ಕಲಿಯುಗದಲ್ಲಿ ಋಷಿಗ ಳಿಂದ ಗೊತ್ತುಮಾಡಲ್ಪಟ್ಟ ಧರ್ಮಗಳನ್ನು, ಅನುಸೃತ್ಯ—ಅನುಸರಿಸಿ, ವ ರ್ತಿತವ್ಯಂ-ಇರತಕ್ಕದ್ದು, ಹಿ—ಪ್ರಸಿದ್ಧವು. ॥ತಾ॥ ಆದ್ದರಿಂದ ಋಷಿ ಗಳು ಕಲಿಯುಗದಲ್ಲಿ ನಡಿಯಬೇಕಾದ ಧರ್ಮಗಳನ್ನು ಗೊತ್ತುಮಾಡಿರು ವರು, ಅದರಂತೆ ಕಲಿಯುಗದ ಮನುಷ್ಯರು, ಕಲಿಯುಗಕ್ಕೆ ಋಷಿಗಳು ಹೇಳಿರುವ ಧರ್ಮಗಳನ್ನು ಅನುಸರಿಸಿ ನಡೆಯುತ್ತಾ ಬರಬೇಕು ॥ ॥೩೧॥

ಮನು—ಸ್ವಾಯಂಭುವ ಮನುವಿನಿಂದಲೂ, ಆದಿ—ಕ್ರತು, ಪರಾಶರ ಯಾಜ್ಞವಲ್ಕ್ಯ ವೃದ್ಧಪರಾಶರ, ಬೃಹತ್ಪರಾಶರ, ಹಾರೀತ, ಗೌತಮ ಮುಂತಾದವರಿಂದಲೂ, ಹೇಳಲ್ಪಟ್ಟ. ಸ್ಮೃತಿಸಂಘೇಷು—ಸ್ಮೃತಿಸಮೂ ಹಗಳಲ್ಲಿ, ವಿಶೇಷತಃ-ಅತಿಶಯವಾಗಿ, ಪ್ರೋಕ್ತಾಃ-ಹೇಳಲ್ಪಟ್ಟ, ಧ ರ್ಮಾಃ-ಧರ್ಮಗಳು, ವರ್ಣ—ಬ್ರಾಹ್ಮಣ, ಕ್ಷತ್ರಿಯ. ವೈಶ್ಯ, ಶೂದ್ರ ವ ರ್ಣಗಳ, ಆಶ್ರಮ-ಬ್ರಹ್ಮಚರ್ಯ, ಗೃಹಸ್ಥ—ಯತ್ಯಾಶ್ರಮಗಳ, ಆನುಗು ಣ್ಯೇನ—ಅನುಸಾರದಿಂದ, ಗ್ರಾಹ್ಯಾಃ-ನಡಿಸಬೇಕಾಗಿರುತ್ತವೆ, ನೋಚೇ ತ್—ಹಾಗೆ ಮಾಡದೇಹೋದರೆ, ಅಧಃಪತತಿ-ಭ್ರಷ್ಟನಾಗುವನು. ॥ತಾ॥ ಮನ್ವಾದಿ ಸ್ಮೃತಿಗಳಲ್ಲಿ ಸಮಸ್ತ ವರ್ಣದವರು ಸಕಲ ಆಶ್ರಮದವರು ಅವರವರು, ತಮ್ಮ ತಮ್ಮ ವರ್ಣಾಶ್ರಮಗಳಿಗೆ ತಕ್ಕಹಾಗೆ ನಡಿಯಬೇ ಕಾದ ಧರ್ಮಗಳೆಲ್ಲಾ ಹೇಳಲ್ಪಟ್ಟಿರುತ್ತವೆ, ಆಯಾಯ ಧರ್ಮಗಳಂತೆ ಆ ಯಾಯ ವರ್ಣಾಶ್ರಮ ಧರ್ಮದವರಾದ ಜನರು ನಡಿಯಬೇಕು, ಹಾಗೆ ನಡದರೆ ಸದ್ಗತಿಯನ್ನು ಪಡೆಯುವರು, ಹಾಗೆ ಮಾಡದೆ ಬ್ರಾಹ್ಮಣಧ ರ್ಮಗಳನ್ನು ಶೂದ್ರನು ನಡಿಸುವುದು ಶೂದ್ರನು ನಡಿಸಬೇಕಾದ ಧರ್ಮ ವನ್ನು ಬ್ರಾಹ್ಮಣನು ನಡಿಸುವದು, ಈ ರೀತಿಯಾಗಿ ಮಾಡುತ್ತಾ ಬಂ ದರೆ ಉಭಯತ್ರರೂ ಭ್ರಷ್ಟರಾಗಿ ಹೋಗುವರು ॥ ॥೩೨॥

ನಿತ್ಯಂ—ಪ್ರತಿದಿನದಲ್ಲಿಯೂ, ಷಟ್ಕರ್ಮಾಭಿರತಾಃ—ಯಜನಯಾಜನ ಅ ಧ್ಯಯನ ಅಧ್ಯಾಪನ ದಾನ ಪ್ರತಿಗ್ರಹಗಳೆಂಬ ಆರು ಕರ್ಮಗಳನ್ನು ಮಾ

ರತಾಸಿತ್ಯಂ ದೇವತಾತಿಥಿಪೂಜಕಾಃ । ಹುತಶೇಷಭುಜೋವಿ
ಪ್ರಾಃ ನಾವಸೀದಂತಿವೈಕಲೌ ।೩೩॥ ರಾಮಮಂತ್ರಪರಾಃ
ಕೃಷ್ಣಮಂತ್ರಾರ್ಥಗತಮಾನಸಾಃ।ನಾಮಮಂತ್ರಾರ್ಥತ

ಡುತ್ತಿರುವವರಾದ, ದೇವತಾತಿಥಿಪೂಜಕಾಃ-ದೇವತೆಗಳನ್ನು,ಭೋಜನಾ
ರ್ಥಿಗಳಾಗಿ ಬಂದ ಬ್ರಾಹ್ಮಣರನ್ನು ಪೂಜಿಸುವವರಾದ, ಹುತಶೇಷಭು
ಜಃ-ಅಗ್ನಿ ಮುಖದಲ್ಲಿ ಹೋಮಮಾಡಲ್ಪಟ್ಟ ಅನ್ನವನ್ನು ಭಕ್ಷಿಸುತ್ತಿ
ರುವವರಾದವಿಪ್ರಾಃ-ಬ್ರಾಹ್ಮಣರು,ಕಲೌ-ಕಲಿಯುಗದಲ್ಲಿ,ನಾವಸೀದಂ
ತಿ-ನರಕಲೋಕದಲ್ಲಿಶ್ರಮೆಗೆ ಗುರಿಯಾಗುವದಿಲ್ಲ. ॥ತಾ॥ ಬ್ರಾಹ್ಮಣರು
ತಮತಮಗೆ ಯೋಗ್ಯವಾದ ರೀತಿಯಿಂದ, ಯಜ್ಞಾದಿ ಸತ್ಕರ್ಮಗಳನ್ನು
ತಾವು ಮಾಡುವದು ಇತರರಿಗೆಮಾಡಿಸುವುದು,ತಾವು ವೇದಾಧ್ಯಯನವ
ನ್ನು ಮಾಡುವದು ಶಿಷ್ಯರಿಗ ಭೃತಕವಿಂದ ಅಧ್ಯಯನವನ್ನು ಮಾಡಿಸ
ದೆ, ವೇದಗಳನ್ನು ಈಶ್ವರಪ್ರೀತಿಯಾಗಿ ಹೇಳುವದು, ತಾವು ತಮ್ಮ
ಯೋಗ್ಯತಾನುಸಾರವಾಗಿ ಧನಾದಿಗಳನ್ನು ಸತ್ಪಾತ್ರದಲ್ಲಿ ಕೊಡುವ
ದು, ಇತರರಿಂದ ದುರ್ದಾನಗಳನ್ನು ಹಿಡಿಯದೆ ಯುಕ್ತವಾದ ಪತನಾ
ರ್ಹವಲ್ಲದ ಪ್ರತಿಗ್ರಹವನ್ನು ಮಾಡುವುದು, ವೈಶ್ವ ದೇವವನ್ನು ಅಗ್ನಿ
ಮುಖದಲ್ಲಿ ನೆರವೇರಿಸಿದ ಬಳಿಕ ದೇವನಿವೇದಿತವಾದ ಅನ್ನವನ್ನು ಅತಿ
ಥಿಗಳಿಗೆ ಅಭ್ಯಾಗತರಿಗೆ ಹಸ್ತೋದಕವನ್ನು ಹಾಕಿ ಭೋಜನಮಾಡುವ
ದು, ಈ ರೀತಿಯಾಗಿ ಮಾಡುವವರು ಕಲಿಯುಗದಲ್ಲಿ ಕಲಿಯುಗ ಪ್ರ
ಯುಕ್ತ ಶ್ರಮೆಯನ್ನು ಪರಲೋಕದಲ್ಲಿ ಹೊಂದುವದಿಲ್ಲ ॥ ॥೩೩॥

ರಾಮಚಂದ್ರನ, ಮಂತ್ರ-ತಾರಕಮಂತ್ರದಲ್ಲಿ, ಪರಾಃ-ಆಸಕ್ತರಾದ
ವರು, ಕೃಷ್ಣ-ಕೃಷ್ಣದೇವರ, ಮಂತ್ರಾರ್ಥ-ಮಂತ್ರಾಭಿಪ್ರಾಯ
ದಲ್ಲಿ, ಗತ-ತಗಲಿರುವ, ಮಾನಸಾಃ-ಚಿತ್ತವುಳ್ಳವರಾದವರು. ಕಲೌ-ಕ
ಲಿಯಲ್ಲಿ, ನಾಮಮಂತ್ರದ, ಅರ್ಥ-ಅಭಿಪ್ರಾಯದ, ತತ್ವಜ್ಞಾಃ-
ರಹಸ್ಯವನ್ನು ತಿಳಿದವರು, ಕಲೌ-ಕಲಿಯುಗದಲ್ಲಿ, ನಾವಸೀದಂತಿ-
ಬಾಧೆಪಡುವವರಾಗುವದಿಲ್ಲ. ॥ತಾ॥ ಮೂರುವರೆ ಕೋಟಿ ರಾಮನಾಮ
ವನ್ನಾಗಲಿ,ಒಂದು ಕೋಟಿ ರಾಮತಾರಕ ಮಂತ್ರವನ್ನಾಗಲಿ,ಜಪಮಾ
ಡಿದವರು,ಅದೇ ರೀತಿಯಿಂದ ಕೃಷ್ಣಮಂತ್ರವನ್ನು ಜಪಿಸುವವರು, ಆ

ತ್ವಜ್ಞಾನಾವಸೀದಂತಿವೈಕಲೌ ॥೩೪॥ ಅಶ್ವತ್ಥಸೇವನರ
ತಾಃಯೇಚಗೋವಿಂದವಾದಿನಃ ।ರಾಮನಾಮ್ನೋಲೇಖಕಾಶ್ಚ
ನಾವಸೀದಂತಿವೈಕಲೌ ॥ ೩೫ ॥ ಸಾಲಗ್ರಾಮಾರ್ಚನರ
ತಾಃತತ್ತೀರ್ಥಪರಿಸೇವಕಾಃ। ತುಲಸೀಪೂಜನರತಾಃನಾವ
ಸೀದಂತಿವೈಕಲೌ ॥ ೩೬ ॥

ಶ್ವತ್ಥವೃಕ್ಷವನ್ನು, ಅಷ್ಟಾಕ್ಷರೀ ವಿಧಾನದಿಂದಾಗಲಿ, ವಾಸುದೇವದ್ವಾದಶಾಕ್ಷರೀವಿಧಾನದಿಂದಾಗಲಿ, ಗಾಯತ್ರೀ ಶಿವ ಪಂಚಾಕ್ಷರಿಗಳಿಂದಾಗಲಿ, ಅಥವಾ ವಿಷ್ಣುಸಹಸ್ರನಾಮದಿಂದಾಗಲಿ, ಕೋಟಿಪ್ರದಕ್ಷಿಣವನ್ನು ಮಾಡಿದವರು,ಗೋವಿಂದಶಿವಶಬ್ದೋಚ್ಚಾರಪೂರ್ವಕವಾಗಿದ್ವೈಶ್ಯವಮಾನಪದಾರ್ಥಗಳನ್ನು ದೇವತ್ವೇನಚಿಂತಿಸುತ್ತಾ ಇರುವವರು. ಕಲಿಬಾಧೆಗೆ ಗುರಿಯಾಗುವದಿಲ್ಲ ॥ ॥೩೪॥

ಅಶ್ವತ್ಥ–ಅರಳೀಮರದ, ಸೇವನ–ಸೇವೆಯಲ್ಲಿ, ರತಾಃ–ಆಸಕ್ತರಾದವರು, ಗೋವಿಂದವಾದಿನಃ–ಗೋವಿಂದ ಶಬ್ದೋಚ್ಚಾರಣೆಯನ್ನು ಮಾಡುವವರು, ರಾಮನಾಮ್ನಃ–ರಾಮನಾಮವನ್ನು, ಲೇಖಕಾಶ್ಚ–ಬರೆಯುವವರು, ಯೇ–ಯಾರುಂಟೋ, ತೇ–ಅವರು, ಕಲೌ–ಕಲಿಯುಗದಲ್ಲಿ ನಾವಸೀದಂತಿ–ಕಲಿಬಾಧೆಗೆ ಗುರಿಯಾಗುವದಿಲ್ಲ. ॥ತಾ॥ ಬ್ರಂಹವಿಷ್ಣುಮಹೇಶ್ವರಾತ್ಮಕವಾದ ಅಶ್ವತ್ಥವೃಕ್ಷಕ್ಕೆ ಪ್ರದಕ್ಷಿಣ ನಮಸ್ಕಾರವನ್ನು ಮಾಡುವವರು, ಗೋವಿಂದಧ್ಯಾನ ಪುರಸ್ಸರವಾಗಿ ಗೋವಿಂದನಾಮೋಚ್ಚಾರಣೆಯನ್ನು ಮಾಡುವವರು, ರಾಮನಾಮಗಳನ್ನು ಬರೆಯುವವರು ಕಲಿಯುಗದಲ್ಲಿ ನರಕಭಾಧೆಗೆ ಗುರಿಯಾಗುವದಿಲ್ಲ ॥ ॥೩೫॥

ಸಾಲಗ್ರಾಮ–ಸಾಲಗ್ರಾಮ ಶಿಲಾಮೂರ್ತಿಯಲ್ಲಿ ಆವಾಹಿತನಾದ ವಿಷ್ಣುವನ್ನು, ಅರ್ಚನ–ಪೂಜಿಸುವದರಲ್ಲಿ, ರತಾಃ–ಆಸಕ್ತರಾದವರು, ತತ್ತೀರ್ಥ–ಆ ಸಾಲಗ್ರಾಮ ತೀರ್ಥವನ್ನ, ಪರಿಸೇವಕಾಃ–ಸೇವಿಸುತ್ತಿರುವವರು,ತುಲಸೀಪೂಜನರತಾಃ–ತುಲಸಿಯಿಂದ ಸಾಲಗ್ರಾಮ ಪೂಜೆಯಲ್ಲಿ ನಿರತರಾದವರು, ಕಲೌ–ಕಲಿಯುಗದಲ್ಲಿ, ನಾವಸೀದಂತಿ–ಕಲಿಬಾಧೆಗೆ ಗುರಿಯಾಗುವದಿಲ್ಲ. ॥ತಾ॥ ಸಾಲಗ್ರಾಮದಲ್ಲಿ ವಿಷ್ಣುಮೂರ್ತಿಯನ್ನು, ಆವಾಹಿಸಿ–ಧ್ಯಾನಿಸಿ, ಪೂಜಿಸುವವರು, ಕೋಟಿ ತುಲಸಿ

ದೇವ್ಯಾಃಸ್ತೋತ್ರಕದಂಬಂಚಗೀತಾಂರಾಮಾಯಣಂತಥಾ॥
ಗಾಯತ್ರೀಂಭಾರತಂಕೃಷ್ಣಚರಿತಂಯೇಪಠಂತಿಹಿ ॥ ೩೭ ॥
ಮಹಾದಾನರತಾಯೇತುಯೇತುಸೂತ್ರಾರ್ಥಚಿಂತಕಾಃ। ಗು

ಮುಂತಾದ ಅಖಂಡಾರ್ಚನೆಯನ್ನು ಮಾಡಿದವರು, ಸಾಲಗ್ರಾಮತೀರ್ಥವನ್ನು ತಪ್ಪದೇ ಸೇವಿಸುತ್ತಿರುವವರು. ಕಲಿಬಾಧೆಗೆ ಗುರಿಯಾಗುವದಿಲ್ಲ ॥ ॥೩೬॥

ದೇವ್ಯಾಃ-ಲಲಿತಾದೇವಿಯ. ಸ್ತೋತ್ರಕದಂಬಂಚ-ಸ್ತೋತ್ರಖಂಡವನ್ನು, ಗೀತಾಂ-ಬ್ರಹ್ಮಗೀತೆಯನ್ನು-ಶಿವರಾಮ ಗೀತೆಯನ್ನು, ಕೃಷ್ಣಗೀತೆಯನ್ನು, ತಥಾ ಹಾಗೆ, ರಾಮಾಯಣಂ-ದಿನಕ್ಕೆ ೭೦ ಸರ್ಗದ ಪ್ರಕಾರವಾಗಲಿ, ದಿನಕ್ಕೆ ಒಂದುಕಾಂಡಪ್ರಕಾರವಾಗಲಿ ರಾಮಾಯಣವನ್ನು, ಗಾಯತ್ರೀಂ-ಮೂರುಕಾಲದಲ್ಲಿಯೂ ಒಂದು ಸಹಸ್ರಪ್ರಕಾರವಾಗಿ ಮೂರುಸಾವಿರ ಗಾಯತ್ರಿಯನ್ನು ಭಾರತಂ-ಭಾರತವನ್ನು, ಕೃಷ್ಣಚರಿತಂ-ಭಾಗವತನ್ನು, ಯೇ-ಯಾರು, ಪಠಂತಿಹಿ-ಪಾರಾಯಣವನ್ನು ಮಾಡುತ್ತಾರೋ, ಅವರು ಕಲಿಬಾಧೆಗೆ ಗುರಿಯಾಗಲಾರರು, ॥ತಾ॥ ಲಲಿತಾದೇವಿಯಸ್ತೋತ್ರ ಖಂಡವನ್ನು, ಬ್ರಹ್ಮಗೀತೆಯನ್ನು ಶಿವರಾಮಗೀತೆಯನ್ನು, ಕೃಷ್ಣಗೀತೆಯನ್ನು, ದಿನಕ್ಕೆ ಒಂದುಸರ್ಗದಪ್ರಕಾರವಾಗಲಿ ಏಳುಸರ್ಗದ ವಿದದಿಂದಲಾಗಲಿ,೭೦ಸರ್ಗಗಳ ಪ್ರಕಾರದಿಂದಲಾಗಲಿ, ಒಂದು ಕಾಂಡ ಪ್ರಕಾರದಿಂದಲಾಗಲಿ, ರಾಮಾಯಣದ ಪಾರಾಯಣವನ್ನು, ಮೂರುಕಾಲಗಳಲ್ಲಿಯೂ, ಗಾಯತ್ರಿಯನ್ನು ಸಹಸ್ರಸಂಖ್ಯೆಯಾಗಿ ಜಪವನ್ನು ಭಾರತ ಪಾರಾಯಣವನ್ನು ಭಾಗವತದ ಶಮಸ್ಕಂಧ ಪಾರಾಯಣವನ್ನು. ಯಾರು ಮಾಡುತ್ತಾರೊ ಅವರು ಕಲಿಬಾಧೆಗೆ ಗುರಿಯಾಗುವದಿಲ್ಲ, ॥೩೭॥

ಯೇತು-ಯಾರಾದರೇನೋ, ಮಹಾದಾನ-ತುಲಾಭಾರ ಮುಂತಾದ ಮಹಾದಾನಗಳನ್ನು ಮಾಡುವದರಲ್ಲಿ, ರತಾಃ-ನಿರತರಾಗಿರುವರೋ, ಯೇತು-ಯಾರಾದರೇ,-ಸೂತ್ರಾರ್ಥ ಚಿಂತಕಾಃ-ಬ್ರಹ್ಮಸೂತ್ರಗಳ ತಾತ್ಪರ್ಯವನ್ನು ಮನನಮಾಡುತ್ತಿರುವರೋ, ಯೇ-ಯಾರು, ಗುರುಭಕ್ತಾಃ-ಸೂತ್ರಭಾಷ್ಯಕರ್ತರಾದ ಜಗದ್ಗುರುವಿನಲ್ಲಿ, ಭಕ್ತಿಯುಳ್ಳವರಾ

ರುಭಕ್ತಾಸ್ತುಯೇವಿಪ್ರಾಃನಾವಸೀದಂತಿತೇಕಲೌ ॥೩೮॥ ವೇ
ದೋಪನಿಷದಾಂಮಂತ್ರಾಃಯೇಷಾಂಪ್ರೀತಿಪ್ರದಾಯಕಾಃ।
ಅನಹಂಕಾರಿಣೋದಾಂತಾಃನಾವಸೀದಂತಿತೇಕಲೌ ॥ ೩೯ ॥
ನೃಸಿಹ್ಮತಾಪಿನೀಂಚಾಪಿ ಶ್ರೀರಾಮಸ್ಯಾಪಿತಾಪಿನೀಂ । ಪ
ಠಂತ್ಯನುದಿನಂಯೇವೈನಾವಸೀದಂತಿತೇಕಲೌ॥೪೦॥ದ್ರವ್ಯಯ

ಗಿರುವರೋ, ತೇ-ಅವರು, ಕಲೌ-ಕಲಿಯುಗದಲ್ಲಿ-ನಾವಸೀದಂತಿ-ಕಲಿಬಾಧೆಗೆ ಗುರಿಯಾಗಿ ಶ್ರಮೆಪಡುವವರಾಗುವದಿಲ್ಲ, ತುಲಾಪುರುಷದಾನ-ತಿಲಪರ್ವತದಾನ ಗಜದಾನ ಅಶ್ವದಾನ ಭೂಗದಾನ ಕನ್ಯಾದಾನ ಗೋದಾನ ಮುಂತಾದ ಮಹಾದಾನಗಳನ್ನು ಮಾಡುವವರು, ಭಾಷ್ಯಕರ್ತರಾದ ಜಗದ್ಗುರು ಪೀಠದಲ್ಲಿಭಕ್ತಿಯುಳ್ಳವರು, ಬ್ರಹ್ಮಸೂತ್ರಾರ್ಥವಿಚಾರಮಾಡುತ್ತಿರುವವರು ಕಲಿಬಾಧೆಗೆಗುರಿಯಾಗುವದಿಲ್ಲ॥ ॥೩೮॥

ವೇದ-ರುಗ್ಯಜುಸ್ಸಾಮಾಥರ್ವಣಗಳ, ಉಪನಿಷದಾಂ-ಉಪನಿಷತ್ತುಗಳ, ಮಂತ್ರಾಃ-ಮಂತ್ರಗಳು, ಯೇಷಾಂ-ಯಾರಿಗೆ, ಪ್ರೀತಿಪ್ರದಾಯಕಾಃ-ಹಿತವನ್ನು ಉಂಟುಮಾಡುವದಾಗಿರುತ್ತವೊ, ಅಂದರೆ-ವೇದಗಳಲ್ಲಿ ಉಪನಿಷತ್ತುಗಳಲ್ಲಿ ಯಾರಿಗೆ ಭಕ್ತಿವಿಶ್ವಾಸಗಳುಂಟಾಗಿರುತ್ತವೊ,ಅವರು, ಅನಹಂಕಾರಿಣಃ-ಗರ್ವವಿಲ್ಲದವರು, ದಾಂತಾಃ-ಅಂತರಿಂದ್ರಿಯನಿಗ್ರಹವುಳ್ಳವರು,(ನಾವಸೀದಂತಿವೈಕಲೌ) ಸ್ಪ, ॥೩೯॥

ನೃಸಿಹ್ಮತಾಪಿನೀಂ-ನೃಸಿಹ್ಮೋಪನಿಷತ್ತನ್ನು, ಶ್ರೀರಾಮಸ್ಯಾಪಿ-ರಾಮಚಂದ್ರನ, ತಾಪಿನೀಂ-ಉಪನಿಷತ್ತನ್ನು, ಯೆ-ಯಾರು, ಅನುದಿನಂ-ದಿನದಿನದಲ್ಲಿಯೂ, ಪಠಂತಿ-ಪಾರಾಯಣವನ್ನು ಮಾಡುವರೋ, ತೇ-ಅವರು, (ನಾವಸೀದಂತಿಕಲೌ॥ ಸ್ಪ ॥ ॥೪೦॥

ದ್ರವ್ಯಯಜ್ಞಾಃ-ಧನದಾನರೂಪವಾದ ದ್ರವ್ಯಜ್ಞಗಳು, ತಪೋಯಜ್ಞಾಃ-ಕೃಛ್ರಚಾಂದ್ರಾಯಣಾದ ಶನವ್ರತಾದಿ ರೂಪತಪೋಯಜ್ಞಗಳು, ಯೋಗಯಜ್ಞಾಃ-ರೇಚಕಪೂರಕ ಕುಂಭಕಾದಿ ಮಾರ್ಗದಿಂದ ಚಿತ್ತವನ್ನು ನಿಗ್ರಹಿಸಿ ಮಾಡುವಧ್ಯಾನ ಯಜ್ಞಗಳು, ತಥಾ-ಹಾಗೆ, ಅಪರೆ-ಇತರ ಸ್ವಾಧ್ಯಾಯ ಕರ್ಮಯಜ್ಞಾದಿಗಳು, ಕಲೌ-ಕಲಿಯುಗದಲ್ಲಿ,ಸರ್ವೆ-ಸಮಸ್ತಗಳಾದ ಇವುಗಳೆಲ್ಲವೂ, ಜಪಯಜ್ಞಸ್ಯ-ಮಂತ್ರಜಪರೂಪವಾ

ಜ್ಞಾನಸ್ತು ಪ್ರೋಯಜ್ಞಾ ಯೋಗ ಯಜ್ಞಾಸ್ತಥಾಪರೇ । ಕ
ಲೌತೇಜಪಯಜ್ಞಸ್ಯಕಲಾಂನಾರ್ಹಂತಿಷೋಡಶೀಂ॥೪೧॥
ತಥೈವ ಪೌರುಷಂ ಸೂಕ್ತಂಕಲಿಕಲ್ಮಷನಾಶಕಂ।ಅಧೀತ್ಯ
ಸರ್ವಶಾಸ್ತ್ರಾಣಿಸಾರಮುಧೃತ್ಯಯತ್ನತಃ । ಸರ್ವೋತ್ತ
ಮೋಹರಿಸ್ಸೇವ್ಯಃಕಲೌಪಾಪನಿವೃತ್ತಯೇ॥ ॥೪೦॥

ಇತಿಶ್ರೀ ಭವಿಷ್ಯೋತ್ತರ ಪುರಾಣೇ ಉತ್ತರಭಾಗೇ ವೆಂಕ
ಟೇಶಮಾಹಾತ್ಮ್ಯೇ ಕಲಿತಾರಕೋಪಾಯ ಕಥ
ನಂ ನಾಮತೃತೀಯೋಧ್ಯಾಯಃ ॥

---

ದೇಜಪಯಜ್ಞದ, ಷೋಡಶೀಂಕಲಾಂ–ಹದಿನಾರನೆಯ ಭಾಗದ ಕಳೆಯ
ನ್ನು, ನಾರ್ಹಂತಿ–ಸಮಾನವಾಗಿ ಪಡೆಯತಕ್ಕದ್ದಾಗುವದಿಲ್ಲ, ॥ತಾ॥ ದ್ರ
ವ್ಯದಿಂದಮಾಡುವ ಯಜ್ಞಗಳು ಕರ್ಮಯಜ್ಞಮುಂತಾದವುಗಳು ಯ
ಲ್ಲಾಜಪಯಜ್ಞದ ಹದಿನಾರನೇ ಭಾಗದಲ್ಲೊಂದು ಭಾಗಕ್ಕೆ ಸಮಾನ
ವಾಗುವದಿಲ್ಲ॥ ॥೪೧॥

ತಥೈವ–ಹಾಗೆ, ಪೌರುಷಂಸೂಕ್ತಂ–ಪುರುಷಸೂಕ್ತವು, ಕಲಿ–ಕಲಿ
ಯುಗದ, ಕಲ್ಮಷ–ಪಾಪವನ್ನು,ನಾಶನಂ–ನಾಶಮಾಡತಕ್ಕದ್ದು, ಸರ್ವ–
ಸಮಸ್ತಗಳಾದ, ಶಾಸ್ತ್ರಾಣಿ–ವೇದೋಪನಿಷತ್ಪುರಾಣ ಸ್ಮೃತ್ಯಾಗ
ಮತಂತ್ರರೂಪವಾದ ಶಾಸ್ತ್ರಗಳನ್ನು,ಅಧೀತ್ಯ–ಕಲಿತು, ಯತ್ನತಃ–
ಪ್ರಯತ್ನಪೂರ್ವಕದಿಂದ, ಸಾರಂ–ಮುಖ್ಯವಾದ ಅಭಿಪ್ರಾಯವನ್ನು,
ಉದ್ಧೃತ್ಯ–ಎತ್ತಿ, ಕಲೌ–ಕಲಿಯುಗದಲ್ಲಿ, ಪಾಪನಿವೃತ್ತಯೇ–ಪಾಪಪರಿ
ಹಾರಕ್ಕೋಸ್ಕರವಾಗಿ, ಸರ್ವ–ಸಮಸ್ತರಲ್ಲಿ, ಉತ್ತಮಃ–ಶ್ರೇಷ್ಠನಾ
ದ, ಹರಿಃ–ವಿಷ್ಣುವು, ಸೇವ್ಯಃ–ಆರಾಧನೀಯನು. ॥ತಾ॥ ಪುರುಷ
ಸೂಕ್ತವು ಕಲಿಯುಗದ ಪಾಪವನ್ನು ನಾಶಮಾಡುವಂಥಾದ್ದಾಗಿರುತ್ತೆ.
ಕಲಿಯುಗದಲ್ಲಿ ಸಮಸ್ತವೇದೋಪನಿಷತ್ಪುರಾಣ ಸ್ಮೃತಿತಂತ್ರಗಳ ಅಭಿ
ಪ್ರಾಯದ ಸಾರಾಂಶವನ್ನು ತಿಳಿದು, ಪುರುಷೋತ್ತಮನಾದ ವಿಷ್ಣು
ವು, ಪಾಪಪರಿಹಾರಕ್ಕಾಗಿ ಸೇವಿಸಲ್ಪಡತಕ್ಕವನಾಗಬೇಕು ॥ ॥೪೦॥

ಇಂತು ಭವಿಷ್ಯೋತ್ತರಪುರಾಣದೊಳು ವೆಂಕಟೇಶ
ಮಹಾತ್ಮ್ಯೆಯಲ್ಲಿ ಕಲಿತಾರಕೋಪಾಯ ಕಥನ
ವೆಂಬ ಮೂರನೇ ಅಧ್ಯಾಯವು.

---

ಶ್ರೀನಿವಾಸೋವಾಚ ॥ ಕಲಿವರ್ಜ್ಯಾನ್ಪ್ರವಕ್ಷ್ಯಾಮಿವೈಖಾ
ನಸಮುನೇಶೃಣು ॥ ದೇವರಾಚ್ಚ ಸುತೋತ್ಪತ್ತಿಃನಕಾರ್ಯಾ
ತುಕಲೌಯುಗೇ ॥೧॥ಮಧುಪರ್ಕೇಪಶುಂಹತ್ವಾತನ್ಮಾಂಸಾ
ದೇಶ್ಚ ಭಕ್ಷಣಂ।ಅಸವರ್ಣಾಸುಕನ್ಯಾಸುವಿವಾಹೋಬ್ರಾಹ್ಮ
ಣಸ್ಯಚ ॥೨॥ ನಕರ್ತವ್ಯಂಕಲೌಬ್ರಹ್ಮನ್ಶ್ರಾದ್ಧೇಮಾಂಸಾ

ಶ್ರೀನಿವಾಸೋವಾಚ-ಶ್ರೀನಿವಾಸಮೂರ್ತಿಯು ಹೇಳುತ್ತಲಿದ್ದಾನೆ ವೈಖಾನಸಮುನೇ--ವೈಖಾನಸರುಷಿಯೆ, ಕಲಿವರ್ಜ್ಯಾನ್-ಕಲಿಯುಗದಲ್ಲಿ ಮನುಜರು ಮಾಡಬಾರದ ಧರ್ಮಗಳನ್ನು, ಪ್ರವಕ್ಷ್ಯಾಮಿ-ಹೇಳುತ್ತೇನೆ, ಶೃಣು-ಕೇಳು,ಕಲೌಯುಗೇ-ಕಲಿಯುಗದಲ್ಲಿ,ದೇವರಾಚ್ಚ-ಗಂಡನಸಹೋದರನ ದೆಶೆಯಿಂದ,ಸುತೋತ್ಪತ್ತಿಃ-ಪುತ್ರೋತ್ಪತ್ತಿಯು,ನಕಾರ್ಯಾ-ಮಾಡತಕ್ಕದ್ದಲ್ಲ.॥ತಾ॥ವೈಖಾನಸಮುನಿಯೇ ಕಲಿಯುಗದಲ್ಲಿ ಮಾಡಕೂಡದ ಮುಖ್ಯ ಧರ್ಮಗಳನ್ನು ಹೇಳುತ್ತೇನೆ ಕೇಳು, ಹೆಂಗಸು ತನ್ನ ಪತಿಯು ಸತ್ತ ಬಳಿಕ ತನ್ನ ಗಂಡನ ಸಹೋದರನ ಸಂಪರ್ಕದಿಂದ ಮಕ್ಕಳನ್ನು ಪಡೆಯಕೂಡದು ॥ ॥೧॥

ಮಧುಪರ್ಕೇ--ವಿವಾಹವಾಗಬೇಕಾದ ವರನಿಗೆ ಮಧುಪರ್ಕವನ್ನು ಮಾಡಿಸಬೇಕಾದ ಸಮಯದಲ್ಲಿ, ಪಶುಂ-ಛಾಗವನ್ನು, ಹತ್ವಾ-ಕೊಂದು, ತನ್ಮಾಂಸಾದೇಃ-ಅದರ ಮಾಂಸ ಮುಂತಾದವುಗಳ, ಭಕ್ಷಣಂ-ತಿನ್ನುವಿಕೆಯು, ನಕಾರ್ಯಂ-ಮಾಡತಕ್ಕದ್ದಲ್ಲ, ಬ್ರಾಹ್ಮಣಸ್ಯಚ-ಬ್ರಾಹ್ಮಣನಿಗಾದರೂ, ಅಸವರ್ಣಾಸು-ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಯವರಾದ, ಕನ್ಯಾಸು--ಹುಡುಗಿಯರಲ್ಲಿ, ವಿವಾಹಃ-ಮದುವೆಯು, ನಕರ್ತವ್ಯಃ-ಮಾಡತಕ್ಕದ್ದಲ್ಲ. ॥ತಾ॥ ವಿವಾಹವಾಗಬೇಕಾದ ವರನಿಗೆ ಮಧುಪರ್ಕವಾಗುವಾಗ್ಯೆ ಪಶುವನ್ನು ಕೊಂದು, ಮಾಂಸಾದಿ ಭೋಜನವನ್ನು ಮಾಡಿಸಕೂಡದು, ಕ್ಷತ್ರಿಯ, ವೈಶ್ಯ, ಶೂದ್ರ ಕನ್ಯೆಯರನ್ನು. ಬ್ರಾಹ್ಮಣನು ವಿವಾಹ ಮಾಡಿಕೊಳ್ಳಕೂಡದು ॥ ॥೨॥

ಬ್ರಹ್ಮನ್-ವೈಖಾನಸಮುನಿಯೇ, ಶ್ರಾದ್ಧೇ-ಪಿತೃಕರ್ಮದಲ್ಲಿ, ಮಾಂಸಾದಿಕಂ-ಮಾಂಸವೇ ಮೊದಲಾದದ್ದನ್ನು ತಥಾ-ಹಾಗೆ, ಕಲೌ-ಕಲಿಯುಗದಲ್ಲಿ, ನಕರ್ತವ್ಯಂ-ಮಾಡತಕ್ಕದ್ದಲ್ಲ, ತಥಾ-ಹಾಗೆಯೇ, ಸಪ್ತಪದಾ

ದಿಕಂತಥಾ ॥ ದತ್ತಾನಕನ್ಯಾದಾತವ್ಯಾತಥಾ ಸಪ್ತಪದಾ
ತ್ಪರಂ ॥೩॥ ಸಮುದ್ರಯಾತುಃಸ್ವೀಕಾರಃಕಮಡಲುವಿದಾರ
ಣಂ । ಮಹಾಪ್ರಸ್ಥಾನಗಮನಂ–ಗೋಮೇಧಾಖ್ಯೋಮ
ಹಾಮಖಃ ॥೪॥ ಚಿರಕಾಲಬ್ರಹ್ಮಚರ್ಯಂನರಮೇಧೋಶ್ವಮೇಧ

ತ್ಪರಂ–ಸಪ್ತಪದೀಕರ್ಮವು ತೀರಿದ ಬಳಿಕ, ದತ್ತಾ–ವರನಿಗೆ ದಾನ ಮಾಡಿದ, ಕನ್ಯಾ–ಹುಡಿಗಿಯು, ನದಾತವ್ಯಾ–ಮತ್ತೊಬ್ಬನಿಗೆ ದಾನ ಮಾಡಲ್ಪಡಕೂಡದು.॥ ತಾ॥ ವೈಖಾನಸಮುನಿಯೇ ಕಲಿಯುಗದಲ್ಲಿ ಪಿತೃ ಶ್ರಾದ್ಧವನ್ನು ಮಾಂಸಾದಿಗಳಿಂದ ಮಾಡಕೂಡದು, ಕನ್ಯೆಯನ್ನು ಒಬ್ಬನಿಗೆ ಮದಿವೆ ಮಾಡಿಕೊಟ್ಟು ಸಪ್ತಪದೀ ಸಹ ತೀರಿದಬಳಿಕ ಮತ್ತೊಬ್ಬನಿಗೆ ಮದಿವೆಯನ್ನು ಮಾಡಕೂಡದು ॥ ॥೩॥

ಸಮುದ್ರಯಾತುಃ–ಸಮುದ್ರದಮೇಲೆ ಕೂತು ಅನ್ನ ಆಹಾರಾದಿಗಳನ್ನು ಹಡಗದಲ್ಲಿಯೇ ತಿನ್ನುತ್ತಾ, ಸಂಧ್ಯಾದಿ ನಿತ್ಯಕರ್ಮಭ್ರಷ್ಟನಾಗಿ ಸಂಚಾರಮಾಡಿ ಬಂದವನ, ಸ್ವೀಕಾರಃ–ಪರಿಗ್ರಹವು, ಅಂದರೆ ಕನ್ಯಾದಾನ ಪ್ರತಿಗ್ರಹ ಭೋಜನಾದಿಗಳ ಪರಿಗ್ರಹವು, ಕಂಮಡಲು ವಿದಾರಣಂ–ಸನ್ಯಾಸಾಶ್ರಮವು, ಮಹಾಪ್ರಸ್ಥಾನಗಮನಂ–ಮಹಾ ಪಥಪ್ರವೇಶವು, ಗೋಮೇಧಾಖ್ಯಃ–ಗೋಮೇಧವೆಂಬ ಹೆಸರುಳ್ಳ, ಮಹಾಮಖಃ–ಮಹಾ ಯಜ್ಞವು, ನಕರ್ತವ್ಯಃ–ಮಾಡತಕ್ಕದ್ದಲ್ಲವು. ॥ತಾ॥ ಹಡಗಿನಲ್ಲಿ ಕೂತು ಆಹಾರಾದಿಗಳನ್ನು ಅಲ್ಲಿಯೇ ಸೇವಿಸುತ್ತಾ ಸಂಧ್ಯಾದಿ ಕರ್ಮಗಳನ್ನು ಬಿಟ್ಟು, ಮೂರು ದಿನಗಳಿಗಿಂತ ಅಧಿಕವಾಗಿ ಸಮುದ್ರದಮೇಲೆಯೇ ಸಂಚಾರ ಮಾಡಿದವನು ಭೋಜನಾದಿ ಸವ್ಯವಹಾರಯೋಗ್ಯನಾಗುವದಿಲ್ಲ. ಗೋಮೇಧಯಾಗವು ಕಲಿಯುಗದಲ್ಲಿ ನಿಷಿದ್ಧವು, ಮಹಾ ಪಥಪ್ರವೇಶವನ್ನು ಮಾಡಕೂಡದು ॥ ॥೪॥

ಚಿರಕಾಲ–ಬಹು ದಿನಗಳವರಿಗೂ, ಬ್ರಹ್ಮಚರ್ಯಂ–ಬ್ರಹ್ಮಚರ್ಯಾಶ್ರಮವು. ನರಮೇಧಃ–ಮನುಷ್ಯನನ್ನೇ ಪಶುವನ್ನಾಗಿ ಮಾಡುವ ಯಜ್ಞವು, ಅಶ್ವಮೇಧಕಃ–ಅಶ್ವವನ್ನೇ ಪಶುವನ್ನಾಗಿ ಮಾಡುವ ಯಜ್ಞವು ವಿಧವಾಯಾಂ–ಗಂಡಸತ್ತ ಮುಂಡೆಯಲ್ಲಿ, ದೇವರೇಣ–ಮೈದುನಿಂದ, ಸುತೋದ್ಭವಃ–ಮಕ್ಕಳನ್ನು ಹುಟ್ಟಿಸುವಿಕೆಯು, ನಕರ್ತವ್ಯಃ–ಮಾಡತ

ಕಃ॥ ನಕರ್ತವ್ಯಃ ವೇವರೇಣವಿಧವಾಯಾಂಸುತೋದ್ಭವಃ॥೫॥
ಕ್ಷತಯೋನ್ಯಾಸ್ತು ಬಾಲಾಯಾಃ ವಿವಾಹಸ್ತುವರೇಣಚ ॥ ಆ

ಕ್ಕದಲ್ಲವು. ॥ತಾ॥ ಕಲಿಯುಗದಲ್ಲಿ ೧೨ ವರ್ಷಗಳಿಗಿಂತ ಹೆಚ್ಚಾಗಿ ಬ್ರಹ್ಮಚರ್ಯಾಶ್ರಮದಲ್ಲಿ ಇರಕೂಡದು, ಅಂದರೆ ಹನ್ನೆರಡು ವರ್ಷಗಳವರಿಗೂ ಕಲಿಯುಗದಲ್ಲಿ ಬ್ರಹ್ಮಚರ್ಯವನ್ನು ಮಾಡಿದಬಳಿಕ ಗೃಹಸ್ಥಾಶ್ರಮವನ್ನಾಗಲಿ, ವರ್ಣವಿಭಾಗವೂ, ವೇದಗಳ ಪ್ರಚಾರವಿರುವವರಿಗೂ, ಯತ್ಯಾಶ್ರಮವನ್ನು ಪರಿಗ್ರಹಿಸಬೇಕೇ ಹೊರ್ತು ದೇಹಪತನಾವಧಿ ಬ್ರಹ್ಮಚರ್ಯದಲ್ಲಿಯೇ ಇರಕೂಡದೆಂಬ ಭಾವವು, ಅಶ್ವಮೇಧ, ನರಮೇಧ ಯಜ್ಞಗಳನ್ನು ಮಾಡಕೂಡದು, ಮೈದುನನು ಅತ್ತಿಗೆಯ ಗಂಡನು ಸತ್ತಬಳಿಕ ಅತ್ತಿಗೆಯಲ್ಲಿ ಮಕ್ಕಳನ್ನು ಹುಟ್ಟಿಸಕೂಡದು॥ ॥೫॥

ಕ್ಷತಯೋನ್ಯಾಃ–ರುತುಮತಿಯಾದ, ಬಾಲಾಯಾಃ–ಹುಡಿಗಿಗೆ, ವರೇಣ–ವಿವಾಹವಾಗಬೇಕಾದ ವರನಿಂದ, ವಿವಾಹಃ–ಮದುವೆಯು. ನಕರ್ತವ್ಯಃ–ಮಾಡತಕ್ಕದ್ದಲ್ಲವು, ಆತತಾಯಿ–ಆತತಾಯಿ ಕೆಲಸಗಳನ್ನು ಮಾಡುವವರಾದ, ದ್ವಿಜಾನಾಂತು–ಬ್ರಾಹ್ಮಣರಿಗೆ, ಧರ್ಮಯುದ್ಧೇ–ಧರ್ಮದಿಂದ ಕೂಡಿದ ಯುದ್ಧದಲ್ಲಿ, ಹಿಂಸನಂ–ಕೊಲ್ಲತಕ್ಕದ್ದು, ನಕರ್ತವ್ಯಂ–ಮಾಡತಕ್ಕದ್ದಲ್ಲ. ॥ತಾ॥ ಮೈನೆರದ ಹುಡಿಗಿಗೆ ಮದಿವೆಯನ್ನು ಮಾಡಲೇಬಾರದು, ಅಂದರೆ ಮೈನೆರೆಯುವದಕ್ಕೆ ಮುಂಚೆಯೇ ಎಂಟನೇ ಒಂಭತ್ತನೇ, ಹತ್ತನೇ ವರ್ಷಗಳ ವಯಸ್ಸಿನ ಒಳಗಾಗಿ, ಕನ್ಯಾಗೌರೀ ರೋಹಿಣೀ ಕಾಲಗಳಲ್ಲಿ ವಿವಾಹವನ್ನು ಮಾಡಬೇಕು, ಹನ್ನೊಂದನೇ ವರ್ಷದಲ್ಲಿಯೇ ರಜಸ್ವಲಾ ಕಾಲವಾದ್ದರಿಂದ,ಆಗ ಮದಿವೆಯನ್ನು ಮಾಡಿದರೆ,ರೌರವನರಕಪ್ರಾಪ್ತಿಯಾಗುವದು, ಹೀಗಿರುವಲ್ಲಿ ಮೈನೆರದ ಹುಡಿಗಿಗೆ ವಿವಾಹಸಂಸ್ಕಾರವನ್ನು ಮಾಡದೇಇದ್ದರೆ, ಸದ್ವ್ಯವಹಾರಕ್ಕೆ ಯೋಗ್ಯಳಲ್ಲವಾದ್ದರಿಂದ ತ್ಯಜಿಸಬೇಕು, ಇದು ಬ್ರಾಹ್ಮಣ ವಿಷಯವು, ಬೆಂಕಿಯಿಂದಸುಡುವುದು,ವಿಷದಿಂದ ಕೊಲ್ಲುವುದು,ಕತ್ತಿಯಿಂದ ಮನುಷ್ಯರನ್ನು ಕಡಿಯುವುದು,ಪರರ ದ್ರವ್ಯವನ್ನು ಕದಿಯುವುದು,ಪರರ ಭೂಮಿಯನ್ನು ಅಪಹರಿಸುವುದು, ಪರರ ಹೆಂಡರನ್ನು ಯುಕ್ತಿಯಿಂದ ಅಪಹರಿಸಿ ಕೆಡಿಸುವದು, ಈ ಐದು ಕೆಲಸಗಳಲ್ಲಿ ಯಾವದಾದರೂ ಒಂದು ಕೆಲಸ

ತತಾಯಿದ್ವಿಜಾನಾಂತು ಧರ್ಮಯುದ್ಧೇ ಸಹಿಂಸನಂ ॥ ೬ ॥
ಸಮುದ್ರಯಾತುರ್ವಿಪ್ರಸ್ಯಶೋಧಿತಸ್ಯಾಪಿಸಂಗ್ರಹಃ।
ನಕರ್ತವ್ಯೋವಿಶೇಷೇಣಅಘಸಂಕೋಚನಂಕಲೌ॥೭॥ಸಂಸ

ವನ್ನು ಮಾಡಿದವನಾದಾಗ್ಯೂ, ಆತತಾಯಿಯೆನಿಸುವನು, ಅಂಥಾವ ನು ಆದಾಗ್ಯೂ, ಧರ್ಮಯುದ್ಧದಿಂದ ಕೊಲ್ಲುವದು ಕೂಡದು, ಅಂಥಾ ಕಾಟಕಾಯಿಯಾದ ಬ್ರಾಹ್ಮಣನನ್ನು, ಅಧರ್ಮದಿಂದಲಾಗಲಿ ಕೊಲ್ಲ ಬಹುದು ॥ ॥೬॥

ಸಮುದ್ರಯಾತುಃ-ಸಮುದ್ರಗಮನವನ್ನು ಮಾಡಿದ, ಶೋಧಿತ ಸ್ಯ-ಪ್ರಾಯಶ್ಚಿತ್ತಮಾಡಿಸಿಕೊಂಡ, ವಿಪ್ರಸ್ಯ-ಬ್ರಾಹ್ಮಣನಿಗೆ, ಸಂಗ್ರ ಹಃ-ಶಯನಾಸನ ಭೋಜನಗಳಿಂಡ ಪರಿಗ್ರಹಿಸೋಣವು, ಕಲೌ-ಕ ಲಿಯುಗದಲ್ಲಿ, ನಕರ್ತವ್ಯಃ-ಮಾಡತಕ್ಕದ್ದಲ್ಲವು, ವಿಶೇಷಣ-ಅತಿಶಯ ದಿಂದ, ಅಘ-ಸೂತಕಾದಿಗಳ, ಅಥವಾ ಪತಿತಾದಿ ಪಾಪಗಳ,ಸಂಕೋಚ ನಂ-ಕಮ್ಮಿಯಾಗಿ ಆಚರಿಸೋಣವು, ನಕರ್ತವ್ಯಂ-ಮಾಡತಕ್ಕದ್ದಲ್ಲ ವು. ॥ತಾ॥ ಬುದ್ಧಿಪೂರ್ವಕ ಹಡಗದಲ್ಲಿ ಕೂತು ಆಹಾರಾದಿಗಳ ನ್ನು ಸೇವಿಸಿ, ಸಂಧ್ಯಾದಿಕರ್ಮಗಳಿಲ್ಲವೆ ಮೂರು ದಿವಸಕ್ಕೆ ಅಧಿಕವಾಗಿ ಪ್ರಯಾಣಮಾಡಿ ಭ್ರಷ್ಟನಾದವನು, ಪುನಃ-ಪಶ್ಚಾತ್ತಾಪವುಂಟಾದ ವನಾಗಿ ಪ್ರಾಯಶ್ಚಿತ್ತಮಾಡಿಕೊಂಡಾಗ್ಯೂ, ಬ್ರಾಹ್ಮಣರ ಸಂಗಡ ಸ ಹ ಭೋಜನಾದಿ ಸವ್ಯವಹಾರಕ್ಕೆ ಯೋಗ್ಯನಾಗುವದಿಲ್ಲ. ವೇದ ಶಾ ಸ್ತ್ರಾಗ್ನಿಸಂಪನ್ನನಾದ ಬ್ರಾಹ್ಮಣನಾಗಿದ್ದಾಗ್ಯೂ, ಹತ್ತು ದಿನಗಳವ ರಿಗೂ ಸೂತಕವನ್ನು ಮಾಡಬೇಕೇ ಹೊರ್ತು ಒಂದು ದಿನದಲ್ಲಿ ಸೂತ ಕದಿಂದ ನಿವೃತ್ತನಾಗಕೂಡದು. ಜಾತಿಭ್ರಂಶಕರಗಳಾದ ಮಹಾ ಪಾ ಪಗಳನ್ನು ಪ್ರಮಾದವಿಲ್ಲದೆ ಬುದ್ಧಿಪೂರ್ವವಾಗಿ ಮಾಡಿದ್ದರೆ ಅಂಥಾ ವನಿಗೆ ಪ್ರಾಯಶ್ಚಿತ್ತಾದಿಗಳಿಂದ ಪಾಪನಿವೃತ್ತಿಯಾಯಿತೆಂದು, ಆ ಪಾ ಪವನ್ನು ಸಂಕೋಚಮಾಡಕೂಡದು ॥ ॥೭॥

ಸಂಸರ್ಗದೋಷಃ-ಭ್ರಷ್ಟನಾದವನು ಇತರರಿಗೆ ತಿಳಿಯದಂತೆ ಸ ಹ ಪಂಕ್ತಿಯಲ್ಲಿ ಶೇರಿದ್ದರಿಂದ ಉಂಟಾದ ಸಂಬಂಧದೋಷವು, ಸ್ತೇ ಯ-ಸುವರ್ಣವನ್ನು ಕದಿಯೋಣವು, ಅನ್ಯ-ಇತರಗಳಾದ, ಮಹಾಪಾ

ರ್ಗ ದೋಷಸ್ತೈಯಾನ್ಯ ಮಹಾಪಾತಕ ನಿಷ್ಕೃತಿಃ ।
ಸೌತ್ರಾಮಣ್ಯಾಮಪಿ ಸುರಾಗ್ರಹಣ ಸ್ಯಚಸಂಗ್ರ
ಹಃ ॥೪॥ ಶಸ್ತ್ರದೀಕ್ಷಾಪಿ ಸರ್ವೇಷಾಂ ದ್ವಿಜಾನಾಂ
ಪ್ರಾಣಿಹಿಂಸನಂ । ಪ್ರಾಯಶ್ಚಿತ್ತ ವಿಧಾನಂ ಚವಿಪ್ರಾ
ಣಾಂಮರಣಾಂತಿಕಂ ॥೫॥ ಸ್ತ್ರೀಣಾಮುಪನಯೋ ವಿ

ತಕ-ಬ್ರಹ್ಮಹತ್ಯಾದಿಪಾಪಗಳಿಗೆ, ನಿಷ್ಕೃತಿಃ—ಪ್ರಾಯಶ್ಚಿತ್ತವು,ಸೌತ್ರಾಮಣ್ಯಾಮಪಿ-ಯಜ್ಞದಲ್ಲಿಸೌತ್ರಾಮಣಿಸಮಯದಲ್ಲಿ,ಯಾದರೂ,ಸುರಾಗ್ರಹಣಸ್ಯ-ಸುರಾಪಾನದ,ಸಂಗ್ರಹಃ-ಅಂಗೀಕಾರವು,ನಕರ್ತವ್ಯಃ-ಮಾಡತಕ್ಕದ್ದಲ್ಲ.॥ತಾ॥ಪತಿತರಾದವರು ಭೋಜನಾದಿಕಾಲಗಳಲ್ಲಿತಿಳಿಯದೇ ಪಙ್ಕ್ತಿಯಲ್ಲಿ ಸೇರಿದ್ದರಿಂದ ಉಂಟಾದ ಸಂಬಂಧ ದೋಷವು, ಸ್ವರ್ಣಸ್ತೆಯಾದಿ ಮಹಾ ಪಾಪಗಳಿಗೆಪ್ರಾಯಶ್ಚಿತ್ತವು,ಸೌತ್ರಾಮಣಿ ಸಮಯದಲ್ಲಿ ಯಜ್ಞದಲ್ಲಿ ಸುರಾಪಾನವು,ಕಲಿಯುಗದಲ್ಲಿ ಮಾಡಕೂಡದು॥೪॥

ಸರ್ವೇಷಾಂ-ಸಮಸ್ತರಾದ, ದ್ವಿಜಾನಾಂ-ಬ್ರಾಹ್ಮಣರಿಗೆ, ಶಸ್ತ್ರದೀಕ್ಷಾ-ಆಯುಧದೀಕ್ಷಾಬದ್ಧನಾಗಿ ನಡಿಯೋಣವು,ಪ್ರಾಣಿಹಿಂಸನಂ-ಜೀವಿಗಳನ್ನು ಕೊಲ್ಲೋಣವು, ವಿಪ್ರಾಣಾಂ-ಬ್ರಾಹ್ಮಣರಿಗೆ, ಮರಣಾಂತಿಕಂ-ಸಾಯುವವರಿಗೂ, ಪ್ರಾಯಶ್ಚಿತ್ತವಿಧಾನಂಚ-ಪ್ರಾಯಶ್ಚಿತ್ತಮಾಡಿಕೊಳ್ಳುತ್ತಿರೋಣವು,ಕೂಡದು॥ತಾ॥ಬ್ರಹ್ಮಣನುಕಲಿಯುಗದಲ್ಲಿಶಸ್ತ್ರದೀಕ್ಷಾಬದ್ಧನಾಗಿ ಇರೋಣವು, ಪ್ರಾಣಿಗಳನ್ನು ಸಹ್ಮರಿಸೋಣವು, ಸಾಯುವವರಿಗೂ ಮಾಡುತ್ತಿರಬೇಕಾದ ಪ್ರಾಯಶ್ಚಿತ್ತವಿಧಿಯು, ಮಾಡತಕ್ಕದ್ದಲ್ಲವು॥ ॥೫॥

ಸ್ತ್ರೀಣಾಂ-ಹೆಂಗಸರಿಗೆ ಉಪನಯಃ—ಮುಂಜಿಯು,ಭಿಕ್ಷಾಚರಣಂ-ತಂದೆಯ ಮನೆಯಲ್ಲಿ ಬಿಕ್ಷಾನ್ನದಿಂದ ಜೀವಿಸುವಿಕೆಯು, ವೇದಸಂಗ್ರಹಃ-ವೇದಾಧ್ಯಯನವು, (ನಕರ್ತವ್ಯಃ-ಮಾಡಕೂಡದು ॥ ಸವರ್ಣ-ಸಮಾನಜಾತಿಯವನಿಂದ, ಅಭ್ಯಾಗತಾಂ-ಬಂದವಳಾದ, ದುಷ್ಟಾಂ-ಅವನಬಳಿಯಲ್ಲಿ ಸಂಗಮಾದಿಗಳಿಂದ ಭ್ರಷ್ಟಳಾದವಳನ್ನು, ಶೋಧನೇನ-(ರಜಸಾಶುಧ್ಯತೆನಾರೀನದೀವೇಗೇ ನಶುದ್ಧ್ಯತಿ) ಎಂಬ ಶಾಸ್ತ್ರನುಸಾರವಾಗಿ, ಸಂಸರ್ಗಃ-ಗ್ರಹಣವು, ನಕರ್ತವ್ಯಃ-ಮಾಡತಕ್ಕದ್ದಲ್ಲವು,

ಕ್ಷಾಚರಣಂ ವೇದಸಂಗ್ರಹಃ । ಸವರ್ಣಾಭ್ಯಾಗತಾಂದು
ಷ್ಟಾಂ ಸಂಸಂಗಃ ಶೋಧನೇನಚ ॥೧೦॥ ಬಲತ್ಕಾರಾದಿ
ದುಷ್ಟಸ್ತ್ರೀಸಂಗ್ರಹೋವಿಧಿಚೋದಿತಃ। ಯತೇಸ್ತುಸರ್ವ
ವರ್ಣೇಷುಭಿಕ್ಷಾಚರ್ಯಾವಿಧಿಸ್ತಥಾ ॥೧೧॥ ಬ್ರಾಹ್ಮಣಾದಿಷು
ಶೂದ್ರಸ್ಯಪಚನಾದಿಕ್ರಿಯಾನಹಿ ॥ ಭೃಗ್ವಗ್ನಿಮರಣಾದೀ

॥ತಾ॥ ಸ್ತ್ರೀರಿಗೆ ಉಪನಯನವೂ, ಭಿಕ್ಷಾಚರಣವೂ ವೇದಾಭ್ಯಾಸವೂ ಮಾಡತಕ್ಕದ್ದಲ್ಲ, ತನ್ನ ಸಮಾನಜಾತೀಯವನ ಮನೆಯಲ್ಲಿ ಇದ್ದು ಸಂಯೋಗವನ್ನು ಪಡೆದು ದುಷ್ಟಳಾದವಳನ್ನು ಪ್ರಾಯಶ್ಚಿತ್ತವಾದಿ ಹಾಗ್ಯೂ ಪರಿಗ್ರಹಿಸಕೂಡದು॥ ॥೧೦॥

ಬಲಾತ್ಕಾರ-ನಿರ್ಬಂಧದಿಂದ, ದುಷ್ಟ-ಸಂಗಮಿಸಿದ್ದರಿಂದ ದುಷ್ಟೆಳಾದ, ಸ್ತ್ರೀ-ಹೆಂಗಸಿನ, ಸಂಗ್ರಹಃ-ಪರಿಗ್ರಹವು, ವಿಧಿಚೋದಿತಃ-ಮನಃಪೂರ್ತಿಯಾಗಿ ಮಾಡಬೇಕೆಂಬ ಇಚ್ಛೆಯಿಂದ ಸಂಗಮಿಸಲಿಲ್ಲವಾಗಿ ಪರಿಗ್ರಹಿಸಬಹುದೆಂದು ಶಾಸ್ತ್ರವು ಇದ್ದಾಗ್ಯೂ, ಮಾಡತಕ್ಕದ್ದಲ್ಲವು, ಯತೇಸ್ತು-ಸನ್ಯಾಸಿಗೆ, ಸರ್ವವರ್ಣೇಷು-ಸಮಸ್ತವರ್ಣಗಳಲ್ಲಿಯೂ ಬಿಕ್ಷಾಚರ್ಯಾವಿಧಿಃ-ಭೋಜನಮಾಡುವ ಪದ್ಧತಿಯು,ತಥಾ-ಹಾಗೆಯೇ, ನಕರ್ತವ್ಯಃ-ಮಾಡತಕ್ಕದ್ದಲ್ಲವು, ॥ತಾ॥ ಬುದ್ಧಿಪೂರ್ವಕವಲ್ಲದೆ ಬಲಾತ್ಕಾರದಿಂದ ಹೆಂಗಸನ್ನು ಕೆಡಿಸಿದ್ದರಿಂದ, ಅಂಥವಳನ್ನೂ, ಪರಿಗ್ರಹಿಸಕೂಡದು, ಸನ್ಯಾಸದಲ್ಲಿ ಇರುವವನು ಸಮಸ್ತವರ್ಣಗಳಲ್ಲಿ ಭೋಜನವನ್ನು ಮಾಡೋಣವೂ ಕೂಡದು॥ ॥೧೧॥

ಬ್ರಾಹ್ಮಣಾದಿಷು-ಬ್ರಾಹ್ಮಣಾದಿವರ್ಣಗಳ ಮನೆಗಳಲ್ಲಿ, ಶೂದ್ರಸ್ಯ-ಶೂದ್ರನಿಂದ, ಪಚನಾದಿಕ್ರಿಯಾ-ಅಡಿಗೆಯನ್ನು ಮಾಡುವದು ನೀರು ತರುವದು ಮೊದಲಾದ ಕೆಲಸವು, ನಹಿ-ಶುದ್ಧವಾಗಿಕೂಡದು, ಭೃಗ್ವಗ್ನಿಮರಣಾದೀನಾಂ-ಬೆಟ್ಟದ ಜರಿಯಿಂದ ಬೀಳುವದರಿಂದ, ಅಗ್ನಿ-ಬೆಂಕಿಯಿಂದ, ಮರಣಾದೀನಾಂ-ಮೃತಿಮುಂತಾದ ಕೆಲಸಗಳಿಗೆ, ಪ್ರಾಯಶ್ಚಿತ್ತವಿಧಾನಕಂ-ಪ್ರಾಯಶ್ಚಿತ್ತವನ್ನು ಮಾಡುವಿಕೆಯು,(ನಕರ್ತವ್ಯಂ-ಮಾಡತಕ್ಕದ್ದಲ್ಲವು) ॥ತಾ॥ ಬ್ರಾಹ್ಮಣರಮನೆಯಲ್ಲಿ ಶೂದ್ರನು ಅಡಿಗೆಪರಿಚಾರಕವನ್ನು ಮಾಡುವಿಕೆಯು, ಬೆಟ್ಟದಿಂದ ಬಿದ್ದುಸತ್ತ

ನಾಂಪ್ರಾಯಶ್ಚಿತ್ತವಿಧಾನಕಂ ॥೧೨॥ ಪಿತೃಪುತ್ರವಿರೋ
ಧೇತುಸಾಕ್ಷಿಣಾಂದಂಡಕಲ್ಪನಂ।ಯತೇಃಗೃಹೇಸ್ಥಿತಿಶ್ಚಾಪಿವಾ
ಹನಾದಿಕಮೇವಚ ॥೧೩॥ ಅಗ್ನಿಹೋತ್ರಂಗಜಾಲಂಭಂಸನ್ಯಾ
ಸಂಪಲಪೈತೃಕಂ।ಅಸವರ್ಣಾಸುತಾನಾಂತುವಿಭಾಗಪರಿಕಲ್ಪ
ನಂ॥೧೪॥ ತಥಾಸವರ್ಣಾಪುತ್ರಾಣಾಂವಿಭಾಗವಿಷಯೋಪಿಚ॥

ಷ್ಟಕ್ಕೂ ಅಗ್ನಿಯಲ್ಲಿ ಬಿದ್ದು ಸತ್ತದ್ದಕ್ಕೂ ಪ್ರಾಯಶ್ಚಿತ್ತವನ್ನು ಮಾ
ಡೋಣವು, ಮಾಡತಕ್ಕದಲ್ಲವು ॥ ॥೧೨॥

ಪಿತೃಪುತ್ರವಿರೋಧೇತು–ತಂದೆಗೂಮಗನಿಗೂ, ಉಂಟಾದವೈರದಲ್ಲಿ, ಸಾಕ್ಷಿಣಾಂ–ಸಾಕ್ಷಿಯನ್ನು ಹೇಳುವದಕ್ಕೆ ಬಂದವರಿಗೆ ದಂಡಕಲ್ಪನಂ–ಶಿಕ್ಷೆಯನ್ನು ವಿಧಿಸುವಿಕೆಯೂ, ಯತೇಃ–ಸನ್ಯಾಸಿಯಾದವನಿಗೆ, ಗೃಹೇ–ತನ್ನ ಹೆಂಡತಿಮಕ್ಕಳು ಇರತಕ್ಕ ಮನೆಯಲ್ಲಿ, ಅಥವಾ–ಸಂಸಾರಿಗಳ, ಮನೆಯಲ್ಲಿ, ಸ್ಥಿತಿಶ್ಚಾಪಿ–ವಾಸವಾಗಿರುವಿಕೆಯೂ, ವಾಹನಾದಿಕಂ–ಕುದುರೆ ಪಾಲಕ್ಕಿ ಆಭರಣಮುಂತಾದದ್ದು, ನಕರ್ತವ್ಯಃ–ಮಾಡಲ್ಪಡಕೂಡದು ॥ತಾ॥ ತಂದೆಮಕ್ಕಳಿಗೆ ಬಂದವ್ಯವಹಾರದಲ್ಲಿ ಸಾಕ್ಷಿಗಳಾಗಿ ಬಂದವರಿಗೆ ಶಿಕ್ಷೆಯನ್ನು ಮಾಡಕೂಡದು, ಸನ್ಯಾಸಿಯಾದವನಿಗೆ, ಸಂಸಾರಮಾಡುವ ಮನೆಯಲ್ಲಿ ವಾಸವು, ವಾಹನಾಭರಣ ದ್ರವ್ಯಾದಿವಸ್ತುಗಳು, ಇರಕೂಡದು॥ ॥೧೩॥

ಅಗ್ನಿಹೋತ್ರಂ–ಛಾಗಾದಿಪಶುಯಜ್ಞವು, ಗಜಾಲಂಭಂ–ಗಜಮೇಧಯಾಗವು, ಸನ್ಯಾಸಂ–ಪರಮ ಹಂಸಾಶ್ರಮವು, ಪಲಪೈತೃಕಂ–ಪಶ್ವಾದಿಮಾಂಸದಿಂದ ಪೈತೃಶ್ರಾದ್ಧವು, ಅಸವರ್ಣಾ–ಕ್ಷತ್ರಿಯ ವೈಶ್ಯಶೂದ್ರಾದಿ ಸ್ತ್ರೀರಲ್ಲಿ ಬ್ರಾಹ್ಮಣನಿಗೆ ಹುಟ್ಟಿದ, ಸುತಾನಾಂ–ಮಕ್ಕಳಿಗೆ, ವಿಭಾಗಪರಿಕಲ್ಪನಂ–ತನ್ನ ಆಸ್ತಿಯನ್ನು ಭಾಗಮಾಡಿ ಕೊಡುವಿಕೆಯೂ, (ಕೂಡದು) ॥ತಾ॥ ಛಾಗಾದಿಪಶುಯಜ್ಞವು.ಗಜಮೇಧಯಾಗವು, ಸನ್ಯಾಸವು, ಮಾಂಸದಿಂದ ಪಿತೃಶ್ರಾದ್ಧವು, ಬ್ರಹ್ಮಕ್ಷತ್ರಿಯವೈಶ್ಯಶೂದ್ರರು ಅನ್ಯವರ್ಣಾಸ್ತ್ರೀಯಲ್ಲಿ ತನಿಗೆ ಹುಟ್ಟಿದವನಿಗೆ ತನ್ನ ಆಸ್ತಿಯನ್ನು ಭಾಗಮಾಡಿಕೊಡೋಣವು ಕೂಡದು॥ ॥೧೪॥

ತಥಾ–ಹಾಗೆ, ಸವರ್ಣಾಪುತ್ರಾಣಾಂ–ತನ್ನ ಸಮಾನವಾದ ವರ್ಣದ

ನಿಯೋಗಾತ್ಪರ ಭಾರ್ಯಾಸುಪುತ್ರ ಸಂತಾನಕಲ್ಪನಂ ॥ ೧೪ ॥
ದತ್ತೌರಸೇತರೇಷಾಂತು ಪುತ್ರತ್ವೇನಪರಿಗ್ರಹಃ। ಅಸಗೋ
ತ್ರಮೌಂಜಿಬಂಧಾತ್ಪರಂಪುತ್ರಸ್ಯಸಂಗ್ರಹಃ ॥ ೧೬ ॥ ನಕು
ರ್ಯಾಚ್ಚ ಸ್ವಗೋತ್ರೇಪಿವಿವಾಹಾನಂತರಂಕಲೌ ॥ ನಕುರ್ಯಾ

ಹೆಂಡತಿಯಲ್ಲಿ ಹುಟ್ಟಿದ ಗಂಡುಮಕ್ಕಳಿಗೆ, ವಿಭಾಗ ವಿಷಮಃ-ಹೆಚ್ಚುಕೆ ಮ್ಮಿಯಾಗಿ ಭಾಗವನ್ನು ಮಾಡಿಕೊಡೋಣವು, ನಿಯೋಗಾತ್-ಗಂಡ ನ ಅನುಮತಿಯಿಂದ, ಪರ-ಅನ್ಯರ, ಭಾರ್ಯಾಸು-ಹೆಂಡತಿಯರಲ್ಲಿ, ಪುತ್ರ ಸಂತಾನಕಲ್ಪನಂ—ಪುತ್ರೋತ್ಪತ್ತಿಯನ್ನು ಮಾಡುವಿಕೆಯು. ॥ತಾ॥ ತನ್ನ ಸ್ವಂತ ವರ್ಣದಲ್ಲಿ ಮದಿವೆಯಾದ ಹೆಂಡತಿಯಲ್ಲಿ ಹುಟ್ಟಿದ ಪುತ್ರ ರೊಳಗೆ ದೊಡ್ಡ ಮಗನಿಗೆ ಜ್ಯೇಷ್ಠಾಂಶ ಭಾಗವೆಂದು ಒಂದು ಭಾಗವ ನ್ನು ಹೆಚ್ಚಾಗಿಮಾಡಿ,ಇತರ ಪುತ್ರರಿಗೆ ಕಮ್ಮಿಯಾಗಿ ಹಂಚಿಕೊಡೋಣ ವು. ಪರಸ್ತ್ರೀಯಲ್ಲಿ ಆಕೆಯ ಗಂಡನ ಅನುಮತಿಯಿಂದಲಾಗಲಿ,ಆಕೆಯ ತಂದೆತಾಯಿಗಳು ಮುಂತಾದವರ ಅನುಮತಿಯಿಂದಲಾಗಲಿ, ಪುತ್ರೋ ತ್ಪತ್ತಿಯನ್ನು ಮಾಡೋಣವು ಕೂಡದು ॥ ॥೧೫॥

ದತ್ತ-ಸ್ವೀಕೃತಪುತ್ರನಿಗೆ, ಔರಸ-ತನ್ನ ಹೆಂಡತಿಯಲ್ಲಿ ತನಗೆ ಹು ಟ್ಟಿದವನಿಗೆ, ಇತರೇಷಾಂ-ಅನ್ಯರಾದ, ಅಂದರೆ ಕ್ರೀತಾದಿ ಪುತ್ರರಿಗೆ, ಪುತ್ರತ್ವೇನ—ಪುತ್ರಕೃತ್ಯಾರ್ಹತೆಯಿಂದ, ಪರಿಗ್ರಹಃ-ಅಂಗೀಕಾರವು, (ಕೂಡದು) ಅಸಗೋತ್ರೆ-ಭಿನ್ನ ಗೋತ್ರದಲ್ಲಿ, ಮೌಂಜಿಬಂಧಾತ್-ಉಪ ನಯವಾದ ಕಡೆಯಿಂದ, ಪರಂ-ಅನಂತರ, ಪುತ್ರಸ್ಯ-ಪುತ್ರನ, ಸಂಗ್ರ ಹಃ-ದತ್ತಸ್ವೀಕಾರವು,ನಕರ್ತವ್ಯಃ-ಮಾಡತಕ್ಕದ್ದಲ್ಲ. ॥ತಾ॥ ಔರಸ ಪುತ್ರ-ದತ್ತಪುತ್ರರು ವಿನಹಾ ಕ್ರೀತಾದಿ ಪುತ್ರರನ್ನು ಪುತ್ರರಂತೆ ಪರಿ ಗ್ರಹಿಸಕೂಡದು. ಮುಂಜಿಯಾದನಂತರ ಅನ್ಯಗೋತ್ರ ಹುಡುಗನ ನ್ನು ದತ್ತಪುತ್ರನನ್ನಾಗಿ ಪರಿಗ್ರಹಿಸಕೂಡದು॥ ॥೧೬॥

ವಿವಾಹಾನಂತರಂ-ಹುಡುಗನಿಗೆ ಮದಿವೆಯಾದನಂತರದಲ್ಲಿ, ಸ್ವಗೋ ತ್ರೆಪಿ-ತನ್ನ ಜ್ಞಾತಿಗಳ ವಂಶದಲ್ಲಿಯೂ, ಕಲೌ-ಕಲಿಯುಗದಲ್ಲಿ, ನಕು ರ್ಯಾತ್-ದತ್ತಪುತ್ರಸ್ವೀಕಾರವನ್ನು ಮಾಡಕೂಡದು, ಕಲೌ-ಕಲಿಯು ಗದಲ್ಲಿ, ಭಿನ್ನವರ್ಣೇಷು-ತನ್ನ ಜಾತಿಗೆ ಭಿನ್ನವಾದ ಜಾತಿಯಲ್ಲಿ, ಪುತ್ರ

ದ್ಭಿನ್ನವರ್ಣೇಷುಪುತ್ರಸಂಗ್ರಹಣಂಕಲೌ ॥೧೭॥ ಅಪುತ್ರಾ
ವಿಧವಾನಾರೀ ಸ್ವಗೋತ್ರೇಚಾನ್ಯ ಗೋತ್ರಕೇ । ನಸ್ವೀಕಾ
ರ್ಯೋನದಾತವ್ಯೋಮೌಂಜೀಬಂಧಾತ್ಪರಂಕಲೌ ॥೧೮॥ಹೋ
ಮಾದೀನಾಮ ಭಾವೇತುನದತ್ತೋ ದತ್ತತಾಂವ್ರಜೇತ್ ।
ರಜಸೋದರ್ಶನಾತ್ಪೂರ್ವಂ ಕನ್ಯಾದಾನನಿಷೇಧಕಂ । ಕ

ಸಂಗ್ರಹಣಂ---ದತ್ತಪುತ್ರಸ್ವೀಕಾರವನ್ನು, ನಕುರ್ಯಾತ್-ಮಾಡಬಾರದು. ॥ತಾ॥ ಸ್ವಗೋತ್ರಹುಡುಗನಾಗಿದ್ದಾಗ್ಯೂ, ಅವನಿಗೆ ಅವನ ತಂದೆತಾಯಿಗಳು ಮದುವೆಯನ್ನು ಮಾಡಿದ ತರುವಾಯ, ದತ್ತಪುತ್ರನನ್ನಾಗಿ ಸ್ವೀಕರಿಸಕೂಡದು. ತನ್ನ ಜಾತಿಗೆ ವ್ಯತಿರಿಕ್ತರಾದ ಜಾತಿಯ ಹುಡುಗನನ್ನು ದತ್ತಪುತ್ರನನ್ನಾಗಿ ಸ್ವೀಕರಿಸಕೂಡದು ॥ ॥೧೭॥

ಅಪುತ್ರಾ-ಸಂತಾನವಿಲ್ಲದವಳಾದ, ವಿಧವಾ-ಪತಿಹೀನಳಾದ, ನಾರೀ-ಹೆಂಗಸು ಕಲೌ-ಕಲಿಯುಗದಲ್ಲಿ, ಮೌಂಜಬಂಧಾತ್-ಉಪನಯನಕ್ಕಿಂತ, ಪರಂ-ತರುವಾಯ, ಸ್ವಗೋತ್ರೇಚ-ತನ್ನ ಗೋತ್ರದಲ್ಲಿಯೇ ಆಗಲಿ, ಅನ್ಯಗೋತ್ರಕೆ-ಭಿನ್ನಗೋತ್ರದಲ್ಲಿಯೇ ಆಗಲಿ, ನಸ್ವೀಕಾರ್ಯಃ-ದತ್ತಸ್ವೀಕಾರ ಮಾಡಕೂಡದು, ನದಾತವ್ಯಃ-ಇತರರಿಗೆ ದತ್ತಪುತ್ರನನ್ನಾಗಿ ಕೊಡಲೂ ಕೂಡದು. ॥ತಾ॥ ಸುತರಿಲ್ಲದ ಪತಿಹೀನಳಾದ ಹೆಂಗಸು ಕಲಿಯುಗದಲ್ಲಿ ಉಪನಯನವಾದ ಹುಡುಗನನ್ನು ಸ್ವಗೋತ್ರದಲ್ಲಾಗಲಿ, ಅನ್ಯಗೋತ್ರದಲ್ಲಾಗಲಿ, ದತ್ತುಮಾಡಿಕೊಳ್ಳಕೂಡದು ॥ ॥೧೮॥

ಹೋಮಾದೀನಾಂ-ದತ್ತಹೋಮಾದಿಗಳು,ಅಭಾವೇ-ಮಾಡದೇಹೋದಲ್ಲಿ, ದತ್ತಃ-ಸ್ವೀಕೃತನಾದವನು, ದತ್ತತಾಂ-ದತ್ತಪುತ್ರತ್ವವನ್ನು, ನವ್ರಜೇತ್-ಪಡೆಯಲಾರನು, ರಜಸಃ-ಹೊಲೆಯು, ದರ್ಶನಾತ್-ಉಂಟಾಗುವದಕ್ಕಿಂತ, ಅಂದರೆ ಮೈನೆರೆಯುವದಕ್ಕೆ ಮುಂಚೆ, ಕನ್ಯಾದಾನನಿಷೇಧಕಂ-ಕನ್ಯೆಯನ್ನು ಮದುವೆ ಮಾಡಕೂಡದೆಂಬುವದನ್ನು, ಕಲೌ-ಕಲಿಯುಗದಲ್ಲಿ, ನಕುರ್ವೀತ-ಮಾಡಕೂಡದು, ಮುನೇ-ವೈಖಾನಸಮುನಿಯೇ, ಇದಂ-ಈ ಮಾತು, ಮಚ್ಛಾಸನಂ-ನನ್ನ ಆಜ್ಞಾರೂಪವಾಗಿರುವದು. ॥ತಾ॥ ಸಭೆಯಲ್ಲಿ ಸದಸ್ಯರ ಮುಂದೆ ದತ್ತಹೋಮಪುತ್ರಸ್ವೀಕಾರ ಪೂರ್ವಕವಾಗಿ ತೆಗೆದುಕೊಂಡ ದತ್ತು ಸಿದ್ಧವಾಗುವದು,

ಕಲೌಯುಗೆ ಸಕೌರ್ವಿಶ್ರೀತವಂಛ್ಛಾನಸಮಿದಂಮುನೆ ॥೧೯॥
ಯಾವದ್ವರ್ಣವಿಭಾಗೋಸ್ತಿಯಾವದ್ವೇದಃಪ್ರವರ್ತತೆ । ಸ
ನ್ಯಾಸಂಚಾಗ್ನಿ ಹೋತ್ರಂ ಚತಾವ ತ್ಕುರ್ಯಾತ್ಕ ಲೌಯು
ಗೆ ॥೨೦॥ ದೇವಾಂಶ ಸಂಭಾನಾಂತುತೇಷಾಂ ತೇಜೋವಿಶೇಷ
ತಃ । ಆಚಾರೋಭಿದ್ಯತೆ ಬ್ರಹ್ಮನ್ಮನುಜಾನಾಂನತದ್ಭವೆ

ಹಾಗೆ ಹೋಮಾದಿಗಳನ್ನು ಮಾಡದೆ ಮಾಡಿಕೊಂಡದ್ದು ದತ್ತಸ್ವೀಕಾ
ರವಾಗುವದಿಲ್ಲವು. ಎಂಟು, ಒಂಭತ್ತು ವರ್ಷದೊಳಗಿರುವ ಹುಡಿಗಿ
ಯರಿಗೆ ಮದಿವೆ ಮಾಡಕೂಡದೆಂಬುವದನ್ನು ಕಲಿಯುಗದಲ್ಲಿ ಆಚರಿಸ
ಕೂಡದು. ವೈಖಾನಸಮುನಿಯೇ ! ಇದು ನನ್ನ ಆಜ್ಞಾರೂಪವಾಗಿ
ರುವದು ॥ ॥೧೯॥

ಕಲೌ-ಕಲಿಯುಗದಲ್ಲಿ, ಯಾವತ್-ಯದುವರಿಗೆ, ವರ್ಣವಿಭಾಗಃ-ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಜಾತಿಭೇದವು, ಅಸ್ತಿ-ಉಂಟಾಗಿರುವದೋ, ಯಾವತ್-ಯದುವರಿಗೆ, ವೇದಃ-ರುಗ್ಯಜುಸ್ಸಾಮಾದಿವೇದವು, ಪ್ರವರ್ತತೆ-ಪ್ರಚಾರದಲ್ಲಿರುವದೋ, ತಾವತ್-ಆ ಕಾಲದವರಿಗೆ,ಸನ್ಯಾಸಂಚ-ಯತ್ಯಾಶ್ರಮವನ್ನು,ಅಗ್ನಿಹೋತ್ರಂಚ-ಯಜ್ಞವನ್ನು, ಕುರ್ಯಾತ್-ಮಾಡಬಹುದು. ॥ತಾ॥ ಜಾತಿಭೇದಗಳು, ವೇದಗಳು ಯದುವರಿಗೆ ಪ್ರಚಾರವುಳ್ಳದ್ದಾಗಿರುತ್ತದೋ, ಕಲಿಯುಗದಲ್ಲಿ ಅದುವರಿಗೆ ಸನ್ಯಾಸವನ್ನು, ಯಜ್ಞಗಳನ್ನು ಮಾಡಬಹುದು, ವೇದಪ್ರಚಾರವೂ, ಜಾತಿಭೇದವೂ ತಪ್ಪಿದಬಳಿಕ ಕಲಿಯುಗದಲ್ಲಿ ಸನ್ಯಾಸವನ್ನು, ಯಜ್ಞಗಳನ್ನು ಮಾಡಕೂಡದು ॥ ॥೨೦॥

ಬ್ರಹ್ಮನ್-ವೈಖಾನಸಮುನಿಯೆ, ದೇವಾಂಶ-ಇಂದ್ರಾದಿ ದೇವತೆಗಳ, ಅಂಶೆಯಿಂದ, ಸಂಭವಾನಾಂ-ಜನಿಸಿದವರಾದ, ಮನುಜಾನಾಂ-ಮನುಷ್ಯರಿಗೆ, ತೇಷಾಂ-ಆದೇವಾಂಶಪುರುಷರ,ತೇಜೋವಿಶೇಷತಃ-ಮಹಿಮಾತಿಶಯದಿಂದ, ಆಚಾರಃ-ಪದ್ಧತಿಯು, ಭಿದ್ಯತೆ-ಭಿನ್ನವಾಗುವದು, ಮನುಜಾನಾಂ-ಮನುಷ್ಯರಿಗೆ, ತತ್-ಅದು, ನಭವೇತ್-ಆಗುವದಿಲ್ಲ. ॥ತಾ॥ ಇಂದ್ರಾದಿ ದೇವತೆಗಳ ಅಂಶೆಯಿಂದ ಹುಟ್ಟಿದ ಪಾಂಡವರಿಗೆ ಐದು ಮಂದಿಗೂ, ದ್ರೌಪದಿಯು ಹೆಂಡತಿಯಾದ ನಡತೆಯು, ವಿಷ

ತ್ ॥ ೨೧ ॥ ವೇದಶಾಸ್ತ್ರಾಗ್ನಿಭಿಶ್ಚಾಪಿಸಹಿತಸ್ಯದ್ವಿಜನ್ಮ
ನಃ । ಏಕಾಹೇನ ನಶುದ್ಧಿಸ್ಸ್ಯಾತ್ಕಲೌ ಬ್ರಹ್ಮರ್ಷಿಸತ್ತ
ಮ ॥ ೨೨ ॥ ಮದ್ಯಪಾನಂನಕುರ್ವೀತಕಲೌಬ್ರಾಹ್ಮಣಸ

ಶದಿಂದ ಹುಟ್ಟಿದ ಕೃಷ್ಣನು ರಾಧಾದಿ ಸ್ತ್ರೀರಸವಾಗಿರುವನ್ನು ಮಾ ಡಿದ ನಡತೆಯು, ವಸುಗಳ ಅಂಶದಿಂದ ಹುಟ್ಟಿದ ಭೀಷ್ಮನು ದೀರ್ಘ ಕಾಲ ಬ್ರಹ್ಮಚರ್ಯದಲ್ಲಿ ಇದ್ದ ಆಚಾರವು, ಅಗ್ನಿಗೆ ಸ್ವಧಾದೇವಿಯಲ್ಲಿ ಜನಿ ಸಿದವರಾದ ವಯುನಾಧಾರಿಣಿಗಳು ಮದಿವೆಯಿಲ್ಲದೆ ಊರ್ಧ್ವರೇತಸ್ಕರಾಗಿ ದ್ದ ಆಚಾರವು, ಋಷಿಮಾನಸಿಕ ಪುತ್ರಿಯಾದ ವೃದ್ಧಕನ್ಯೆಯು ಬ್ರಹ್ಮ ಚರ್ಯದಲ್ಲಿದ್ದುಕೊಂಡು ತಪಸ್ಸುಮಾಡುತ್ತಾ ಇದ್ದು, ಮುದಿಕಿಯಾದ ಬ ಳಿಕ ವಿವಾಹಸಂಸ್ಕಾರವಿಲ್ಲದ್ದರಿಂದ, ನಿನಗೆ ಪರಲೋಕಗಳು ಉಂಟಾ ಗುವದಿಲ್ಲವೆಂದು ನಾರದರು ಹೇಳಿದ್ದರಿಂದ, ಆಮೇಲೆ ಮದಿವೆಯಾದ ವೃ ದ್ಧತೆಯು, ಅತಿಥಿಯು ಮನೆಗೆ ಬಂದರೆ ಭೋಜನಾದಿ ಸತ್ಕಾರಗಳು ಮಾತ್ರವಲ್ಲದ ಭಾರ್ಯಾಸತ್ಕಾರರೂಪವಾದ ಆಚಾರವು ಕಲಿಯುಗದಲ್ಲಿ ತೇಜೋಹೀನರಾದ ಮನುಜರಿಗೆ ಕೂಡದೆಂಬ ಭಾವವು ॥ ॥೨೧॥

ವೇದ–ವೇದಗಳಿಂದಲೂ, ಶಾಸ್ತ್ರ–ಆರು ಶಾಸ್ತ್ರಗಳಿಂದಲೂ, ಅ ಗ್ನಿ–ಅಗ್ನಿಹೋತ್ರದಿಂದ. ಸಹಿತಸ್ಯ–ಕೂಡಿದವನಾದ, ದ್ವಿಜನ್ಮನಃ– ಬ್ರಾಹ್ಮಣನಿಗೂ, ಬ್ರಹ್ಮರ್ಷಿಸತ್ತಮ–ಋಷಿಶ್ರೇಷ್ಠನಾದ ವೈಖಾನಸ ಮುನಿಯೇ, ಏಕಾಹೇನ–ಒಂದು ದಿನದಿಂದಲೆ, ಶುದ್ಧಿಃ–ಸೂತಕಾದಿನಿ ವೃತ್ತಿಯು, ಕಲೌ––ಕಲಿಯುಗದಲ್ಲಿ, ನಸ್ಯಾತ್––ಉಂಟಾಗುವದಿಲ್ಲ. ॥ತಾ॥ ಋಗ್ಯಜುಸ್ಸಾಮಾಥರ್ವಣಾದಿ ವೇದಗಳನ್ನು, ಶಿಕ್ಷಾವ್ಯಾಕರಣ ಛಂದೋನಿರುಕ್ತ ಜೋತಿಷಕಲ್ಪಗಳನ್ನು ಅಭ್ಯಾಸಮಾಡಿ, ತಾನು ಯ ಜ್ಞಾದಿ ಕ್ರತುಗಳನ್ನು ಮಾಡಿದವನಾದ ಬ್ರಾಹ್ಮಣನಿಗೂ, ಒಂದೇ ದಿ ನದಲ್ಲಿ ಸೂತಕನಿವೃತ್ತಿಯು ಕಲಿಯುಗದಲ್ಲಿ ಆಗುವದಿಲ್ಲ ॥ ॥೨೨॥

ಬ್ರಾಹ್ಮಣಸತ್ತಮ—ಬ್ರಾಹ್ಮಣಶ್ರೇಷ್ಠನಾದ ವೈಖಾನಸಮುನಿ ಯೇ, ಕಲೌ—ಕಲಿಯುಗದಲ್ಲಿ, ಮದ್ಯಪಾನಂ-ಮತ್ತತೆಯನ್ನು ಉಂ ಟುಮಾಡುವದನ್ನು ಕುಡಿಯಬಾರದು, ಕಲೌಯುಗೆ—ಕಲಿಯುಗದಲ್ಲಿ, ಅಯೋನೌ—ಪಶ್ವಾದಿಯೋನಿಗಳಲ್ಲಿಯೂ, ಭೂಮಿಯಲ್ಲಿಯೂ, ಭಾ

ತ್ತಮ ॥ ಅಯೋನೌ ರೇತಸೋತ್ಸರ್ಗೋ ನಕರ್ತವ್ಯಃ ಕಲೌ
ಯುಗೇ ॥ ೨೩ ॥ ಯತೇಸ್ತು ದ್ರವ್ಯದಾನಂ ಚ ತಥಾ ತೇನ ಪರಿಗ್ರ
ಹಃ ॥ ನಕರ್ತವ್ಯಃ ಪಾಪಯುಗೇ ಧರ್ಮಮಾರ್ಗಾನುಗೈ
ರ್ಜನೈಃ॥ ಕಿಮನ್ಯದಿಚ್ಛಸಿ ಶ್ರೋತುಂ ತತ್ತೇ ವಕ್ಷ್ಯಾಮಿ ಸಾ

ರ್ಯ್ಯವ್ಯತಿರಿಕ್ತರಾದವರ ಯೋನಿಯಲ್ಲಿಯೂ, ರೇತಸಃ—ವೀರ್ಯದ, ಉತ್ಸರ್ಗಃ—ಬಿಡುವಿಕೆಯು, ನಕರ್ತವ್ಯಃ—ಮಾಡತಕ್ಕದ್ದಲ್ಲವು. ॥ತಾ॥ ವೈಖಾನಸಮುನಿಯೇ, ಗೌಡೀಮಾದ್ವೀ—ಪೈಷ್ಟೀ ಎಂಬದಾಗಿರುವ ಮಾದಕರಗಳಾಗಿರುವ, ಮಸ್ತು ಮುಂತಾದವುಗಳನ್ನು ಕಲಿಯುಗದಲ್ಲಿ ಕುಡಿಯಬಾರದು. ತನ್ನ ಹೆಂಡತಿಯಲ್ಲಿ ವಿನಹ ಇತರಪ್ರದೇಶಗಳಲ್ಲಿ ರೇತಸ್ಸೇಚನೆಯನ್ನು ಮಾಡಬಾರದು ॥ ॥೨೩॥

ಯತೇಃ—ಸನ್ಯಾಸಿಗೆ, ದ್ರವ್ಯದಾನಂ—ಹಣವನ್ನು ಕೊಡೋಣವು, ತಥಾ—ಹಾಗೆ, ತೇನ—ಯತಿಯಿಂದ, ಪರಿಗ್ರಹಃ—ಧನವನ್ನು ಪಡಿಯುವದು, ಪಾಪಯುಗೇ—ಕಲಿಯುಗದಲ್ಲಿ, ಧರ್ಮಮಾರ್ಗ—ಸನ್ಮಾರ್ಗವನ್ನು, ಅನುಗೈಃ—ಅನುಸರಿಸುವವರಾದ, ಜನೈಃ—ಮನುಜರಿಂದ, ನಕರ್ತವ್ಯಃ—ಮಾಡತಕ್ಕದ್ದಲ್ಲವು, ಅನ್ಯತ್—ಇತರವಾದದ್ದನ್ನು, ಕಿಮಿಚ್ಛಸಿ—ಏನು ಕೇಳಬೇಕೆಂದಿದ್ದೀ, ತತ್—ಅದನ್ನು, ತೇ—ನಿನಗೆ, ಸಾದರಂ—ವಿಶ್ವಾಸಪೂರ್ವಕವಾಗಿ, ವಕ್ಷ್ಯಾಮಿ—ಹೇಳುತ್ತಲಿದ್ದೇನೆ. ॥ತಾ॥ ಕಲಿಯುಗದಲ್ಲಿ ಸನ್ಯಾಸಿಯ ದ್ರವ್ಯವನ್ನು ಪಡಿಯಬಾರದು. ಸನ್ಯಾಸಿಗೆ ದ್ರವ್ಯವನ್ನು ಕೊಡಬಾರದು. ಧರ್ಮದಲ್ಲಿ ನಡಿಯುವವರು ಈ ರೀತಿಯಾಗಿ ನಡಿಯುವವರಾಗಬೇಕು. ಇನ್ನು ಏನು ಕೇಳಬೇಕೆಂದು ಇರುತ್ತಿಯೊ ಅದನ್ನು ಕೇಳು ಹೇಳುತ್ತೇನೆ ॥

ಯತಿದ್ರವ್ಯದಾನ ವಿಷಯವು,

ಶಾರದಾಚಂದ್ರಮೌಳೀಶ್ವರರ,ಮಹಾಲಕ್ಷ್ಮಿಯ ಅನುಗ್ರಹದಿಂದ ಉಂಟಾಗಿರುವ ಜಗದ್ಗುರು ಪೀಠದ ವಿಷಯದಲ್ಲಿ,ಭಗವದನುಗ್ರಹದಿಂದಪ್ರಾಪ್ತಪದವಿಯುಳ್ಳ ಇತರ ಮಠಾಧಿಪತಿಗಳಿಗೂ ಸಂಬಂಧಿಸಿದ್ದಲ್ಲವು. ಇನ್ನು

ಕೇಳಬೇಕಾದ ಅಂಶವನ್ನು ಕೇಳುದರಂ ॥ ॥೨೮॥

ಇತಿಶ್ರೀಭವಿಷ್ಯೋತ್ತರ ಪುರಾಣೆವೆಂಕಟೆಶಮಹಾತ್ಮ್ಯೆ
ಕಲಿವರ್ಜ್ಯಕಥನಂ ನಾಮ ಚತುರ್ಥೋಧ್ಯಾಯಃ

---

ವೈಖಾನಸಃ॥ಶ್ರೀನಿವಾಸದಯಾಸಾರಪಾಪಾನಾಂಬ್ರೂಹಿ
ವಿಸ್ತರಂ । ಯೆನಪಾಪೆನಮನುಜಿಃನರಕಂ ಯಾತಿದುಸ್ತ
ರಂ ॥ ೧ ॥ ಅಥವಾನಿಷ್ಕೃತಿಸ್ತೆಷಾಮಸ್ತಿವಾನಾಸ್ತಿವಾಕ
ಹೇಳುತ್ತೇನೆ ॥ ॥೨೮॥

ಇಂತು ಭವಿಷ್ಯೋತ್ತರಪುರಾಣದೊಳು ವೆಂಕಟೇಶ
ಮಹಾತ್ಮ್ಯೆಯಲ್ಲಿ ಕಲಿವರ್ಜ್ಯಕಥನ ವೆಂಬ
ನಾಲ್ಕನೇ ಅಧ್ಯಾಯವು.

---

ವೈಖಾನಸ ಋಷಿಯು ಹೇಳುತ್ತಲಿದ್ದಾನೆ ॥ ದಯಾಸಾರ–ಕೃಪಾಶಾ
ಲಿಯಾದ, ಶ್ರೀನಿವಾಸ–ಶ್ರೀನಿವಾಸ ಮೂರ್ತಿಯೇ, ಪಾಪಾನಾಂ–ಪಾ
ತಕಗಳ, ವಿಸ್ತರಂ–ವಿವರವನ್ನು, ಬ್ರೂಹಿ–ಹೇಳುವವನಾಗು ॥ ಮನು
ಜಃ–ಮನುಷ್ಯನು, ಯೆನ–ಯಾವ. ಪಾಪೆನ–ಪಾತಕದಿಂದ, ದುಸ್ತ
ರಂ–ಮೀರಲಳವಲ್ಲದ, ನರಕಂ–ನರಕಬಾಧೆಯನ್ನು, ಯಾತಿ–ಪಡೆಯು
ತ್ತಾನೆ, ॥ತಾ॥ ದಯಾಶಾಲಿಯಾದ ಶ್ರೀನಿವಾಸನೇ, ಪಾಪಗಳ ವಿವ
ರವನ್ನು ಹೇಳುವವನಾಗು, ಮನುಷ್ಯನು–ಯಾವಪಾಪಗಳನ್ನು ಮಾಡಿ
ದರೆಮೀರಲಶಕ್ಯವಾದ, ನರಕಬಾಧೆಯನ್ನು ಹೊಂದುತ್ತಾನೆ॥ ॥೧॥
ಕಲೌ–ಕಲಿಯುಗದಲ್ಲಿ, ತೇಷಾಂ–ಮಾಡಿದಪಾಪಗಳಿಗೆ, ನಿಷ್ಕೃತಿಃ
ಪ್ರಾಯಶ್ಚಿತ್ತವು, ಪಾಪಿಯ ಪಾಪಪರಿಹಾರಕವಾದ ಕ್ರಮವು, ಅಸ್ತಿ
ವಾ–ಉಂಟೆ, ಅಥವಾ–ಹಾಗಾಗದೆ, ನಾಸ್ತಿ–ಇಲ್ಲವೆ, ಮಹಾಪಾಪಪ್ರಭೇ
ದಾಂಶ್ಚ–ಬೇರೆ ಬೇರೆಯಾಗಿರುವ ಮಹಾಪಾಪಗಳನ್ನು, ನರಕಾನಪಿ–ನ
ರಕಗಳನ್ನು, ಮೆ–ನನಗೆ, ವದ–ಹೇಳು, ॥ತಾ॥ ಕಲಿಯುಗದಲ್ಲಿ ಮಾ
ಡಿದ ಪಾಪಪರಿಹಾರಕ್ಕೆ ಉಪಾಯ ಉಂಟೆ ಇಲ್ಲವೆ ? ಹೇಳು, ಮಹಾಪಾ

ಪ್ರ॥ ಮಹಾಪಾಪ ಪ್ರಭೇದಾನ್ಸ್ವ ನರಕಾನಪಿಮೆವದ ॥೨॥
ಶ್ರೀನಿವಾಸಃ ॥ ವೈಖಾನಸಮುನೆ ವಕ್ಷ್ಯೇಸಾವಧಾನಮನಾ
ಶ್ಶೃಣು ॥ ಪಾಪಾನಾಮಪಿ ಕೇಷಾಂಚಿತ್ ಪ್ರಾಯಶ್ಚಿತ್ತೆ
ನಪೂತತಾ ॥೩॥ ಮಹಾಪಾಪಯುತಾನಾಂತುಪ್ರಾಯಶ್ಚಿ
ತ್ತೇಪ್ಯಪೂತತಾ॥ ಕೃತೆಪಿಶುದ್ಧಿಃನೈವಸ್ಯಾತ್ಸದ್ಭಿಃಸಂಗೊ
ನವಿದ್ಯತೆ ॥೪॥ ಅಬುದ್ಧಿಪೂರ್ವಪಾಪೆತು ಆತ್ಮಶುದ್ಧಿರ್ಭ

ಪಗಳನ್ನು, ನರಕಗಳನ್ನೂ, ನನಿಗೆ ತಿಳಿಸುವವನಾಗು ॥ ॥೨॥

ಶ್ರೀನಿವಾಸಃ–ಶ್ರೀನಿವಾಸನು ಹೇಳುತ್ತಲಿದ್ದಾನೆ ॥ ವೈಖಾನಸಮು ನೇ–ವೈಖಾನಸರುಷಿಯೇ, ವಕ್ಷ್ಯೇ–ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ, ಸಾವಧಾನಮನಾಃ–ಸ್ಥಿರಚಿತ್ತನಾಗಿ, ಶೃಣು–ಕೇಳು, ! ಕೇಷಾಂಚಿತ್–ಕೆಲವುಗಳಾದ, ಪಾಪಾನಾಮಪಿ–ಪಾತಕಗಳಿಗೂ, ಪ್ರಾಯಶ್ಚಿತ್ತೆನ–ತಪ್ಪೊನಿಶ್ಚಯದಿಂದ, ಪೂತತಾ–ಪಾರಿಶುಧ್ಯವು, (ಉಂಟಾಗುತ್ತೆ, ॥ತಾ॥ ವೈಖಾನಸರುಷಿಯೇ ನೀನು ಕೇಳಿದ್ದಕ್ಕೆ ಉತ್ತರವನ್ನು ಹೇಳುತ್ತೇನೆ, ಸ್ಥಿರಮನಸ್ಸಿನಿಂದ ಕೇಳುವವನಾಗು, ಕೆಲವುಪಾಪಗಳಿಗೆ ಪ್ರಾಯಶ್ಚಿತ್ತಮಾಡಿದ್ದರಿಂದ ಪಾರಿಶುಧ್ಯವುಂಟಾಗುವದು॥ ॥೩॥

ಮಹಾಪಾಪಯುತಾನಾಂತು, ಬ್ರಹ್ಮಹತ್ಯಾದಿಮಹಾಪಾಪಗಳನ್ನು ಬುದ್ಧಿಪೂರ್ವಕವಾಗಿ ಮಾಡಿದವರಿಗೆ, ಪ್ರಾಯಶ್ಚಿತ್ತೆ–ಪ್ರಾಯಶ್ಚಿತ್ತವು, ಕೃತೆಪಿ–ಮಾಡಿದಾಗ್ಯೂ, ಅಪೂತತಾ–ಅಶುದ್ಧಿಯು, (ಉಂಟಾಗಿರುವುದು) ಶುದ್ಧಿಃ–ಪರಿಶುದ್ಧತೆಯು, ನೈವಸ್ಯಾತ್–ಆಗಲಾರದು, ಸದ್ಭಿಃ–ಸತ್ಪುರುಷರ, ಸಂಗಡ, ಸಂಗಃ–ಸವ್ಯವಹಾರವು, ನವಿದ್ಯತೆ–ಉಂಟಾಗಲಾರದು, ॥ತಾ॥ ಬ್ರಹ್ಮಹತ್ಯಾದಿಮಹಾಪಾಪಗಳನ್ನು ಬುದ್ಧಿಪೂರ್ವಕವಾಗಿ ಮಾಡಿದವರಿಗೆ, ಪ್ರಾಯಶ್ಚಿತ್ತವನ್ನು ಮಾಡಿದಾಗ್ಯೂ, ಆತ್ಮಶುದ್ಧಿಯು ಆಗುವದಿಲ್ಲ, ಅಶುದ್ಧನಾಗಿರುವದ್ದರಿಂದ, ಯೋಗ್ಯರಸವ್ಯವಹಾರ ಭೋಜನಾದಿಗಳಿಗೆ ಆತನು ಅರ್ಹನಾಗಲಾರನು॥ ॥೪॥

ಪಾಪೆ–ಪಾತಕವು. ಅಬುದ್ಧಿಪೂರ್ವೆತು–ಬುದ್ಧಿಪೂರ್ವಕವಾಗಿ ಮಾಡದೆ ಇದ್ದಲ್ಲಿ, ಆತ್ಮಶುದ್ಧಿಃ–ತನಿಗೆ ಪರಿಶುದ್ಧತೆಯು ಭವಿಷ್ಯತಿ–ಉಂಟಾಗುತ್ತೆ, ಆದ್ವಾದಶಾಬ್ದಂ–ಹನ್ನೆರಡು ವರ್ಷಗಳವರಿಗೂ. ವ್ರತತಃ–

ವಿಶ್ಯತಿ।ಆಪ್ವಾದಶಾಬ್ದಂವ್ರತತಃಸತ್ಸಂಗಸ್ತುಸ್ಯಜಾಯತೇ॥೫॥ ನಾಭುಕ್ತಂಕ್ಷೀಯತೆ ಕರ್ಮಕಲ್ಪಕೋಟಿಶತೈರಪಿ ॥ ಅವಶ್ಯ ಮನು ಭೋಕ್ತವ್ಯಂಕೃತಂಕರ್ಮಶುಭಾಶುಭಂ ॥೬॥ ಅತ್ಯು ತ್ಕಟೈಃಪುಣ್ಯಪಾಪೈರುಭಯಂಕ್ಷಿಯತೆಕ್ರಮಾತ್। ನಪಾ

ಮಹಾಪಾಪಪರಿಹಾರಕ ಪ್ರಾಯಶ್ಚಿತ್ತರೂಪವಾದ ವ್ರತವನ್ನು ಮಾಡು ಮವದ್ದರಿಂದ,ತಸ್ಯ-ಹನ್ನೆರಡು ವರ್ಷದವರಿಗೆಮಹಾಪಾಪವ್ರತನಿಯಮ ದಲ್ಲಿ ಇದ್ದವನಿಗೆ, ಸತ್ಸಂಗಃ-ಯೋಗ್ಯರಾದ ಜನರ ಸವ್ಯವಹಾರವು, ಜಾ ಯತೆ-ಉಂಟಾಗುವದು ॥ತಾ॥ ಬುದ್ಧಿಪೂರ್ವಕವಾಗಿ ಮಹಾಪಾಪ ವನ್ನು ಮಾಡಿದವನಿಗೆ ಪ್ರಾಯಶ್ಚಿತ್ತವನ್ನು ಸಭೆಯವರು ಮಾಡಿದರೆ ಆ ತ್ಮಶುದ್ಧಿ ಉಂಟಾಗುವದು, ಆಬಳಿಕ ಆತನು ಹನ್ನೆರಡು ವರ್ಷಗಳವ ರಿಗೂ ಮಹಾಪಾಪಾಪನೋದಕವ್ರತದಲ್ಲಿ ಇದ್ದದ್ದೇ ಆದರೆ ನೆಂಟರಿಷ್ಟ ರ ಸವ್ಯವಹಾರಕ್ಕೆ ಯೋಗ್ಯನಾಗುತ್ತಾನೆ ॥ ॥೫॥

ಕರ್ಮ-ಮಾಡಿದ-ಸುಕೃತ ಕರ್ಮವು, ಅಥವಾ ದುಷ್ಕೃತ ಕರ್ಮವು, ಕಲ್ಪಕೋಟಿಶತೈರಪಿ-ನೂರುಕೋಟಿ ಕಲ್ಪಗಳಷ್ಟು ಕಾಲವು ಕಳೆಯು ವದರಿಂದಲೂ, ಅಭುಕ್ತಂ-ಅನುಭವಿಸದೆ, ನಕ್ಷೀಯ್ಯತೆ-ನಾಶವಾಗುವದಿ ಲ್ಲ, ಕೃತಂ-ಮಾಡಲ್ಪಟ್ಟ ಶುಭಾಶುಭಂ-ಪುಣ್ಯಪಾಪರೂಪವಾದ, ಕ ರ್ಮ-ಕರ್ಮವು, ಅವಶ್ಯಂ-ಅಗತ್ಯವಾಗಿ ಅನುಭೋಕ್ತವ್ಯಂ-ಅನುಭವಿಸೇ ತಿರಬೇಕು, ॥ತಾ॥ ನೂರು ಕೋಟಿಕಲ್ಪಗಳು ಕಳೆದಾಗ್ಯೂ ಮಾಡಿ ಪುಣ್ಯಪಾಪರೂಪವಾದ ಕರ್ಮನಾಶವಾಗುವದಿಲ್ಲ, ಅಗತ್ಯವಾಗಿ ಅನುಭವಿ ಸೇತೀರಬೇಕು ॥ ॥೬॥

ಮುನೆ-ಮನನಶೀಲನಾದ ವೈಖಾನಸಮುನಿಯೇ ? ಅತ್ಯುತ್ಕಟೈಃ- ಅತ್ಯಧಿಕಗಳಾದ, ಪುಣ್ಯಪಾಪೈಃ-ಪುಣ್ಯಪಾಪಗಳಿಂದ, ಉಭಯಂ-ಪು ಣ್ಯಪಾಪಗಳೆರಡು, ಕ್ರಮಾತ್-ಪಾಂಜ್ತಾಗಿ, ಕ್ಷೀಯತೆ-ನಾಶವಾಗು ವದು, ತಸ್ಮಾತ್-ಆದ್ದರಿಂದ, ನರಕಾತ್-ನರಕಯಾತನೆಯ ದಶೆಯಿಂ ದ, ಭೀರುಣಾ-ಭಯಪಡುತ್ತಿರುವವನಿಂದ, ಪಾಪಂ-ಪಾಪವು, ನಾಚ ರೇತ್-ಮಾಡಲ್ಪಡಬಾರದು, ॥ತಾ॥ ವೈಖಾನಸಮುನಿಯೇ ಅತಿಶಯ ವಾದ ಪುಣ್ಯದಿಂದ ಪಾಪವು, ಅತಿಶಯವಾದ ಪಾಪದಿಂದ ಪುಣ್ಯವು

ಏವಮಾಚರೇತ್ತ ಸ್ಮಾನ್ನರಕಾದ್ಭೀರುರ್ಣಾಮುನೇ ॥ ೭ ॥ಪ್ರಾ
ಯಶ್ಚಿತ್ತ ಮಕುರ್ವಾಣಾಃ ಪಾಪೇಷು ನಿರತಾಜನಾಃ । ಅಪ
ಶ್ಚಾತ್ತಾಪಿನಃಕ್ರೂರಾನ್ ನರಕಾನ್ಯಾಂತಿಭೂರಿಶಃ ॥೮॥
ತಾಮಿಸ್ರಂ-ಲೋಹಶಂಕುಂಚಮಹಾನಿರಯಶಾಲ್ಮಲೀ ॥
ರೌರವಂ ಕುಂಭಲಂಪೂತಿ ಮೃತ್ತಿಕಂ ಕಾಲಸೂತ್ರಕಂ ।
ಸಂಘಾತಂಲೋಹಿತೋದಂಚಸವಿಷಂಸಂಪ್ರಪಾತನಂ । ಮ

ಧಿನಕ್ರಮವಾಗಿ ನಾಶವನ್ನು ಹೊಂದುವುದು, ಆದಕಾರಣದಿಂದ ನರಕ ಕ್ಕೆ ಭಯಪಡುವವನು ಪಾಪಗಳನ್ನು ಮಾಡಬಾರದು ॥ ॥೭॥

ಪಾಪೇಷು-ಪಾತಕ ಬರುವ ಕೆಲಸಗಳಲ್ಲಿ, ನಿರತಾಃ-ಆಸಕ್ತರಾದ, ಅ ಪಶ್ಚಾತ್ತಾಪಿನಃ-ತಾನು ಮಾಡುವ ಪಾಪಕೆಲಸಕ್ಕೆ ಯಾವಾಗಲೂ ಪ ಶ್ಚಾತ್ತಾಪವನ್ನೇ ಪಡದೇ ಇರುವವರಾದ, ಜನಾಃ-ಮನುಷ್ಯರು, ಪ್ರಾ ಯಶ್ಚಿತ್ತಂ-ಪಾಪಪರಿಹಾರಕವಾದ ನಿಯಮವನ್ನು, ಅಕುರ್ವಾಣಾಃ- ಮಾಡದೇ ಇರುವವರಾದರೆ, ಕ್ರೂರಾನ್-ಕಠಿನಗಳಾದ, ನರಕಾನ್-ನರ ಕಗಳನ್ನು, ಭೂರಿಶಃ-ವಿಶೇಷವಾಗಿ, ಯಾಂತಿ-ಹೊಂದುವರು. ॥ತಾ॥ ಪಾಪರತರಾಗಿಯೂ, ಪಶ್ಚಾತ್ತಾಪ ಪಡದೇ ಇರುವವರಾಗಿಯೂ ಇರು ವ ಜನರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇ ಹೋದಲ್ಲಿ, ಕ್ರೂರನ ರಕಗಳನ್ನು ಪಡೆಯುವವರಾಗುತ್ತಾರೆ ॥ ॥೮॥

೧. ತಾಮಿಸ್ರಂ-ಕತ್ತಲಾಗಿಯೇ ಇರುವ ಭಯಂಕರವಾದ ನರಕ ವು. ೨. ಲೋಹಶಂಕುಂ-ಉಕ್ಕಿನಿಂದ ಮಾಡಲ್ಪಟ್ಟ ಮೊಳೆಗಳುಳ್ಳ ನ ರಕವು. ೩. ಮಹಾನಿರಯ-ಅತಿಭಯಂಕರವಾಗಿರುವ ನರಕವು. ೪. ಶಾಲ್ಮಲೀ ಮುಳ್ಳುಗಳಿಂದ ಬಾಧೆಪಡಿಸುವ ನರಕವು. ೫. ರೌರವಂ- ರೋದನಧ್ವನಿಯುಂಟಾಗುವ ನರಕವು. ೬. ಕುಂಭಲಂ-ಶ್ವಾಸೆಯನ್ನು ಹಿಡಿಯುವಂತೆಮಾಡಿ ಬಾಧೆಯನ್ನುಂಟುಮಾಡುವ ನರಕವು. ೭. ಪೂತಿ ಮೃತ್ತಿಕಂ-ದುರ್ಗಂಧವಾದ ಮಣ್ಣುಳ್ಳ ನರಕವು ೮. ಕಾಲಸೂತ್ರಕಂ- ಉಕ್ಕಿನ ತಂತಿಗಳಿಂದ ಬಾಧೆಯನ್ನುಂಟುಮಾಡುವ ನರಕವು.೯.ಸಂಘಾ ತಂ-ಸಂಘದಿಂದ,ಹಿಂಸೆಯನ್ನುಂಟುಮಾಡುವ ನರಕವು. ೧೦. ಲೋಹಿ ತೋದಂಚ-ರಕ್ತಮಯವಾದ ಉದಕವುಂಟಾಗಿ ತಡೆಯಲಸಾಧ್ಯವಾದ

ಹಾನರಕಕಾಕೋಲಂಸಂಜೀವನಮಹಾಪಥಂ॥ ಅವೀಚಿಮಂ
ಧತಾಮಿಸ್ರಂ ಕುಂಭೀಪಾಕಂತಥೈವಚ । ಅಸಿಪತ್ರವನಂ
ಚೇತಿ ತಾಪನಂ ಚೈಕ ವಿಂಶತಿಃ ॥ ಪ್ರಯಾಂತಿಚೈವರ್ನಾನರ
ಕಾನ್ತತ್ತತ್ಕರ್ಮಾನುಸಾರತಃ॥೯॥ಮಹಾಪಾತಕಜೈರ್ದೋ
ಷೈಃಉಪಪಾತಕಜೈಸ್ತಥಾ । ಪ್ರಾಯಶ್ಚಿತ್ತವಿಹೀನಾಶ್ಚ

ನರಕವು. ೧೯. ಸವಿಷಂ-ವಿಷದಿಂದ ಕೂಡಿರುವ ನರಕವು. ೧೨ ಸಂ ಪ್ರಪಾತನಂ-ಬೀಳಿಸುವಂಥಾ ನರಕವು. ೧೩. ಮಹಾನರಕಂ-ವಿಧವಿಧವಾದ ಬಾಧೆಯನ್ನು ತಡೆಯಲಾರದೆ ಮೊರೆಯಿಡುವ ನರಕವು. ೧೪. ಕಾಕೋಲಂ-ಕಾಗೆಯಂತೆ ಕಪ್ಪಾದ ವಿಷಯುತನರಕವು. ೧೫. ಸಂಜೀವನಂ-ಪ್ರಜ್ಞೆಯಿಂದ ಕೂಡಿದವನಾದಾಗ ತರತರವಾದ ಬಾಧೆಯನ್ನು ಪಡಿಸುವ ನರಕವು. ೧೬. ಮಹಾಪಥಂ-ಅಂಧಕಾರವಾಗಿರುವ ಮಾರ್ಗದಲ್ಲಿ ಹೋಗುತ್ತಿರುವ ನರಕವು. ೧೭. ಅವೀಚಿಂ-ಸ್ವಲ್ಪವಾದರೂ ಸುಖವೇ ಇಲ್ಲವೇ ಇರುವ ನರಕವು. ೧೮. ಅಂಧತಾಮಿಸ್ರಂ-ಮಹಾ ತಮೋನರಕವು. ೧೯. ಕುಂಭೀಪಾಕಂ-ಪಾತ್ರೆಯಲ್ಲಿದ್ದು ಬೇಯುತ್ತಿರುವ ನರಕವು. ೨೦. ಅಸಿಪತ್ರವನಂ-ಮರದ ಎಲೆಗಳು ಬೀಳಲು ಕತ್ತಿಯ ಪೆಟ್ಟು ಬೀಳುವಂತೆ ಇರುವ ನರಕವು. ೨೧. ತಾಪನಂ-ಉರಿಯಿಂದುಂಟಾದ ತಾಪವುಳ್ಳ ನರಕವು,ಇತಿ-ಹೀಗೆಂದು,ಏಕವಿಂಶತಿಃ-ಇಪ್ಪತ್ತೊಂದು ನರಕಗಳಿರುವವು. ತತ್ತತ್ಕರ್ಮಾನುಸಾರತಃ-ಆಯಾಯ ಪಾಪಕರ್ಮಾನುಗುಣವಾಗಿ, ಇಮಾನ್-ಈ, ನರಕಾನ್-ನರಕಗಳನ್ನು ಕುರಿತು, ಪ್ರಯಾಂತಿ-ಸೇರುತ್ತಿರುವರು. ॥ತಾ॥ ಪ್ರಾಣಿಗಳು ಅವರವರು ಮಾಡಿರುವ ಕರ್ಮಾನುಸಾರವಾಗಿ ಇಪ್ಪತ್ತೊಂದು ಮಹಾ ನರಕಗಳನ್ನು ಹೊಂದುವರು ॥ ॥೯॥

ಮಹಾಪಾತಕಜೈಃ-ಮಹಾ ಪಾತಕಗಳಿಂದ ಉಂಟಾದ ತಥಾ-ಹಾಗೆ, ಉಪಪಾತಕಜೈಃ-ಉಪಪಾತಕಗಳಿಂದುಂಟಾದ, ದೋಷೈಃ-ಪಾಪಗಳಿಂದ, ಯುತಾಃ--ಕೂಡಿದವರಾದ, ನರಾಧಮಾಃ--ನೀಚಜನರು, ಪ್ರಾಯಶ್ಚಿತ್ತವಿಹೀನಾಶ್ಚ--ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇ ಹೋದವರಾದರೆ, ಯಾಂತಿ-ನರಕಗಳನ್ನು ಹೊಂದುವರು. ॥ತಾ॥ ಮ

ಯುತಾಯಾಂತಿನರಾಧಮಾಃ ||೧೦|| ಯಃಕಾಮತೋನರಃ
ಕುರ್ಯಾನ್ಮಹಾಪಾಪಂಕಥಂಚನ।ನತಸ್ಯನಿಷ್ಕೃತಿರ್ದೃಷ್ಟಾ
ಭೃಗ್ವಗ್ನಿಪತನಾದ್ಋತೆ ||೧೧|| ಮಹಾಪಾಪೆಕೃತೆಜ್ಞಾನಾತ್
ಪ್ರಾಯಶ್ಚಿತ್ತಂಸಮಾಚರೇತ್ । ಷಷ್ಟಿರ್ವರ್ಷಸಹಸ್ರಾಣಿ
ಅನ್ಯಥಾನರಕಂಪ್ರಜೇತ್ ||೧೨|| ಬ್ರಹ್ಮಹತ್ಯಾಸುರಾಪಾ

ಹಾ ಪಾತಕೋಪಪಾತಕಗಳನ್ನು ಮಾಡಿದ ಜನರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇ ಹೋದರೆ, ನರಕಗಳಿಗೆ ಗುರಿಯಾಗುವರು ||೧೦||

ಯಃ-ನರಃ-ಯಾವ ಮನುಷ್ಯರು, ಕಾಮತಃ-ಬುದ್ಧಿಪೂರ್ವಕವಿಂದ, ಕಥಚನ-ಹೇಗಾದರೂ, ಮಹಾಪಾಪಂ-ಮಹಾ ಪಾಪವನ್ನು, ಕುರ್ಯಾಚ್ಛೇತ್-ಮಾಡಿದವನಾದರೆ, ತಸ್ಯ-ಆತನಿಗೆ, ಭೃಗ್ವಗ್ನಿಪತನಾದೃತೆ-ಹೊಟ್ಟಿನ ರಾಶಿಗೆ ಬೆಂಕಿಯನ್ನು ಹಚ್ಚಿ, ಅದರಲ್ಲಿ ಬೀಳುವದನ್ನು ವಿನಹಾ, ನಿಷ್ಕೃತಿಃ-ಪ್ರಾಯಶ್ಚಿತ್ತವು, ನದೃಷ್ಟಾ-ನೋಡಲ್ಪಡಲಿಲ್ಲ. ||ತಾ|| ಬುದ್ಧಿಪೂರ್ವಕವಾಗಿ ಮಹಾ ಪಾಪವನ್ನು ಮಾಡಿದವನಿಗೆ ತುಷಾಗ್ನಿಯಲ್ಲಿ ಪ್ರಾಣತ್ಯಾಗ ಮಾಡುವದನ್ನು ವಿನಹಾ ಪ್ರಾಯಶ್ಚಿತ್ತವುಂಟಾಗುವದಿಲ್ಲ || ||೧೧||

ಮಹಾಪಾಪೆ-ಮಹಾ ಪಾತಕವು,ಅಜ್ಞಾನಾತ್-ಅಬುದ್ಧಿಯಿಂದ ಕೃತೆಸತಿ-ಮಾಡಲ್ಪಡಲು, ಪ್ರಾಯಶ್ಚಿತ್ತಂ-ಅಜ್ಞಾನದಿಂದುಂಟಾದ ಮಹಾ ಪಾಪಪರಿಹಾರಕ ಪ್ರಾಯಶ್ಚಿತ್ತವನ್ನು, ಸಮಾಚರೇತ್-ನಡಿಸಬೇಕು, ಅನ್ಯಥಾ-ಉಕ್ತಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದ ಪಕ್ಷದಲ್ಲಿ, ಷಷ್ಟಿವರ್ಷಸಹಸ್ರಾಣಿ-ಅರವತ್ತು ಸಹಸ್ರ ವರ್ಷಗಳು, ನರಕಂ-ನಿರಯವನ್ನು, ವ್ರಜೇತ್-ಪಡವಾನು. ||ತಾ|| ಅಜ್ಞಾನದಿಂದ ಮಾಡಿದ ಮಹಾ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದ ಪಕ್ಷದಲ್ಲಿ ಅರವತ್ತು ಸಾವಿರ ಸಂವತ್ಸರಗಳು ನರಕದಲ್ಲಿ ಬೀಳುವನು || ||೧೨||

ಮಹಾ ಪಾಪಗಳು.

ಬ್ರಹ್ಮಹತ್ಯಾ-ಬ್ರಾಹ್ಮಣನನ್ನು ಕೊಲ್ಲುವಿಕೆ, ಸುರಾಪಾನಂ-ಹೆಂಡವನ್ನು ಕುಡಿಯುವಿಕೆ, ಸ್ತೇಯಂ-ಭಂಗಾರವನ್ನು ಕದಿಯುವಿಕೆ, ಗು

ನಂಸ್ತೇಯಂಗುರ್ವಂಗನಾಗಮಃ । ಗೋಹತ್ಯಾಚಾಪಿಪಂಚೈ
ತೇಮಹಾಪಾತಕಸಂಜ್ಞಕಾಃ ॥ ೧೩ ॥ ಕ್ಷತ್ರಿಯಸ್ಯಚವೈ
ಶ್ಯಸ್ಯಯಾಗಸ್ಥಸ್ಯವಧಸ್ತಥಾ । ರಜಸ್ವಲಾಯಾಗರ್ಭಿಣ್ಯಾ
ಪ್ರಪನ್ನಾತ್ರಿಜಯೋಸ್ತಥಾ ॥ ಬ್ರಹ್ಮಹತ್ಯಾಸಮಾಃಪ್ರೋ
ಕ್ತಾಃನಕರ್ತವ್ಯಾಮನೀಷಿಣಾ ॥೧೪॥ ಕೂಟಸಾಕ್ಷ್ಯಂಸು

ರ್ವಂಗನಾಗಮಃ_ಗುರುವಿನ ಹೆಂಡತಿಯು ಸಂಗಮವನ್ನು ಮಾಡುವುದು, ಗೋಹತ್ಯಾ_ಹಸುಗಳನ್ನು ಕೊಲ್ಲುವದು, ಏತೆ-ಇವು, ಪಂಚಾಪಿ_ಐದೂ, ಮಹಾಪಾತಕಸಂಜ್ಞಕಾಃ_ಮಹಾ ಪಾತಕಗಳೆಂಬ ಹೆಸರುಳ್ಳವುಗಳು. ॥ತಾ॥ ಬ್ರಾಹ್ಮಣನನ್ನು ಕೊಲ್ಲೋಣವು, ಹೆಂಡವನ್ನು ಕುಡಿಯೋಣವು, ಸುವರ್ಣ ಬ್ರಾಹ್ಮಣನಭಂಗಾರವನ್ನು ಕದಿಯೋಣವು, ಗುರುಭಾರ್ಯಾಸಂಗವು, ಗೋಹತ್ಯೆಯು ಇವು ಐದು ಮಹಾ ಪಾಪಗಳು॥೧೩॥

ಯಾಗಸ್ಥಸ್ಯ_ಯಜ್ಞಮಾಡುತ್ತಾ ನಿಯಮಸ್ಥನಾದ, ಕ್ಷತ್ರಿಯಸ್ಯ-ಕ್ಷತ್ರಿಯ ಕುಲದವನ, ವೈಶ್ಯಸ್ಯ_ವೈಶ್ಯಕುಲದವನ, ತಥಾ-ಹಾಗೆ, ರಜಸ್ವಲಾಯಾಃ_ಹೊರಗಾದವಳ, ಗರ್ಭಿಣ್ಯಾಃ__ಬಸುರಿಯಾಗಿರುವವಳ, ತಥಾ_ಹಾಗೆ, ಪ್ರಪನ್ನಾತ್ರಿಜಯೋಃ_ಶರಣಾಗತರಾದವರ, ಅತ್ರಿಗೋತ್ರದಲ್ಲಿ ಹುಟ್ಟಿದವಳ, ವಧಃ_ಸಹ್ಮಾರವು, ಬ್ರಹ್ಮತ್ಯಾಸಮಃ_ಬ್ರಾಹ್ಮಣಸಹ್ಮಾರಕ್ಕೆ ಸಮಾನವಾದ ಪಾತಕವು, ಮನೀಷಿಣಾ_ಬುದ್ಧಿಶಾಲಿಯಾದವನಿಂದ ನಕರ್ತವ್ಯಃ_ಬ್ರಹ್ಮಹತ್ಯಾಸಮಗಳಾದ ಪಾತಕಗಳು, ಮಾಡಲ್ಪಡಕೂಡದು ॥ ॥೧೪॥

ಕೂಟಸಾಕ್ಷ್ಯಂ_ಬಹುಮಂದಿ ಒಟ್ಟಾಗಿ ಕೂಡಿ ಕಲ್ಪಿಸಿ ಮಾತಾಡಿಕೊಂಡು ಸಾಕ್ಷಿಯನ್ನು ಹೇಳೋಣವು, ಸುಹೃದ್ವಧಃ_ಮಿತ್ರನನ್ನು ಕೊಲ್ಲುವದು, ಇಮೌ-ಇವೆರಡು ಪಾಪಗಳು, ಸುರಾಪಾನ_ಹೆಂಡವನ್ನು ಕುಡಿದ ಪಾತಕಕ್ಕೆ, ಸಮೌ_ಸಮಾನಗಳು, ಬ್ರಹ್ಮ-ಬ್ರಾಹ್ಮಣನ, ಭೂಹರಣಂ-ಭೂಮಿಯನ್ನು ಅಪಹರಿಸುವಿಕೆಯು, ಸ್ವರ್ಣಸ್ತೇಯ_ಭಂಗಾರವನ್ನು. ಸ್ತೇಯಕದ್ದಪಾತಕಕ್ಕೆ, ಸಮಂ-ಸರಿಯಾದದ್ದು, ಎಂಬದಾಗಿ, ಸ್ಮೃತಂ-ಪ್ರಸಿದ್ಧವಾಗಿರುವದು. ॥ತಾ॥ ಬಹುಮಂದಿ ಸೇರಿ ಕಲ್ಪಿಸಿ

ಕ್ಷ್ಯಂಗಃ ಸುರಾಪಾನಸಮಾನಿಮೌ ॥ ಬ್ರಹ್ಮಭೂಹರಣಂ ಚಾಪಿಸ್ವರ್ಣಸ್ತೇಯಸಮಂಸ್ಮೃತಂ ॥೧೫॥ ಪಿತೃವ್ಯಮಾತಾಮಹಯೋಃ ಶ್ವಶುರಸ್ಯನೃಪಸ್ಯಚ । ಮಾತುಲಸ್ಯಸತೀಸಂಗಃಗುರುಪತ್ನೀಸಮಾಗಮಃ ॥ ೧೬ ॥ ಪಿತೃಮಾತೃಸ್ವಸ್ರೂಣಾಂ ಚಶ್ರೋತ್ರಿಯಸ್ಯ ಚರುತ್ವಿಜಾಂ । ಉಪಾಧ್ಯಾಯಸ್ಯಮಿತ್ರಸ್ಯಪತ್ನ್ಯಾಸಂಗಃ ಸ್ವಸುಸ್ತಥಾ ॥ ಸಖ್ಯಾಃಸಗೋತ್ರಜಾಯಾಶ್ಚರಜೋಯುಕ್ತವರಸ್ತ್ರಿಯಾಃ ॥ ಸಿಕ್ಷಿ

ಒಗ್ಗಟ್ಟಾಗಿ ಸಾಕ್ಷಿಯನ್ನು ಹೇಳೋಣವು, ಮಿತ್ರನನ್ನು ಕೊಲ್ಲೋಣವು, ಈವೆರಡು ಹೆಂಡವನ್ನು ಕುಡಿದದ್ದಕ್ಕೆ ಸಮಾನವಾಗಿರುವದು, ಬ್ರಾಹ್ಮಣನಭೂಮಿಯನ್ನು ಅಪಹರಿಸುವಿಕೆಯು ಭಂಗಾರವನ್ನು ಕದ್ದ ಪಾಪಕ್ಕೆ ಸಮವಾಗುವದು ॥ ॥೧೫॥

ಪಿತೃವ್ಯಮಾತಾಮಹಯೋಃ–ಚಿಕ್ಕಪ್ಪನ, ತಾಯಿಯ ತಂದೆಯ, ಶ್ವಶುರಸ್ಯ–ತನಿಗೆ ಹೆಣ್ಣುಕೊಟ್ಟ ಮಾವನ, ನೃಪಸ್ಯ–ಧೊರೆಯ, ಮಾತುಲಸ್ಯ–ಸೋದರಮಾವನ, ಸತೀಸಂಗಃ–ಹೆಂಡತಿಯಲ್ಲಿ ರತಿಯನ್ನು ಮಾಡೋಣವು, ಗುರುಪತ್ನೀಸಮಾಗಮಃ–ಗುರುವಿನ ಹೆಂಡತಿಯಲ್ಲಿ ಸಂಗ ಮಾಡಿದ ಪಾತಕವು, ಆಗುವದು. ॥ತಾ॥ ಚಿಕ್ಕಪ್ಪನ ತಾಯಿಯ ತಂದೆಯ, ಮಾವನ, ಧೊರೆಯ, ಸೋದರಮಾವನ, ಹೆಂಡತಿಯಲ್ಲಿ ರತಿಯನ್ನು ಮಾಡಿದರೆ ಗುರುಪತ್ನೀ ಗಮನಮಾಡಿದ ಪಾತಕಸಮಾನವು॥೧೬॥

ಪಿತೃ–ಮಾತೃಸ್ವಸ್ರೂಣಾಂಚ, ತಂದೆತಾಯಿಗಳಿಗೆ ಅಕ್ಕತಂಗಿಯರಾದವರ, ಶ್ರೋತ್ರಿಯಸ್ಯಚ–ವೇದಶಾಸ್ತ್ರಸಂಪನ್ನನಾಗಿ ಆಹಿತಾಗ್ನಿಯಾಗ್ನಿಯೂತಪಸ್ವಿಯಾಗಿಯೂ ಇರುವ ಯೋಗ್ಯಬ್ರಾಹ್ಮಣನ, ರುತ್ವಿಜಾಂ–ರುತ್ವಿಕ್ಕುಗಳ, ಉಪಾಧ್ಯಾಯಸ್ಯ–ವೇದವನ್ನು ಹೇಳುತ್ತಿರುವವನ, ಮಿತ್ರಸ್ಯ–ಗೆಳೆಯನ, ಪತ್ನ್ಯಾ–ಹೆಂಡತಿಯಸಂಗಡ, ಸಂಗಃ–ಸಂಯೋಗವು, ತಥಾ–ಹಾಗೆ, ಸ್ವಸುಃ–ತನ್ನ–ಸಹೋದರಿಗೆ ಸಖ್ಯಾಃ–ಸಖಿಯಾದವಳ, ಸಗೋತ್ರಜಾಯಾಃ–ತನ್ನ ಗೋತ್ರಕ್ಕೆ ಸಮಾನ ಗೋತ್ರದಲ್ಲಿಹುಟ್ಟಿದವಳ, ರಜೋಯುಕ್ತ–ಮುಟ್ಟಾಗಿರುವವಳ, ವರ–ತನ್ನ ವರ್ಣಕ್ಕಿಂತಲೂ ತನ್ನ ವಯಸ್ಸಿಗಿಂತಲೂ ಅಧಿಕವರ್ಣವಯಸ್ಸುಗಳುಳ್ಳವಳಾದ್ದ

ವ್ರಾತ್ಯಾಯಾಶ್ಚ ಕುಮಾರ್ಯಾಶ್ಚ ಪ್ರಪನ್ನಾಯಾಶ್ಚ ಸಂಗಮಃ ॥
ಅನುಪಾತಕಸಂಜ್ಞಾಃ ಸ್ಯಾನ್ಮಹಾಪಾತಕಸನ್ನಿಭಃ ॥೧೨॥
ಅಯಾಜ್ಯಯಾಜನಂ ಪಾರದಾರ್ಯಂ ಸ್ವಸ್ಯೈವ ವಿಕ್ರಯಂ ।
ಮಾತಾಪಿತೃ ಗುರುತ್ಯಾಗಃ ಸ್ವಾಧ್ಯಾಯಾಗ್ನ್ಯೋಃ ಸುತಸ್ಯ
ಚ॥ ಪರಿವಿತ್ತಿತಾನುಜೇನ ಪರಿವೇದನಮೇವ ಚ। ತಯೋಃ ಕನ್ಯಾಪ್ರ
ದಾನಂ ಚ ಯಾಜನಂ ಚ ತಯೋಃ ಕ್ರಮಾತ್। ತಟಾಕಾರಾಮ

ಸ್ತ್ರಿಯಃ-ಹೆಂಗಸಿನ, ಸಿಕ್ಷಿಪ್ತ್ರಾಯಾಃ-ಕೆಲವು ಕಾಲಕಾರಣಾಂತರದಿಂ ದಕಾಪಾಡಲುಇಟ್ಟಿರುವ ಹೆಂಗಸಿನ, ಕುಮಾರ್ಯಾಶ್ಚ-ರುತುವಾಗದೇ ಇ ರುವವಳ, ಅಥವಾ ವಿವಾಹವಿಲ್ಲದೇ ರುತುವಾಗದೆಲೂ, ರುತುವಾಗಿಯೂ, ಇರುವ ಕ್ಷತ್ರಿಯಾದಿ ಹುಡಗಿಯರ, ಪ್ರಪನ್ನಾಯಾಶ್ಚ-ಶರಣಾಗತಳಾ ಗಿರುವವಳ, ಸಂಗಮಃ-ಸಂಯೋಗವು, ಮಹಾಪಾತಕ ಸನ್ನಿಭಃ-ಬ್ರ ಹ್ಮಹತ್ಯಾದಿ ಮಹಾಪಾತಕಗಳಿಗೆ ಸಮಾನವಾದ, ಅನುಪಾತಕಸಂ ಜ್ಞಾಃ-ಉಪಪಾತಕಗಳೆಂಬಹೆಸರುಳ್ಳದ್ದು ಸ್ಯಾತ್-ಉಂಟಾಗುವದು॥೧೨॥

ಅಯಾಜ್ಯಯಾಜನಂ-ವೇದೋಕ್ತ ಕರ್ಮಾನಧಿಕಾರಿಗಳಿಗೆವೇದೋಕ್ತ ಕರ್ಮಗಳನ್ನು ಮಾಡಿಸೋಣವು, ಅಥವಾ-ಮಹಾಪಾತಕಿಗಳಿಗೆ ಪತಿತ ರಾದವರಿಗೆ ಪ್ರಾಯಶ್ಚಿತ್ತವನ್ನು ಮಾಡದೇ ಇದ್ದಕಾಲದಲ್ಲಿ,ವೇದೋಕ್ತ ಕರ್ಮಗಳನ್ನು ಮಾಡಿಸುವಿಕೆ, ಪಾರದಾರ್ಯಂ-ಅನ್ಯರ-ಹೆಂಡತಿಯರಲ್ಲಿ ಸಂ ಯೋಗಮಾಡುವಿಕೆ, ಸ್ವಸ್ಯೈವ-ತನ್ನನ್ನೆ, ವಿಕ್ರಯಂ-ಮಾರಿಕೊಳ್ಳು ವಿಕೆ, ಮಾತಾಪಿತೃಗುರುತ್ಯಾಗಃ-ತಾಯಿತಂದೆ ಆಚಾರ್ಯರನ್ನು ಧಿಕ್ಕರಿ ಸಿಪರಿತ್ಯಜಿಸುವಿಕೆ, ಸ್ವಾಧ್ಯಾಯಾಗ್ನ್ಯೋಃ-ವೇದಾಧ್ಯಯನ ಅಗ್ನಿಸೇ ವೆಗಳ, ಸುತಸ್ಯ-ಮಗನ, (ತ್ಯಾಗಃ-ಪರಿತ್ಯಾಗವು) ಅನುಜೇನ-ತಮ್ಮ ನಿಂದ, ಪರಿವಿತ್ತಿತಾ-ಪರಿವಿತ್ತಿಯೆನಿಸಿಕೊಳ್ಳುವಿಕೆ, ಪರಿವೇದನಂ-ಪರಿ ವೇದನವು, ಅಂದರೆಅಣ್ಣನಿಗೆ ಮದಿವೆಯಿಲ್ಲದೆ ಇದ್ದಾಗ ಆತನ ಅನುಜ್ಞೆ ಯಿಲ್ಲದೆ ತಮ್ಮನು ಮದಿವೆಯಾದರೆ ತಮ್ಮನುಪರಿವೇತ್ತನೆಂತಲೂ,ಅಣ್ಣ ನು-ಪರಿವಿತ್ತಿಯೆಂತಲೂ, ಆಗುವದು, ತಯೋಃ-ಪರಿವಿತ್ತಿ ಪರಿವೇತ್ತೃ ಗಳಿಗೆ, ಕನ್ಯಾಪ್ರದಾನಂಚ-ಹೆಣ್ಣನ್ನು ಕೊಡೋಣವು, ತಯೋಃ-ಅವ ರಿಗೆ, ಕ್ರಮಾತ್-ಸರಿಯಾಗಿ ಯಾಜನಂ-ಕರ್ಮಗಳನ್ನು ಮಾಡಿಸುವಿಕೆ,

ಪ್ರಾಣಾಂ-ಸಂತಾನಸ್ಯಚವಿಕ್ರಯಃ|ಬಂಧುತ್ಯಾಗೋವ್ರಾ
ತ್ಯತಾಚಭೃತಕಾಧ್ಯಾಪನಂತಥಾ॥ ಭೃತಕಾಧ್ಯಯನಂಚಾ
ಪಿ ಅಪಣ್ಯಾನಾಂಚವಿಕ್ರಯಃ ॥ ಅಶುಷ್ಕಾಣಾಂಚವೃಕ್ಷಾ
ಣಾಂಶುಷ್ಕಾರ್ಥಂಛೇದನಂತಥಾ ॥ ನಿಂದಿತಾನ್ನಾದನಂಚಾ
ಪಿಮದ್ಯಪಸ್ತ್ರೀನಿಷೇವಣಂ । ಅನಾಹಿತಾಗ್ನಿತಾಸ್ತೇಯಂ
ಋಣಾನಾಮನಪಕ್ರಿಯಾ । ಹಿಂಸೌಷಧೀನಾಂ ಹಿಸದಾ
ಸ್ತ್ರೀಂಪರ್ಯಾಜೀವನಂತಥಾ॥ಏತಾನ್ಯನ್ಯಾನಿಕರ್ಮಾಣಿಮಹಾ
ಪಾಪಸಮಾನಿತು ॥ ೧೪ ॥ ಪ್ರಾಯಶ್ಚಿತ್ತಮಕುರ್ವಾಣಾಃ

ತಟಾಕಾರಾಮದಾರಾಣಾಂ-ಕೆರೆ ತೋಟ ಹೆಂಡತಿಗಳ, ಸಂತಾನಸ್ಯ-ಮಕ್ಕಳ, ವಿಕ್ರಯಃ-ಮಾರಿಕೊಳ್ಳೋಣವು, ವ್ರಾತ್ಯತಾ-ಭ್ರಷ್ಟನಾಗಿರುವಿಕೆ, ಬಂಧುತ್ಯಾಗಃ-ನೆಂಟರನ್ನು, ನಿಷ್ಕಾರಣವಾಗಿ ಪರಿತ್ಯಜಿಸುವಿಕೆ, ತಥಾ-ಹಾಗೆ, ಭೃತಕಾಧ್ಯಾಪನಂ-ಕೂಲಿಗೆ ವೇದವಿದ್ಯಾಭ್ಯಾಸವನ್ನು ಮಾಡಿಸುವಿಕೆ, ಭೃತಕಾಧ್ಯಯನಂಚಾಪಿ-ತಾನು ಕೂಲಿಯನ್ನು ಕೊಟ್ಟು ವೇದಾದಿವಿದ್ಯೆಯನ್ನು ಕಲಿಯುವುದು, ಅಪಣ್ಯಾನಾಂ-ವಿಕ್ರಯಿಸಬಾರದ, ಅಕ್ಕಿಯಣ್ಣೆ ಹತ್ತಿಮುಂತಾದ ವಸ್ತುಗಳ, ವಿಕ್ರಯಃ-ಮಾರುವಿಕೆಯು,ಶುಷ್ಕಾರ್ಥಂ-ಕಟ್ಟಿಗೆಗಾಗಿ, ಅಶುಷ್ಕಾಣಾಂ-ಒಣಗದೇ ಇರುವ,ವೃಕ್ಷಾಣಾಂ-ಮರಗಳ ಛೇದನಂ-ಕತ್ತರಿಸುವಿಕೆ ನಿಂದಿತಾನ್ನಾದನಂ-ದೋಷಯುಕ್ತವಾದಅನ್ನವನ್ನು ತಿನ್ನುವಿಕೆ,ಮದ್ಯಪಸ್ತ್ರೀನಿಷೇವಣಂ-ಮದಕರವಾದ ಪಾನವನ್ನುಮಾಡುವ ಹೆಂಗಸನ್ನು ಹೊಂದಿರುವಿಕೆ,ಅನಾಹಿತಾಗ್ನಿತಾ-ಆಹಿತಾಗ್ನಿಯಾಗಿಇರದೇಇರೋಣವು ಸ್ತೇಯಂ-ಉಕ್ಕುತಾಮ್ರ ವಸ್ತ್ರಗಳೇ ಮೊದಲಾದ ಪದಾರ್ಥಗಳನ್ನು ಕದಿಯುವಿಕೆಯು, ಋಣಾನಾಂ-ಸಾಲಗಳ, ಅನಪಕ್ರಿಯಾ-ತೀರಿಸದೇ ಇರೋಣವು, ಸದಾ-ಯಾವಾಗಲೂ, ಓಷಧೀನಾಂ-ಮೂಲಿಕೆಗಳ, ಹಿಂಸಾ-ಕತ್ತರಿಸಿ, ಕಿತ್ತು ಜೀಯಿಸಿ ಕುಟ್ಟಿ ಬಾಧೆಪಡಿಸುವಿಕೆ, ಸ್ತ್ರೀಂಪರ್ಯಾ-ಹೆಂಡತಿಯಿಂದ, ಅಥವಾ ಸ್ತ್ರೀಮೂಲಕದಿಂದ, ಜೀವನಂ-ಜೀವಿಸುವಿಕೆ, ಏತಾನಿ-ಇವು, ಅನ್ಯಾನಿ-ಇತರಗಳಾದ, ಕರ್ಮಾಣಿ, ಕೆಲಸಗಳು, ಮಹಾಪಾಪಸಮಾನಿತು, ಮಹಾಪಾತಕಕ್ಕೆ ಸಮಾನಗಳಾಗಿರುವವು॥ ॥೧೪॥

ಪ್ರಾಯಶ್ಚಿತ್ತಂ-ನಿಷ್ಕೃತಿಯನ್ನು, ಅಕುರ್ವಾಣಾಃ-ಮಾಡಿಕೊಳ್ಳ

ಮೃತಸ್ಸನ್ನಿರಯಂವ್ರಜೇತ್ ॥ ಅನುಭಾವ್ಯಂಸ್ವಕಂಕರ್ಮಫ
ಲಂತತ್ರಸಮಶ್ನುತೇ॥೧೯॥ ದೇವತಿರ್ಯಙ್ಮನುಷ್ಯಾಣಾಮಧರ್ಮ
ನಿರತಾತ್ಮನಾಂ ।ಧರ್ಮರಾಜಃಸ್ಮೃತಃಶಾಸ್ತಾಸುಘೋರೈ
ರ್ವಿವಿಧೈರ್ವಧೈಃ॥೨೦॥ ನಿಯಮಾಚಾರಸಕ್ತಾನಾಂಪ್ರಮಾ
ದಾತ್ಸ್ಖಲಿತಾತ್ಮನಾಂ।ಪ್ರಾಯಶ್ಚಿತ್ತೈಃಗುರುಶ್ಶಾಸ್ತಾ

ದವನು, ಮೃತಸ್ಸನ್—ಸತ್ತವನಾಗಿ, ನಿರಯಂ_ನರಕವನ್ನು ಕುರಿತು ವ್ರಜೇತ್—ಹೋಗುವನು,ಸ್ವಕಂ—ತನ್ನ ಸಂಬಂಧವಾದ,ಅನುಭಾವ್ಯಂ—ಅನುಭವಿಸತಕ್ಕದ್ದಾದ, ಕರ್ಮಫಲಂ—ಪಾಪಫಲವನ್ನು, ತತ್ರ—ನರಕದಲ್ಲಿ, ಸಮಶ್ನುತೇ—ಪಡಿಯುತ್ತಾನೆ ॥ತಾ॥ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇ ಇರುವವನು, ತಾನು—ಸತ್ತಬಳಿಕ—ನರಕದಲ್ಲಿ ಸೇರುವನು, ತಾನು ಅನುಭವಿಸಬೇಕಾದ ಪಾಪಫಲವನ್ನು ಅನುಭವಿಸುವನು॥ ॥೧೯॥

ಅಧರ್ಮ—ಪಾಪದ ಕೆಲಸದಲ್ಲಿ, ನಿರತ—ಆಸಕ್ತವಾದ, ಆತ್ಮನಾಂ—ಸ್ವಭಾವವುಳ್ಳವರಾದ, ದೇವದಿರ್ಯಙ್ಮನುಷ್ಯಾಣಾಂ—ದೇವತೆಗಳಿಗೂ, ಪಶ್ವಾದಿಗಳೂ, ಮನುಷ್ಯರಿಗೂ, ಧರ್ಮಜಃ—ಯಮನು, ಸುಘೋರೈಃ—ಅತ್ಯಂತ ಕ್ರೂರಗಳಾದ, ವಿವಿಧೈಃ—ಬಗೆಬಗೆಯಾದ, ವಧೈಃ—ಹಿಂಸೆಗಳಿಂದ, ಶಾಸ್ತಾ—ಶಿಕ್ಷಕನಾಗಿರುವನು. ॥ತಾ॥ ಪಾಪಾಸಕ್ತರಾದ ದೇವ, ಪಶು, ಮನುಷ್ಯರನ್ನು ಯಮನು ವಿಧವಿಧಗಳಾದ ಹಿಂಸೆಗಳಿಂದ ಶಿಕ್ಷಿಸುತ್ತಾನೆ ॥ ॥೨೦॥

ನಿಯಮ—ವ್ರತದಲ್ಲಿಯೂ, ಆಚಾರ—ಶಾಸ್ತ್ರದಲ್ಲಿ ಹೇಳಿರುವ ನಡತೆಯಲ್ಲಿಯೂ, ಸಕ್ತಾನಾಂ—ನಿರತರಾದ, ಪ್ರಮಾದಾತ್—ಪೊರಬಾಟನಿಂದ, ಸ್ಖಲಿತಾತ್ಮನಾಂ—ಚಂಚಲವಾದ ಮನಸ್ಸುಳ್ಳವರಾದವರಿಗೆ, ಗುರುಃ—ಆಚಾರ್ಯನು, ಪ್ರಾಯಶ್ಚಿತ್ತೈಃ—ವ್ರತನಿಯಮಾದಿಗಳಿಂದ, ಶಾಸ್ತಾ—ಶಿಕ್ಷಿಸತಕ್ಕವನಾಗಿರುವನು, ತೈಃ—ಆಚಾರ್ಯಮುಖವಾಗಿ ಪ್ರಾಯಶ್ಚಿತ್ತವನ್ನು ಮಾಡಿಸಿಕೊಂಡು ಶುದ್ಧರಾದವರ ಸಂಗಡ, ಯಮಸ್ತು—ಧರ್ಮರಾಜನು, ನೇಷ್ಯತೇ—ಶಿಕ್ಷಿಸುವದಕ್ಕೆ ಸೇರಿಬರುವದಿಲ್ಲ. ॥ತಾ॥ ಶಾಸ್ತ್ರಾಚಾರಗಳಲ್ಲಿ ನಿರತರಾಗಿ ಯೋಗ್ಯರಾದವರು ಪ್ರಮಾದದಿಂದ ಪಾತಕವನ್ನು ಮಾಡಿದರೆ ಅಂಥಾವನನ್ನು ಆಚಾರ್ಯನು ಪ್ರಾಯಶ್ಚಿತ್ತದಿಂದ ಶಿಕ್ಷಿ

ನತುತ್ರೈರಿಷ್ಯತೆಯಮಃ ॥ ೨೧ ॥ ಪಾರದಾರಿಕಚೋರಾ
ಣಾಮನ್ಯಾಯ ವ್ಯವಹಾರಿಣಾಂ । ನೃಪತಿಶ್ಶಾಸಕಃ ಪ್ರೋ
ಕ್ತಃಪ್ರಚ್ಛನ್ನಾನಾಂಚಧರ್ಮರಾಟ್॥೨೨॥ ತಸ್ಮಾತ್ಕೃತಸ್ಯ
ಪಾಪಸ್ಯಪ್ರಾಯಶ್ಚಿತ್ತಂಸಮಾಚರೇತ್ ॥ಪ್ರಾಯಶ್ಚಿತ್ತೈ
ಶ್ಶಮಂಯಾತಿಕೃತಂಪಾಪಂನಸಂಶಯಃ ॥೨೩॥ ಪ್ರಾಯಶ್ಚಿ
ತ್ತವಿಹೀನಾಯೆಭೂಭೃದ್ಭಿಶ್ಚಾಪ್ಯದಂಡಿತಾಃ । ನರಕಂಪ್ರ

ಸಿ ಪರಿಶುದ್ಧರನ್ನು ಮಾಡುವನು, ಆಬಳಿಕ ಯಮಶಿಕ್ಷೆಯು ಉಂಟಾಗು ವದಿಲ್ಲ, ಅಂದರೆ ಕಲಿಯುಗದಲ್ಲಿ ಪ್ರಮಾದದಿಂದ ಪಾಪವನ್ನು ಮಾಡಿದಷ ನಿಗೆ ಅದು ಪ್ರಾಯಶ್ಚಿತ್ತದಿಂದ ಹೋಗುವದಾಗಿ ತೋರಿಬಂದಲ್ಲಿ ಗುರು ಗಳಾದ ಮಠಾಧಿಪತಿಗಳು ಪ್ರಾಯಶ್ಚಿತ್ತಮಾಡಿ ಶಿಕ್ಷಿಸಿದಬಳಿಕ ಅವರು ಯಮಶಿಕ್ಷೆಗೆ ಗುರಿಯಾಗುವದಿಲ್ಲ ॥ ॥೨೧॥

ಪಾರದಾರಿಕ-ಪರರಹೆಂಡರನ್ನು ಗ್ರಹಿಸುವವರಿಗೆ, ಚೋರಾಣಾಂ-ಕ ಳ್ಳರಿಗೆ, ಅನ್ಯಾಯ-ನ್ಯಾಯವಿಲ್ಲದೆ, ವ್ಯವಹಾರಿಣಾಂ-ಗುದ್ದ್ಯಾಡುವವರಿ ಗೆ, ನೃಪತಿಃ-ಧೊರೆಯು, ಶಾಸಕಃ-ಶಿಕ್ಷಿಸೆತಕ್ಕವನು, ಧರ್ಮರಾಟ್--ಯ ಮನು, ಪ್ರಚ್ಛನ್ನಾನಾಂಚ-ರಹಸ್ಯವಾಗಿ ಪಾಪವನ್ನುಮಾಡಿರುವವರಿ ಗೆ, ಶಾಸಕಃ—ಶಿಕ್ಷಕನು, (ಎಂಬದಾಗಿ) ಪ್ರೋಕ್ತಃ-ಹೇಳಲ್ಪಟ್ಟಿರು ವದು ॥ ॥೨೨॥

ತಸ್ಮಾತ್-ಆ ಕಾರಣದಿಂದ, ಕೃತಸ್ಯ-ಮಾಡಲ್ಪಟ್ಟ, ಪಾಪಸ್ಯ-ಪಾ ತಕಕ್ಕೆ, ಪ್ರಾಯಶ್ಚಿತ್ತಂ-ಪಾಪಹರವಾದ ವ್ರತವನ್ನು, ಸಮಾಚರೇ ತ್-ನಡಿಸಬೇಕು, ಕೃತಂ-ಮಾಡಲ್ಪಟ್ಟ, ಪಾಪಂ-ಪಾತಕವು, ಪ್ರಾಯ ಶ್ಚಿತ್ತೈಃ—ವ್ರತನಿಯಮಗಳಿಂದ, ಶಮಂ-ಶಾಂತಿಯನ್ನು, ಯಾತಿ- ಹೊಂದುವದು. ॥ತಾ॥ ನಸಂಶಯಃ-ಸಂದೇಹವಿಲ್ಲವು, ತಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ, ಪಾಪವು ಪರಿಹರವಾ ಗುವದು ॥ ॥೨೩॥

ಯೇ-ಯಾರು, ಪ್ರಾಯಶ್ಚಿತ್ತವಿಹಿನಾಃ-ಪಾಪ ಪರಿಹರವಾದ ನಿ ಯಮವನ್ನುಮಾಡದೇ ಇರುವರೋ, ರಾಜಭಿಶ್ಚ-ಧೊರೆಗಳಿಂದ,ಅದಂಡಿ ತಾಃ-ಶಿಕ್ಷಿಸಲ್ಪಡದೇಇರುವರೋ, ತೆ-ಅವರು, ನರಕಂ-ನಿರಯವನ್ನು,ಪ್ರ

ತಿಪದ್ಯಂತೆತಿರ್ಯಗ್ಯೋನಿಂತಥೈವಚ ॥ ೨೪ ॥ ಅಶುಭಾನಾಂ ಶುಭಾನಾಂ ಚಕರ್ಮಣಾಂ ಮನುಜೋಭುವಿ । ಕರೋತಿಸಂ ಚಯಂ ಯಸ್ಮಾನ್ಮಾನುಷ್ಯಂ ಜನ್ಮ ದುಲ್ಲಭಂ ॥ ೨೫ ॥ ಕರ್ಮಜಾತುಗತಿಃ ಪುಂಸಾಂ ಉತ್ತಮಾ ಮಧ್ಯಮಾಧಮಾ ॥

ತಿಪದ್ಯಂತೆ–ಹೊಂದುವರು,ತಥೈವಚ–ಹಾಗೆಯೇ ತಿರ್ಯಗ್ಯೋನಿಂ–ನಾಯಿ ನರಿ, ಹಂದಿ ಮುಂತಾದ ಜನ್ಮಗಳನ್ನು, ಪ್ರಜಂತಿಚ–ಹೊಂದುವರು. ತಾ॥ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೇಲೂ, ಧೊರೆಯಿಂದ ಶಿಕ್ಷಿಸಲ್ಪ ಡದೇಲೂ ಯಾರು ಇರುವರೋ,ಅವರು ನರಕದಲ್ಲಿ ಶಿಕ್ಷೆಯಾದಬಳಿಕ ಅ ವರವರಕರ್ಮಾನುಸಾರವಾಗಿ ನಾಯಿ ನರಿ,ಹಂದಿ,ಪಶು,ಪಕ್ಷಿ, ಮೃಗ, ಕ್ರಿ ಮಿ, ಕೀಟ ಮುಂತಾದ ಯೋನಿಗಳಲ್ಲಿ ಜನಿಸುವರು ॥ ॥೨೪॥

ಭುವಿ––ಭೂಲೋಕದಲ್ಲಿ, ಅಶುಭಾನಾಂ–ಪಾಪಕರಗಳಾದ, ಶುಭಾ ನಾಂ–ಪುಣ್ಯಕರಗಳಾದ, ಕರ್ಮಣಾಂ–ಕೆಲಸಗಳ, ಸಂಚಯಂ–ಸಮುದಾ ಯವನ್ನು, ಮನುಜಃ–ನರನು, ಯಸ್ಮಾತ್–ಯಾವ ಕಾರಣದಿಂದ, ಕ ರೋತಿ–ಮಾಡುತ್ತಾನೋ,ತಸ್ಮಾತ್–ಆದ್ದರಿಂದ,ಮಾನುಷ್ಯಂ–ಮನು ಷ್ಯ ಸಂಬಂಧವಾದ, ಜನ್ಮ–ಹುಟ್ಟುವಿಕೆ, ದುಲ್ಲಭಂ–ಲಭಿಸತಕ್ಕದ್ದಲ್ಲ ವು. ॥ತಾ॥ ಮನುಷ್ಯನಾಗಿ ಭೂಮಿಯಲ್ಲಿ ಹುಟ್ಟಿ, ಶುಭಕರ್ಮಗಳ ನ್ನು ಮಾಡುತ್ತಾನಾದ್ದರಿಂದ, ಪಾಪಗಳನ್ನೇ ಮಾಡುತ್ತಾ ಒಂದಲ್ಲಿ ಮಾ ನುಷ್ಯಜನ್ಮವು ದುರ್ಲಭವಾಗಿರುವುದು ॥ ॥೨೫॥

ಪುಂಸಾಂ–ಮನುಷ್ಯರಿಗೆ, ಕರ್ಮಜಾ–ಕರ್ಮದಿಂದ ಉಂಟಾಗುವ, ಗ ತಿಸ್ತು–ಗತಿಯಾದರೇನೋ, ಉತ್ತಮಾ–ಉತ್ತಮವೆಂದು, ಮಧ್ಯಮಾ– ಮಧ್ಯಮವೆಂದು, ಅಧಮಾ–ಅಧಮವೆಂದು, (ತ್ರಿವಿಧಾ–ಮೂರು ಬಗೆಯಾ ಗಿರುವದು ) ಮನೋವಾಗ್ದೇಹಜಂ–ಮನಸ್ಸಿನಿಂದ, ಮಾತಿನಿಂದ, ಶರೀ ರದಿಂದ ಹುಟ್ಟಿದ, ಕರ್ಮ–ಕಾರ್ಯವು, ಶುಭಾಶುಭಫಲಾತ್ಮಕಂ–ಪುಣ್ಯ, ಪಾಪಫಲರೂಪವಾಗಿರುವದು. ॥ತಾ॥ ಪುಣ್ಯಲೋಕ, ಪಾಪಲೋಕ ಗಳಲ್ಲಿ ಮನುಷ್ಯನಿಗೆ ಉಂಟಾಗುವ ಗತಿಯು, ಉತ್ತಮ, ಮಧ್ಯಮಾಧ ಮಗಳೆಂದು ಮೂರು ಬಗೆಯಾಗಿರುತ್ತೆ. ಕಾಯಕವಾಚಕ ಮಾನಸಿಕಗ ಳೆಂಬ ಮೂರು ವಿಧಗಳಾದ ಕರ್ಮಗಳು ಪುಣ್ಯಪಾಪ ಫಲಗಳ ರೂಪವಾಗಿ

ಮನೋವಾಗ್ದೇಹಜಂಕರ್ಮಶುಭಾಶುಭಾಫಲಾತ್ಮಕಂ ॥೬॥
ಪರವಸ್ತುಷುನಿಷ್ಠಾಚಮನಸಾನಿಷ್ಟಚಿಂತನಂ। ಅನೃತಾ
ಭಿನಿವೇಶಶ್ಚತ್ರಿವಿಧಂಮಾನಸಂಸ್ಮೃತಂ॥೭॥ ಪಾರುಷ್ಯಮ
ನೃತಂಸಮ್ಯಕ್ಪೈಶುನ್ಯಂಚವಿಶೇಷತಃ।ಅಸಂಬದ್ಧಪ್ರಲಾಪ
ಶ್ಚವಾಙ್ಮಯಂಸ್ಯಾಚ್ಚತುರ್ವಿಧಂ॥೮॥ಅದತ್ತಾನಾಮುಪಾ

ಯೋ ಪರಿಣಮಿಸುವವು॥ ॥೬॥

ಪರ–ಅನ್ಯರ, ವಸ್ತುಷು–ದ್ರವ್ಯಾದಿ ಪದಾರ್ಥಗಳಲ್ಲಿ, ನಿಷ್ಠಾ–ಆಸಕ್ತಿ ಯು,ಮನಸಾ–ಚಿತ್ತದಿಂದ,ಅನಿಷ್ಟ–ಇತರರಿಗೆ ಕೇಡನ್ನು, ಚಿಂತನಂ–ಯೋಚಿಸುವಿಕೆಯು.ಅನೃತ–ಸುಳ್ಳನ್ನುಹೇಳುವದರಲ್ಲಿ, ಅಭಿನಿವೇಶಶ್ಚ–ತಾತ್ಪರ್ಯವುಳ್ಳವನಾಗಿರುವಿಕೆಯು, (ಎಂಬದಾಗಿ)ಮಾನಸಂ–ಮಾನೋಜನ್ಯವಾದ ಪಾಪವು,ತ್ರಿವಿಧಂ–ಮೂರು ಬಗೆಯೆಂಬದಾಗಿ,ಸ್ಮೃತಂ–ಹೇಳಲ್ಪಡುವದು. ॥ತಾ॥ ಮನಸ್ಸಿನಲ್ಲಿ ಹೆರರ ದ್ರವ್ಯವನ್ನು ಅಪಹರಿಸುವ ತಾತ್ಪರ್ಯವು, ಇತರರಿಗೆ ಕೆಟ್ಟದ್ದಾಗಲೆಂದು ಯೋಚಿಸುವಿಕೆಯು, ಸ್ವಕಾರ್ಯಸಾಧನೆಗಾಗಿ ಸುಳ್ಳನ್ನು ಹೇಳಬೇಕೆಂಬುವುದು, ಈ ಮೂರು ಮಾನಸಿಕ ಪಾಪಗಳು ॥ ॥೭॥

ಸಮ್ಯಕ್–ಚನ್ನಾಗಿ, ಪಾರುಷ್ಯಂ–ಕ್ರೂರವಾಗಿ ಕೇಳಲಶಕ್ಯವಾದ, ಮಾತುಗಳನ್ನಾಡುವಿಕೆ,ಅನೃತಂ–ಸುಳ್ಳುಮಾತನ್ನುಉಚ್ಚರಿಸುವಿಕೆಯು, ವಿಶೇಷತಃ–ಅತಿಶಯವಾಗಿ ಪೈಶುನ್ಯಂ–ಪಿಶುನತ್ವವು,ಅಸಂಬದ್ಧ–ಅಶಾಸ್ತ್ರೀಯವಾದ, ಅಯೋಗ್ಯವಾದ,ಪ್ರಲಾಪಶ್ಚ–ಸಂಭಾಷಣೆಯು, ಚತುರ್ವಿಧಂ–ನಾಲ್ಕು ಬಗೆಯಾದ, ವಾಙ್ಮಯಂ–ಮಾತಿನರೂಪವಾದ ಪಾಪವು, ಸ್ಯಾತ್–ಆಗುವುದು. ॥ತಾ॥ ಜನರು ಕೇಳುವದಕ್ಕೆ ಅಶಕ್ಯವಾದ ಕ್ರೂರ ಮಾತುಗಳನ್ನು ಆಡುವಿಕೆಯು. ಪಿಶುನತ್ವವೂ, ಅಯೋಗ್ಯ ಅಶ್ಲೀಲಅಶಾಸ್ತ್ರೀಯವಾದ ಮಾತುಗಳನ್ನುಆಡುವಿಕೆಯೂ,ಸುಳ್ಳನ್ನಾಡುವಿಕೆಯೂ ಈನಾಲ್ಕು ಪಾತಕಗಳು ವಾಗ್ರೂಪಗಳಾಗಿರುವವು॥೮॥

ಅದತ್ತಾನಾಂ–ತನಿಗೆ ಇತರರಿಂದ ಕೊಡಲ್ಪಡದ ವಸ್ತುಗಳನ್ನು, ಉಪಾದಾನಂ–ಸೊತ್ತುಕರ್ತೃರನ್ನು ಕೇಳದೆ ಅಪಹರಿಸಬೇಕೆಂಬ ಬುದ್ಧಿಯಿಂದ ತೆಗೆದುಕೊಳ್ಳೋಣವು, ವಿಶೇಷತಃ–ಅತಿಶಯವಾಗಿ, ಪರ

ದಾನಂಪರಹಿಂಸಾವಿಶೇಷತಃ॥ಪರದಾರರತಿಶ್ಚಾಪಿಶಾರೀರಂ
ತ್ರಿವಿಧಂಸ್ಮೃತಂ॥೨೯॥ಮಾನಸಾಮಾನಸಂಪುಣ್ಯಪಾಪಕರ್ಮ
ಸಮಶ್ನುತೇ ॥ ವಾಕ್ಕೃತಂವಚಸಾಭುಂಕ್ತೇಕಾಯೇನೈವತು
ಕಾಯಿಕಂ ॥ ೩೦॥ ನರಃಸ್ಥಾವರತಾಂಯಾತಿಕರ್ಮದೋಷೈ
ಶ್ಶರೀರಜೈಃ॥ವಾಚಕೈಃಪಕ್ಷಿಮೃಗತಾಂಚಿತ್ತಜೈರಂತ್ಯಜಾ

ಹಿಂಸಾ–ಪರರಿಗೆ ಹಿಂಸೆಯನ್ನು ಮಾಡುವಿಕೆಯು, ಪರದಾರ–ಅನ್ಯರ ಹೆಂಡತಿಯರ ಸಂಗಡ, ರತಿಃ–ಕ್ರೀಡೆಯು, ತ್ರಿವಿಧಂ–ಈ ಮೂರು, ಶಾರೀರಂ–ಶರೀರಸಂಬಂಧವಾದ ಪಾಪವೆಂಬದಾಗಿ, ಸ್ಮೃತಂ–ಹೇಳಲ್ಪಡುವದು. ॥ತಾ॥ ತನಗೆ ಕೊಡದೇ ಇರುವ ಇತರರ ವಸ್ತುಗಳನ್ನು ಅಪಹರಿಸಬೇಕೆಂದು ತೆಗದುಕೊಳ್ಳುವುದು, ವಿಶೇಷವಾಗಿ ಅನ್ಯರಿಗೆ ಹಿಂಸೆಯನ್ನು ಮಾಡುತ್ತಿರೋಣವು, ಅನ್ಯರ ಹೆಂಡರಲ್ಲಿ ಕ್ರೀಡೆಯು, ಈ ಮೂರು ಶರೀರಸಂಬಂಧವಾದ ಪಾಪಗಳೆನಿಸುವವು ॥ ॥೨೯॥

ಮನಸಾ–ಚಿತ್ತದಿಂದ, ಮಾನಸಂ–ಮನಸ್ಸಿನಿಂದ ಮಾಡಿರುವದಾದ, ಪುಣ್ಯಪಾಪಕರ್ಮ–ಸುಕೃತ ದುಷ್ಕೃತರೂಪವಾದ ಕರ್ಮಫಲವನ್ನು, ಸಮಶ್ನುತೆ–ಪಡೆಯುವನು. ವಾಕ್ಕೃತಂ–ಮಾತಿನಿಂದ ಮಾಡಿದ ಪುಣ್ಯಪಾಪರೂಪವಾದ ಕರ್ಮಫಲವನ್ನು, ವಚಸಾ–ಮಾತಿನಿಂದ, ಕಾಯಿಕಂ–ಶರೀರದಿಂದ ಮಾಡಿದ ಪುಣ್ಯಪಾಪರೂಪವಾದ ಕರ್ಮಫಲವನ್ನು,ಕಾಯೇನೈವ–ಶರೀರದಿಂದಲೇ, ಭುಂಕ್ತೆ–ಅನುಭವಿಸುತ್ತಾನೆ. ॥ತಾ॥ ಮನಸ್ಸಿನಿಂದ ಮಾಡಿದ ಪುಣ್ಯಪಾಪ ಕರ್ಮಗಳ ಫಲವನ್ನು ಮನಸ್ಸಿನಿಂದಲೂ, ಮಾತಿನಿಂದ ಮಾಡಿರುವ ಪುಣ್ಯ ಪಾಪರೂಪವಾದ ಕರ್ಮಫಲವನ್ನು ಮಾತಿನಿಂದಲೂ,ಶರೀರದಿಂದ ಮಾಡಿರುವ ಪುಣ್ಯಪಾಪರೂಪವಾದ ಪುಣ್ಯಫಲವನ್ನು ಶರೀರದಿಂದಲೂ,ಅನುಭವಿಸುತ್ತಾನೆ॥ ॥೩೦॥

ನರಃ–ಮನುಜನು, ಶರೀರಜೈಃ–ಶರೀರದಿಂದ ಹುಟ್ಟದ, ಅಂದರೆ ದೇಹದಿಂದ ಮಾಡಲ್ಪಟ್ಟ ಕರ್ಮದೋಷೈಃ–ಪಾಪಕರ್ಮಗಳಿಂದ, ಸ್ಥಾವರತಾಂ–ಪರ್ವತಪಾಷಾಣವೃಕ್ಷಾದಿ ರೂಪತೆಯನ್ನು, ಯಾತಿ–ಹೊಂದುತ್ತಾನೆ,ವಾಚಕೈಃ–ಮಾತಿನಿಂದ ಉಂಟಾದ ಪಾಪಕರ್ಮಗಳಿಂದ,ಪಕ್ಷಿಮೃಗತಾಂ–ಹದ್ದು, ಕಾಗಿ, ಆನೆ, ಆಡು ಮುಂತಾದ ಪಶುತ್ವವನ್ನು, ಯಾ

ತ್ರಾಂ ॥ ೩೧ ॥ ಅಭಕ್ಷ್ಯಭಕ್ಷಣಂ ಸಮ್ಯಗಭೋಜ್ಯಾನಾಂ ಚ ಭೋಜನಂ ॥ ಅಯಾಜ್ಯಯಾಜನಂ ಚಾಪಿ, ಅಗಮ್ಯಾಗಮನಂ ತಥಾ ॥ ಪರದಾರಾಭಿಗಮನಂ ಪರಹಿಂಸಾ ಚ ದುಷ್ಟತಾ ॥ ಪರದ್ರವ್ಯಾಪಹರಣಂ ಅಸತಾಂ ಚ ಪ್ರತಿಗ್ರಹಃ ॥ ಪಾರುಷ್ಯಮನೃತಂ ವಾದಃ ವೇದಾನಾಂ ಚಾಪಿ ವಿಕ್ರಯಃ ॥ ಪರೋ

ತಿ-ಹೊಂದುವನು, ಚಿತ್ತಜೈಃ-ಮನಸ್ಸಿನಿಂದ ಮಾಡಿದ ಪಾಪಕರ್ಮಗಳಿಂದ, ಅಂತ್ಯಜಾತಿತಾಂ-ಚಂಡಾಲಾದಿ ನೀಚಜಾತಿಯನ್ನು, ಯಾತಿ-ಹೊಂದುವನು. ॥ತಾ॥ ಮನುಷ್ಯನು ಶರೀರಸಂಬಂಧವಾದ ಪಾಪಕರ್ಮದಿಂದ ಮರಬಳ್ಳಿಬೆಟ್ಟರೂಪವನ್ನು, ಮಾತಿನಿಂದ ಉಂಟಾದ ಪಾಪಕರ್ಮದಿಂದ ಹಕ್ಕಿ ಪಶು ಜನ್ಮವನ್ನು, ಮನೋಜನ್ಯವಾದ ಪಾಪಕರ್ಮದಿಂದ ಚಂಡಾಲಾದಿ ನೀಚಜಾತಿಯ ಜನ್ಮವನ್ನು ಪಡೆಯುವನು ॥ ॥೩೧॥

ಅಭಕ್ಷ್ಯ-ತಿನ್ನಬಾರದವಸ್ತುವನ್ನು ತಿನ್ನುವದು, ಸಮ್ಯಕ್-ಚನ್ನಾಗಿ, ಅಭೋಜ್ಯಾನಾಂ-ಭೋಜನ ಮಾಡಬಾರದವರ ಸಂಗಡ, ಭೋಜನಂ-ಭುಜಿಸುವುದು, ಅಯಾಜ್ಯ-ಯಾರಿಗೆ ವೇದೋಕ್ತ ಕರ್ಮಗಳಿಂದ ಯಾಜ್ಞಿಕವನ್ನು ಮಾಡಿಸಬಾರದೋ, ಅಂಥಾವರಿಗೆ, ಯಾಜನಂಚಾಪಿ-ವೇದೋಕ್ತ ಯಾಜ್ಞೀಕ ಕರ್ಮಗಳನ್ನು ಮಾಡಿಸುವಿಕೆಯೂ, ತಥಾ-ಹಾಗೆ, ಅಗಮ್ಯ-ಹೋಗಬಾರದ ಸ್ಥಳಕ್ಕೆ ಗಮನಂ-ಹೋಗೋಣವು, ಪರದಾರ-ಅನ್ಯರ ಹೆಂಡರಲ್ಲಿ, ಅಭಿಗಮನಂ-ಸಂಯೋಗವು, ತಥೈವಚ-ಹಾಗೆಯೇ, ಪರಹಿಂಸಾ-ಹೆರರಿಗೆ, ಕೇಡನ್ನು ಮಾಡುವಿಕೆಯು, ದುಷ್ಟತಾ-ದೌಷ್ಟ್ಯವು, ಪರದ್ರವ್ಯ-ಇತರರ ಪದಾರ್ಥವನ್ನು. ಅಥವಾ ಧನವನ್ನು, ಅಪಹರಣಂ-ಅಪಹರಿಸುವಿಕೆಯು, ಅಸತಾಂಚ-ಅಯೋಗ್ಯರಿಂದ, ಪ್ರತಿಗ್ರಹಃ-ದ್ರವ್ಯವಸ್ತ್ರಾದಿಗಳನ್ನು ಪರಿಗ್ರಹಿಸುವದು, ಪಾರುಷ್ಯಂ-ಕ್ರೂರವಾಗಿಯೂ, ಸಂಕಟಕರವಾಗಿಯೂ ಆಗುವಂತೆ ಮಾತನಾಡುವದು, ವಾದಃ-ಜಗಳವು, ಅಥವಾ ಸಭಾಮುಖದಲ್ಲಿ ಶಾಸ್ತ್ರವಿಚಾರಮಾಡುವಾಗ್ಯೆ ಬ್ರಾಹ್ಮಣಾವಮಾನವಾಗುವಂತೆ ಪ್ರಸಂಗಮಾಡುವಿಕೆ, ಅನೃತಂ-ಸಟೆ, ವೇದಾನಾಂ-ಋಗ್ಯಜುಸ್ಸಾಮಾಥರ್ವಣಗಳ, ಉಪನಿಷತ್ತುಗಳ, ವಿಕ್ರಯಶ್ಚಾಪಿ-ಮಾರುವಿಕೆಯು, ಪರ-ಅನ್ಯರಿಗೆ, ಉಪತಾಪಃ-ಸಂತಾಪ ಪಡಿಸುವಿಕೆ, ಕ್ರೋಧಃ-ಕಿ

ಪತಾಪಕ್ರೋಧಶ್ಚ ಲೋಭೋಮೋಹೋಪ್ಯಹಂಕೃತಿಃ ।ಏತಾ

ಷ್ಟ, ಲೋಭಃ-ಉಬ್ಧತೆಯು, ಮೋಹಂ-ಅಜ್ಞಾನವು, ಅಥವಾ ದಾ
ರಾಪುತ್ರಾದಿಗಳಲ್ಲಿ ಶಾಸ್ತ್ರವಿರುದ್ಧವಾದ ಭ್ರಾಂತಿಯು, ಅಹಂಕೃತಿಃ-
ಗರ್ವವೂ.ಮುನೇ-ವೈಖಾನಸಮುನಿಯೇ, ಏತಾನಿ-ಅಷ್ಟಾದಶ-ಈ ಹದಿ
ನೆಂಟು, ನೈರಯಾಣಿ-ನರಕಪ್ರದಗಳು, ನಸಂಶಯಃ-ಸಂದೇಹವಿಲ್ಲವು.
॥ತಾ॥ ಶೂದ್ರಾನ್ನಸೂತಕಾನ್ನ ಚಂಡಾಲಾನ್ನವನ್ನು, ಎಂಜಲು ಮಾಡ
ಲ್ಪಟ್ಟಅಯೋಗ್ಯವಾದಅಶುಚಿಯಾದಅನ್ನವನ್ನುತಿನ್ನುವಿಕೆಯು,ಪತಿತ
ಹೂಣಮ್ಲೇಚ್ಛರುಮುಂತಾದವರಸಂಗಡಲೂ ಶೂದ್ರಾದಿವರ್ಣಾಂತರದ
ವರಸಂಗಡಲೂ ಭೋಜನವನ್ನು ಮಾಡೋಣವು,ವೇದೋಕ್ತಕರ್ಮಗಳಿಗೆ
ತಕ್ಕವರಲ್ಲದವರಿಗೆ ವೇದೋಕ್ತಕರ್ಮಗಳನ್ನು ಮಾಡಿಸುವಿಕೆಯು, ಕರ್ಮ
ಭೂಮಿಯಲ್ಲವೆಯೂ,ಮ್ಲೇಚ್ಛವಾಸವಾಗಿಯೂ ಅಬ್ರಾಹ್ಮಣ್ಯಪ್ರದೇಶ
ವಾಗಿಯೂ ಇರುವ ದೇಶಗಳಿಗೆ ಹೋಗುವಿಕೆಯೂ, ಅನ್ಯರ ಪತ್ನೀ
ಯರ ಸಂಗವನ್ನು ಮಾಡುವಿಕೆಯು, ಪ್ರಾಣಿಮಾತ್ರಕ್ಕೆ ಕೇಡನ್ನುಂಟು
ಮಾಡೋಣವು, ಪರದ್ರವ್ಯವನ್ನು ಅಪಹರಿಸುವಿಕೆಯು. ದುಷ್ಟರಿಂದ
ಪ್ರತಿಗ್ರಹವನ್ನು ಮಾಡುವಿಕೆಯು, ಪರರ ಹೃದಯವು ನೋಯುವಂತೆ
ನಿಷ್ಠೂರವಾದ ಮಾತುಗಳನ್ನಾಡುವಿಕೆಯು, ಜಗಳವನ್ನು ಮಾಡೋಣ
ವು, ಬ್ರಾಹ್ಮಣ ತೇಜೋಹಾನಿಮಾಡುವ ದಾದ ಕ್ರೂರಪ್ರಸಂಗವು,
ವೇದೋಪನಿಷತ್ಪುರಾಣ ಧರ್ಮಶಾಸ್ತ್ರಗಳನ್ನು ಸಂಬಳಕ್ಕೆ ನಿಂತು
ಬೋಧಿಸುವದು, ಇತರರಿಗೆ ಮನೋತಾಪ ವುಂಟಾಗುವಂತೆ ಮಾ
ಡುವಿಕೆಯೂ, ಧರ್ಮವಿರುದ್ಧಗಳಾದ ಕಾಮಕ್ರೋಧ ಲೋಭಮೋ
ಹಾದಿಗಳು, ಅಹಂಕಾರವು, ಇವುಹದಿನೆಂಟು ವಿಷಯಗಳು ನರಕಪ್ರ
ದಗಳಾಗುವವು ಸಂಶಯವಿಲ್ಲವು, ॥ವಿ॥ ಕಾಮವು-ತನ್ನ ಹೆಂಡತಿಯ
ಲ್ಲಿ ಉಪಯೋಗಿಸಿದರೆ ಪರಲೋಕ ಹಾನಿಯಾಗುವದಿಲ್ಲವು, ಕಾಮವನ್ನು
ಪರದಾರರತಿಯಲ್ಲಿ ಉಪಯೋಗಿಸಿದರೆ ನರಕಪ್ರದವಾಗುವದು, ಕ್ರೋ
ಧವು-ತನ್ನ, ಪುತ್ರರು ವಿವೇಕಿಗಳಾಗಬೇಕೆಂದು ಹೇಳಿ ಉಪಯೋಗಿ
ಸುವ ವಿಷಯದಲ್ಲಿ ಪಾಪಕರವಲ್ಲವು, ತನ್ನ ಮಕ್ಕಳಿಗೆ ಆಗಲೀ ಇತರರಿ
ಗೇ ಆಗಲೀ ಕೇಡನ್ನು ಉಂಟುಮಾಡುವದರಲ್ಲಿ ಉಪಯೋಗಿಸಿದರೆ ಪಾಪ

ಸ್ವಸ್ಸ್ಯಾಪಕಮಾನೆ ನ್ಯೈರ್ಘೋಣಿನಸಂಶಯಃ॥೩೧॥ಯಸ್ಮಿನ್
ವಯಸಿಯತ್ಕರ್ಮಕರೋತಿಮನುಜೋಭುವಿ॥ ತಸ್ಮಿಂಸ್ತಸ್ಮಿಂಶ್ಚ
ವಯಸಿತ್ರಿವಿಧಂಪ್ರಾಪ್ನುಯಾತ್ಕ್ರಮಾತ್ ॥ ೩೨ ॥ ಶರೀರೇ
ಣೈವಶಾರೀರಂವಾಚಕಂ-ವಚಸೈವತು।ಮಾನಸಂಮನಸ್ಯೈ

ಪ್ರದವಾಗುವುದು, ಹೀಗೆ ಇತರರಲೋಭಮೋಹ ಅಹಂಕಾರಾದಿಗಳ ವಿಷಯದಲ್ಲಿ ಊಹಿಸಬೇಕು ಯಾವದೇ ಆಗಲಿ ತನ್ನ ಅಭಿಸಂಧಿಯ ಅನುಸಾರವಾಗಿ ಪಾಪಪ್ರದವೂ ಪುಣ್ಯಪ್ರದವೂ ಆಗುವದು ॥ ॥೩೧॥

ಮನುಜಃ-ಮನುಷ್ಯನು, ಭುವಿ-ಭೂಮಿಯಲ್ಲಿ, ಯಸ್ಮಿನ್‌ವಯಸಿ-ಯಾವವಯಸ್ಸಿನಲ್ಲಿ, ಯತ್ಕರ್ಮ-ಯಾವಯಾವ ಪುಣ್ಯಪಾಪ ರೂಪವಾದ ಕೆಲಸವನ್ನು, ಕರೋತಿ-ಮಾಡುತ್ತಾನೋ, ತಸ್ಮಿನ್‌ತಸ್ಮಿನ್‌ಶ್ಚ ಆಯಾಯಿವಯಸ್ಸಿನವರ್ಷಗಳುಂಟಾದಲ್ಲಿ, ಕ್ರಮಾತ್-ಪ್ರಾಪ್ತವಾಗಿ, ತ್ರಿವಿಧಂ-ಕಾಯಿಕವಾಚಿಕಮಾನಸಿಕ ರೂಪವಾದ ಮೂರುವಿಧ ಪುಣ್ಯಪಾಪಕರ್ಮಫಲವನ್ನು, ಪ್ರಾಪ್ನುಯಾತ್-ಪಡೆಯುವನು, ॥ತಾ॥ ಭೂಲೋಕದಲ್ಲಿ ಇರುವಾಗ್ಯೆ ಯಾವ ವಯಸ್ಸಿನಲ್ಲಿ ಯೇನು ಯೇನು ಪುಣ್ಯಪಾಪ ಕರ್ಮಗಳನ್ನು ಕಾಯಿಕವಾಚಿಕಮಾನಸಿಗಳನ್ನಾಗಿ ಮಾಡುತ್ತಾನೆ, ಮತ್ತೊಂದು ಜನ್ಮಬಂದಾಗ, ಆಯಾಯಿವಯಸ್ಸುಬಂದಾಗ,ಆಕಾಯಿಕವಾಚಮಾನಸಿಕ ಕರ್ಮಫಲಗಳನ್ನು, ಹೊಂದುವನು ॥ ॥೩೨॥

ಅಯಂ-ಈಪುರುಷನು, ಶರೀರೇಣ-ದೇಹದಿಂದ, ಶಾರೀರಂ-ಶರೀರದ ಸಂಬಂಧವಾದ,ಶುಭಶುಭಂ-ಪುಣ್ಯಪಾಪಫಲವನ್ನು, ವಚಸಾ-ಮಾತಿನಿಂದ,ವಾಚಕಂ-ವಾಗ್ರೂಪವಾದ, ಶುಭಾಶುಭಂ-ಪುಣ್ಯಪಾಪಫಲವನ್ನು, ಮಾನಸಂ-ಮನಸ್ಸಿನಿಂದಮಾಡಿದ,ಶುಭಾಶುಭಂ-ಪುಣ್ಯಪಾಪಫಲವನ್ನು, ಮನಸೈವ-ಮನಸ್ಸಿನಿಂದಲೇ, ಉಪಭುಂಕ್ತೇ-ಅನುಭವಿಸುವನು ॥ತಾ॥ ಮನಸ್ಸಿನಿಂದಮಾಡಿದ ಪುಣ್ಯಪಾಪಫಲಗಳನ್ನು,ಮಸ್ಸಿನಲ್ಲಿಯೇಸಂತೋಷದುಃಖಗಳನ್ನು ಪಡೆಯುತ್ತಾ, ಅನುಭವಿಸುತ್ತಾನೆ, ಶರೀರದಿಂದಮಾಡಿರುವ ಪುಣ್ಯಪಾಪಫಲಗಳನ್ನು-ಶರೀರಕ್ಕೆ ರೋಗ ಪುಷ್ಟಿಮುಂತಾದವುಗಳಿಂದ ಅನುಭವಿಸುತ್ತಾನೆ, ಮಾತಿನಿಂದ ನಡಿಸಿದ ಪುಣ್ಯಪಾಪಫಲಗಳನ್ನು, ಇತರರ ಮರ್ಯಾದೋಕ್ತಿ, ಕಠಿನೋಕ್ತಿ ರೂಪವಾದ ವಾಕ್ಕಿನಿಂ

ಪಾಯಮುಪಭುಙ್ಕ್ತೇ ಶುಭಾಶುಭಂ || ||೨೪||
ಸತ್ವಂರಜಸ್ತಮಶ್ಚೇತಿತ್ರಿವಿಧಾಃ ಗುಣವೃತ್ತಯಃ|ಗುಣಾ
ನಾಂತ್ರಿವಿಧಾಪ್ರೋಕ್ತಾಃಗತಯೊ ಮುನಿಪುಂಗವ,||೨೫||ಬ್ರ
ಹ್ಮಜ್ಞಶ್ಚ ಶುಚಿರ್ದಾಂತಃತಪಸ್ವೀನಿರ್ಜಿತೇಂದ್ರಿಯಃ|ವೇದ
ಜ್ಞೋಧರ್ಮಕೃದ್ಯಾತಿಸಾತ್ವಿಕೋದೇವಯೋನಿತಾಂ||೨೬||ಅ

ದಲೇ ಪಡೆಯುತ್ತಾನೆ|| ||೨೪||

ಸತ್ವಂ-ಸತ್ವಗುಣವೆಂದು, ರಜಃ-ರಜೋಗುಣವೆಂದು, ತಮಶ್ಚೇತಿ-ತಮೋಗುಣವೆಂದು, ಗುಣವೃತ್ತಯಃ-ಗುಣವ್ಯಾಪಾರಗಳು, ತ್ರಿವಿಧಾಃ-ಮೂರುಬಗೆಗಳಾಗಿ, ಪ್ರೋಕ್ತಾಃ-ಹೇಳಲ್ಪಡುವವು, ಗುಣಾನಾಂ-ಸತ್ವರಜಸ್ತಮೋಗುಣಗಳಿಗೆ, ಗತಯಃ-ಗತಿಗಳು, ತ್ರಿವಿಧಾಃ-ಮೂರುಬಗೆಗಳಾಗಿ, ಪ್ರೋಕ್ತಾಃ-ಹೇಳಲ್ಪಡುವವು. ||ತಾ|| ಸತ್ವಗುಣರಜೋಗುಣ ತಮೊ, ಗುಣಗಳೆಂದು, ಗುಣವೃತ್ತಿಗಳು ಮೂರುಬಗೆಗಳಾಗಿರುವವು, ಆಗುಣಗಳಿಗೆ ಮೂರುಗತಿಗಳುಉಂಟಾಗುವವು, ಅಂದರೆ-ಸಾತ್ವಿಕ-ಸಾತ್ವಿಕಗತಿಯು ಸಾತ್ವಿಕರಾಜ ಸಗತಿಯು, ಸಾತ್ವಿಕ ತಾಮಸಗತಿಯು, ರಾಜಸಸಾತ್ವಿಕಗತಿಯು, ರಾಜಸರಾಜಸಗತಿಯು, ರಾಜಸತಾಮಸಗತಿಯು, ತಾಮಸಸಾತ್ವಿಕಗತಿಯು, ತಾಮಸರಾಜಸಗತಿಯು ತಾಮಸತಾಮಸಗತಿಯು, ಎಂಬದಾಗಿ ಉಂಟಾಗುವದು || ||೨೫||

ಶುಚಿಃ-ಪರಿಶುದ್ಧನಾದ,ಬ್ರಹ್ಮಜ್ಞಃ-ಆತ್ಮಜ್ಞನಾದ,ದಾಂತಃ-ಅಂತರಿಂದ್ರಿಯನಿಗ್ರಹವುಳ್ಳವನಾದ,ತಪಸ್ವೀ-ಕೃಛ್ರಚಾಂದ್ರಾಯಣಾದಿತಪಸ್ಸಂಪನ್ನನಾದ, ನಿರ್ಜಿತ-ಜಯಿಸಲ್ಪಟ್ಟ,ಇಂದ್ರಿಯಃ-ಚಕ್ಷುರಾದಿಇಂದ್ರಿಯಗಳುಳ್ಳವನಾದ,ವೇದಜ್ಞಃ-ವೇದವನ್ನು ಕಲಿತಿರುವವನಾದ,ಧರ್ಮಕೃತ್-ಧರ್ಮಗಳನ್ನು ಮಾಡುವವನಾದ,ಸಾತ್ವಿಕಃ-ಸತ್ವಗುಣವುಳ್ಳವನಾದವನು, ದೇವಯೊನಿತಾಂ-ದೇವತ್ವವನ್ನು, ಯಾತಿ-ಹೊಂದುತ್ತಾನೆ||ತಾ||ಪರಿಶುದ್ಧನಾಗಿಯೂ,ಅಂತರಿಂದ್ರಿಯ ಬಹಿರಿಂದ್ರಿಯ ನಿಗ್ರಹವುಳ್ಳವನಾಗಿಯೂ,ಏಕಭುಕ್ತನಕ್ತಾಶನಾದಿ ವ್ರತಗಳುಳ್ಳವನಾಗಿಯೂ, ವೇದವನ್ನು ತಿಳಿದವನಾಗಿಯೂ, ಧರ್ಮವನ್ನು ಮಾಡುವವನಾಗಿಯೂ ಆತ್ಮಜ್ಞನಾಗಿಯೂ, ಇರುವ,ಸಾತ್ವಿಕನಾದವನು,ದೇವತ್ವವನ್ನು ಪಡೆಯುತ್ತಾನೆ|| ||೨೬||

ಸತ್ಕಾರ್ಯೇಷುನಿರತಃವಿಷಯಾದಿಷುಲಂಪಟಃ।ರಾಜಸಸ್ತು ಮ
ನುಷ್ಯೇಷುಮೃತೋಜನ್ಮಸಮಾಪ್ನುಯಾತ್॥೩೨॥ ನಿದ್ರಾ
ರತೋನಾಸ್ತಿಕಶ್ಚಕ್ರೂರೋಲುಬ್ಧಶ್ಚಯಾಚಕಃ । ಪ್ರಮಾ
ದವಾನ್ಭಿನ್ನವೃತ್ತಃ ತಿರ್ಯಗ್ಜನ್ಮಸಮಾಪ್ನುಯಾತ್ ॥೩೪॥
ತಮೋರಜಾಭ್ಯಾಂ ಸಂಯುಕ್ತೋದುಷ್ಟೈರ್ಭಾವೈಶ್ಚಸಂ
ಯುತಃ । ಪದೇಪದೇಭುವಿನರಃಸಂಸಾರಂಚಾಧಿಗಚ್ಛತಿ॥೩೫॥
ಯಾದೃಶೇನ ಗುಣೇನೈವವರ್ತತೇ ಭುವಿಮಾನವಃ । ತಾದೃ

ಅಸತ್ಕಾರ್ಯೇಷು-ಮಾಡಬಾರದ ಕೆಲಸಗಳಲ್ಲಿ ನಿರತಃ-ಆಸಕ್ತನಾದ, ವಿಷಯಾದಿಷು-ಸ್ರಕ್ಚಂದನವನಿತಾದಿ ಭೋಗಗಳಲ್ಲಿ, ಲಂಪಟಃ-ಆಸಕ್ತನಾದ, ರಾಜಸಃ-ರಜೋಗುಣಪ್ರಧಾನನಾದ ಮನುಷ್ಯನು, ಮೃತಃ-ಸತ್ತವನಾಗಿ,, ಮನುಷ್ಯೇಷು-ಮನುಜರಲ್ಲಿ, ಜನ್ಮ-ಹುಟ್ಟನ್ನು, ಸಮಾಪ್ನುಯಾತ್-ಹೊಂದುವನು. ॥ತಾ॥ ಅಯೋಗ್ಯಕಾರ್ಯಗಳಲ್ಲಿ ನಿರತನಾಗಿಯೂ, ಸ್ರಕ್ಚಂದನವನಿತಾದಿ ಭೋಗಪರನಾದ ರಾಜಸ ಗುಣದವನು ಸತ್ತಬಳಿಕ, ಮನುಷ್ಯರಲ್ಲಿ ಹುಟ್ಟುತ್ತಾನೆ ॥ ॥೩೨॥

ನಿದ್ರಾರತಃ-ಹಗಲು ನಿದ್ದೆಯನ್ನು ಮಾಡುವವನು, ನಾಸ್ತಿಕಶ್ಚ-ದೇವರಿಲ್ಲವೆಂದು ನಂಬಿರುವವನು, ಕ್ರೂರಃ-ಕಠಿನನು, ಲುಬ್ಧಃ-ಕೃಪಣನು, ಯಾಚಕಃ-ಬಹುಕಡೆಯಲ್ಲಿ ಯಾಚನೆ ಮಾಡುವವನು, ಪ್ರಮಾದವಾನ್-ದುರ್ಗತಿಗೆ ಭಯಪಡದೆ ಎಚ್ಚರವಿಲ್ಲದವನು, ಭಿನ್ನವೃತ್ತಃ-ತನ್ನ ವರ್ಣಾಶ್ರಮೋಚಿತವ್ಯಾಪಾರವನ್ನು ಬಿಟ್ಟು ಇರುವವನು,ತಿರ್ಯಗ್ಜನ್ಮ-ಮೃಗಾದಿ ಜನ್ಮವನ್ನು, ಸಮಾಪ್ನುಯಾತ್-ಹೊಂದುವನು ॥ ॥೩೪॥

ತಮೋರಜಾಭ್ಯಾಂ-ತಮೋಗುಣ ರಜೋಗುಣಗಳಿಂದ, ಸಂಯುಕ್ತಃ-ಕೂಡಿರುವವನಾದ, ದುಷ್ಟೈಃ-ಕೆಟ್ಟವುಗಳಾದ, ಭಾವೈಃ-ಅಭಿಪ್ರಾಯಗಳಿಂದ,ಸಂಯುತಃ-ಕೂಡಿದವನಾದ,ನರಃ-ಮನುಷ್ಯನು, ಪದೇ ಪದೇ-ಆಗಾಗ್ಯೆ, ಭುವಿ-ಭೂಲೋಕದಲ್ಲಿ,ಸಂಸಾರಂ-ಸಂಸೃತಿಯನ್ನು, ಅಧಿಗಚ್ಛತಿ-ಹೊಂದುವನು ॥ ॥೩೫॥

ಮಾನವಃ-ಮನುಷ್ಯನು, ಯಾದೃಶೇನ-[illegible], ಗುಣ[illegible]-ಗುಣದಿಂದ, ಭುವಿ-ಭೂಮಿಯಲ್ಲಿ, ವರ್ತತೇ-[illegible] ತಾದೃ[illegible]-ಅಂ

ಶೇನಗುಣೇನೈವಯುಕ್ತೋಜನ್ಮ ಸಮಾಪ್ನುಯಾತ್ ॥ ೪೦॥
ಜ್ಞಾನಂ ಸತ್ವಂತಮೋಜ್ಞಾನಂ ರಾಗೋದ್ವೇಷೋರಜಸ್ಮೃ
ತಂ|ಸರ್ವಭೂತಾಶ್ರಿತಂಚೈತೈರ್ವ್ಯಾಪ್ತಂಭೂತಾತ್ಮಕಂವ
ಪುಃ ॥೪೦॥ ದೇವತ್ವಂಚಮನುಷ್ಯತ್ವಂತಿರ್ಯಕ್ತ್ವಂಚನರಾ
ಕ್ಕ್ರಮಾತ್|ಗುಣಾನಾಂಯಾಂತಿಬಹುಶಃಗತಿಸ್ತೇಷಾಂತ್ರಿ
ಧಾಸ್ಮೃತಾ ॥ ॥೪೨॥

ಧಾದ್ವಾದ. ಗುಣೇನ-ಗುಣದಿಂದಲೇ,ಯುಕ್ತಃ-ಕೂಡಿದವನಾಗಿ, ಜನ್ಮ-ಉತ್ಪತ್ತಿಯನ್ನು, ಸಮಾಪ್ನುಯಾತ್-ಹೊಂದುವನು ॥ ॥೪೦॥

ಸತ್ವಂ-ಸತ್ವಗುಣವು,ಜ್ಞಾನಂ-ಜ್ಞಾನರೂಪವಾಗಿರುವದು,ರಜಃ-ರಜೋಗುಣವು, ರಾಗಃ-ಅನುರಾಗರೂಪವಾಗಿರುವದು,ದ್ವೇಷಃ-ವಿರೋಧರೂಪವಾಗಿರುವುದು,ತಮಃ-ತಮೋಗುಣವು, ಅಜ್ಞಾನಂ-ಅಜ್ಞಾನರೂಪವು,(ಎಂಬದಾಗಿ)ಸ್ಮೃತಂ-ಹೇಳಲ್ಪಡುವುದು,ಭೂತಾತ್ಮಕಂ-ಪೃಥಿವ್ಯಪ್ತೇಜೋವಾಯ್ವಾಕಾಶಾದಿಪಂಚಭೂತಗಳಪರಿಣಾಮರೂಪವಾದ,ವಪುಃ-ಶರೀರವು,ಸರ್ವ-ಸಮಸ್ತಗಳಾದ,ಭೂತ-ಪ್ರಾಣಿಗಳಿಂದ,ಆಶ್ರಿತಂ-ಆಶ್ರಯಿಸಲ್ಪಟ್ಟದ್ದು,ಏತೈಃ-ಈಗುಣಗಳಿಂದ, ವ್ಯಾಪ್ತಂ-ವ್ಯಾಪಿಸಿರುವದು. ॥ತಾ॥ ಸತ್ವಗುಣವೇ ಜ್ಞಾನವು, ರಜೋಗುಣವು ದ್ವೇಷವು, ಅನುರಾಗವು,ತಮೋಗುಣವೇ ಅಜ್ಞಾನವು, ಇವುಗಳಿಂದಲೂ,ಪಂಚಭೂತಗಳಿಂದಲೂ ವ್ಯಾಪಿಸಿರುವದೇಪಾಂಚಭೌತಿಕದೇಹವೆನಿಸುವದು ॥೪೦॥

ನರಾಃ-ಮನುಷ್ಯರು, ಗುಣಾನಾಂ-ಸತ್ವ ರಜಸ್ತಮೋಗುಣಗಳ, ಕ್ರಮಾತ್-ಅನುಕ್ರಮದಿಂದ,ದೇವತ್ವಂ-ಸತ್ವಗುಣದಿಂದ ದೇವತಾಭಾವವನ್ನು, ಮನುಷ್ಯತ್ವಂ-ರಜೋಗುಣದಿಂದ,ಮನುಷ್ಯಭಾವವನ್ನು,ತಿರ್ಯಕ್ತ್ವಂಚ-ತಮೋಗುಣದಿಂದ ಪಶು, ಪಕ್ಷಿ,ಮೃಗತ್ವವನ್ನು,ಬಹುಶಃ-ಅನೇಕ ತರವಾಗಿ,ಯಾಂತಿ-ಪಡೆಯುತ್ತಾರೆ, ತೇಷಾಂ-ಆ ಗುಣಗಳ, ಗತಿಃ-ಗತಿಯು,ತ್ರಿಧಾ-ಮೂರು ಪ್ರಕಾರವಾಗಿ, ಸ್ಮೃತಾ-ಹೇಳಲ್ಪಡುವದು. ॥ತಾ॥ ಸತ್ವಗುಣದಿಂದ ದೇವತ್ವವು,ರಜೋಗುಣದಿಂದ ಮನುಷ್ಯಜನ್ಮವು, ತಮೋಗುಣದಿಂದ ಪಶು,ಪಕ್ಷಿ, ಮೃಗಾದಿ ಜನ್ಮವೂ ಉಂಟಾಗುವದು ॥ ॥೪೨॥

ಉತ್ತಮಾಮಧ್ಯಮಾಶ್ಚಾತ್ರಾಧಮೇತಿತ್ರಿಧಾ ಮತಾಃ । ಗು
ಣಭೇದೇನಚತಿಸ್ರೋಗತಯಸ್ತಾನಿಶಾಮಯ॥ ॥೪೩॥

ಇತಿ ಶ್ರೀ ಭವಿಷ್ಯೋತ್ತರಪುರಾಣೇವೆಂಕಟೇಶಮಹಾತ್ಮ್ಯೇ ಉತ್ತರಭಾಗೇ ಕರ್ಮವಿಪಾಕಕಥನಂನಾಮ ಪಂಚಮೋಽಧ್ಯಾಯಃ॥

---

ಶ್ರೀನಿವಾಸಃ॥ ಅವ್ಯಕ್ತಂಚಮಹದ್ಧರ್ಮಃ ಬ್ರಹ್ಮಾವಿಶ್ವಸೃಜಸ್ತಥಾ । ಸಾತ್ವಿಕೀಮುತ್ತಮಾಂಬ್ರಹ್ಮನ್ಗತಿಂವಿಂದ್ಯಾ

ತಾಃ-ಆ ಗತಿಯು, ಉತ್ತಮಾ, ಮಧ್ಯಮಾ, ಅಧಮಾ, ಉತ್ತಮ, ಮಧ್ಯಮಾಧಮಗಳು, ಇತಿ-ಎಂಬದಾಗಿ, ತ್ರಿಧಾ-ಮೂರು ವಿಧವು, ಗುಣಭೇದನ-ಸಾತ್ವಿಕಾದಿ ಗುಣಭೇದದಿಂದ, ಗತಯಃ-ಗತಿಗಳು, ತ್ರಿಧಾ-ಮೂರು ವಿಧಗಳಾಗಿ, ಮತಾ-ಸಮ್ಮತವಾಗಿರುವುದು, ತಾಃ-ಆ, ಸಾತ್ವಿಕದ ಉತ್ತಮಗತಿ, ಸಾತ್ವಿಕದ ಮಧ್ಯಮಗತಿ. ಸಾತ್ವಿಕದ ಅಧಮಗತಿಗಳನ್ನು, ರಾಜಸೋತ್ತಮ, ರಾಜಸ ಮಧ್ಯಮ, ರಾಜಸ ಅಧಮಗತಿಗಳನ್ನು, ತಾಮಸೋತ್ತಮ, ತಾಮಸ ಮಧ್ಯಮ, ತಾಮಸದ ಅಧಮಗತಿಗಳನ್ನು, ನಿಶಾಮಯ-ಕೇಳು ॥ ॥೪೩॥

ಇಂತು ಭವಿಷ್ಯೋತ್ತರಪುರಾಣದೊಳು ವೆಂಕಟೇಶ
ಮಹಾತ್ಮ್ಯೆಯ ಉತ್ತರಭಾಗದಲ್ಲಿ ಕರ್ಮವಿ
ಪಾಕಕಥನವೆಂಬ ಐದನೇ
ಅಧ್ಯಾಯವು ಮುಗಿದುದು.

---

ಶ್ರೀನಿವಾಸೋವಾಚ-ಶ್ರೀನಿವಾಸನು ಹೇಳುತ್ತಲಿದ್ದಾನೆ,ಅವ್ಯಕ್ತಂ-ಪ್ರಕೃತಿಯು,ಮಹತ್-ಮಹತ್ತತ್ವವು, ಧರ್ಮಃ-ಧರ್ಮದೇವತೆಯು, ಬ್ರಹ್ಮ-ಚತುರ್ಮುಖನು, ತಥಾ-ಹಾಗೆ, ವಿಶ್ವಸೃಜಃ-ಸೃಷ್ಟಿಕರ್ತರಾದ, ೧. ಮರೀಚಿ. ೨. ಅತ್ರಿ. ೩. ಅಂಗಿರಸ್ಸು. ೪. ಪುಲಸ್ತ್ಯ. ೫.ಪುಲಹ. ೬. ಕ್ರತು. ೭. ದಕ್ಷ. ೮. ವಸಿಷ್ಠ. ೯. ಭೃಗು. ಎಂಬ ಪ್ರಜೇಶ್ವರರು, ಇವರುಗಳು,ಮುನೀಶ್ವರ-ಋಷಿಶ್ರೇಷ್ಠನಾದ,ಬ್ರಹ್ಮನ್-ಬ್ರಾಹ್ಮಣನಾದ, ವೈಖಾನಸಮುನಿಯೇ, ಉತ್ತಮಾಂ-ಶ್ರೇಷ್ಠವಾದ, ಸಾತ್ವಿಕೀಂ-

ಸ್ಸ್ರ್ನೀಶ್ವರ ॥೧॥ ಋಷಯಶ್ಚೈವಯಜ್ವಾನಃವೇದಾದೇವಾ
ಶ್ಚವತ್ಸರಾಃ।ಪಿತರಶ್ಚೈವಸಾಧ್ಯಾಶ್ಚಸಾತ್ವಿಕೀಮಧ್ಯಮಾ
ಗತಿಃ॥೨॥ ಯತಯಸ್ತಾಪಸಾವಿಪ್ರಾಃತಥಾವೈಮಾನಿಕಾಗ
ಣಾಃ।ನಕ್ಷತ್ರಾಣಿಚದೈತ್ಯಾಶ್ಚಸಾತ್ವಕೀಹ್ಯಧಮಾಗತಿಃ॥೩॥

ಸತ್ವಗುಣಪ್ರಧಾನವಾದ, ಗತಿಂ–ಗತಿಯನ್ನಾಗಿ, ವಿಂದ್ಯಾತ್–ತಿಳಿಯು ವವರಾಗಬೇಕು. ॥ತಾ॥ ಎಲೈ ವೈಖಾನಸಮುನಿಯೇ, ಅವ್ಯಕ್ತಮ ಹದಹಂಕಾರ ಧರ್ಮದೇವತೆಗಳು, ಚತುರ್ಮುಖನು, ಪ್ರಜೇಶ್ವರರು, ಇವ ರುಗಳನ್ನು ಹೊಂದುವದು,ಸತ್ವಗುಣದ ಉತ್ತಮಗತಿಯೆನಿಸುವದು॥೧॥

ಋಷಯಃ–ಕಶ್ಯಪಾದಿ ಮುನಿಗಳು, ಯಜ್ವಾನಃ–ಯಾಗವನ್ನು ಮಾ ಡಿದವರು, ವೇದಾಶ್ಚ–ಋಗ್ಯಜುಸ್ಸಾಮಾದಿ ವೇದಗಳು, ದೇವಾಶ್ಚ–ಇಂ ದ್ರಾದಿದೇವತೆಗಳು, ವತ್ಸರಾಃ–ವರ್ಷಾಭಿಮಾನದೇವತೆಗಳು, ಪಿತರಃ–ಪಿ ತೃದೇವತೆಗಳು,ಸಾಧ್ಯಾಶ್ಚ–ಸಾಧ್ಯರೆಂಬ ದೇವಯೋನಿಯವರು, ಇವರು ಗಳನ್ನು ಹೊಂದುವದು, ಸಾತ್ವಿಕೀ–ಸತ್ವಗುಣಪ್ರಧಾನವಾದ, ಮಧ್ಯ ಮಾ–ಮಧ್ಯಮವೆನಿಸುವ, ಗತಿಃ–ಗತಿಯೆಂದು, ವಿಂದ್ಯಾತ್–ತಿಳಿಯಬೇ ಕು. ॥ತಾ॥ ಋಷಿಗಳು ಯಜ್ಞಮಾಡಿದವರು ವೇದಗಳು ದೇವತೆಗ ಳು, ಸಂವತ್ಸರಾಭಿಮಾನದೇವತೆಗಳು, ಸಾಧ್ಯರು ಪಿತೃದೇವತೆಗಳು, ಇ ವರುಗಳನ್ನು ಹೊಂದುವದು, ಸತ್ವಗುಣದ ಮಧ್ಯಮ ಗತಿಯಾಗಿರು ವದು ॥ ॥೨॥

ಯತಯಃ–ಸನ್ಯಾಸಿಗಳು, ತಾಪಸಾಃ–ತಪಸ್ವಿಗಳು. ವಿಪ್ರಾಃ–ಬ್ರಾ ಹ್ಮಣರು, ತಥಾ–ಹಾಗೆ, ವೈಮಾನಿಕಾಃ–ವಿಮಾನದಿಂದ ಸಂಚರಿಸುವ, ಗಣಾಃ–ಪ್ರಮಥಾದಿ ಗಣಗಳು, ದೈತ್ಯಾಶ್ಚ–ದಿತಿಯ ಮಕ್ಕಳಾದ ರಾಕ್ಷ ಸರು, ನಕ್ಷತ್ರಾಣಿ–ನಕ್ಷತ್ರಗಳು, ಇವುಗಳನ್ನು ಹೊಂದುವದು, ಸಾ ತ್ವಿಕೀಸತ್ವಗುಣಪ್ರದಾನವಾದ, ಅಧಮಾ–ಅಧಮಪರ್ಯಾಯವಾದ, ಗ ತಿಃ–ಗತಿಯು. ॥ತಾ॥ ಸನ್ಯಾಸಿಗಳು, ತಪಸ್ವಿಗಳು,ಬ್ರಾಹ್ಮಣರು,ವಿಮಾ ನದಿಂದ ಸಂಚಾರಮಾಡುವಂಥಾ ಪ್ರಮಥಾದಿಗಣಗಳು, ನಕ್ಷತ್ರಗಳು, ರಾಕ್ಷಸರು ಇವುಗಳನ್ನು ಹೊಂದುವದು ಸಾತ್ವಿಕವಾದ ಅಧಮಗತಿಯೆ ನಿಸುವುದು॥ ॥೩॥

ಯಕ್ಷಗುಹ್ಯಕಗಂಧರ್ವಾಃ ತಥೈವಾಪ್ಸರಸಾಂಗಣಾಃ । ವಿವಿಧಾನುಚರಾಶ್ಚೈವರಾಜಸೇಷೂತ್ತಮಾಗತಿಃ ॥೪॥ ಕ್ಷತ್ರಿಯಾಶ್ಚೈವರಾಜಾನಃ ನೃಪಾಣಾಂಚಪುರೋಹಿತಾಃ। ವಾದಯುದ್ಧಪ್ರಧಾನಾಶ್ಚ ಮಧ್ಯಮಾರಾಜಸೀಗತಿಃ ॥೫॥ ಝಲ್ಲಾಮಲ್ಲಾನಟಾಶ್ಚೈವ ತಥಾಶಸ್ತ್ರೋಪಜೀವಿನಃ। ದ್ಯೂತಪಾನರತಾಶ್ಚೈವ ಅಧಮಾರಾಜಸೀಗತಿಃ ॥೬॥ ಚಾರಣಾಶ್ಚಸುಪರ್ಣಾಶ್ಚ ಮನುಜಾಡಾಂಭಿಕಾಸ್ಸದಾ। ರಕ್ಷಾಂಸಿಚಪಿ

ಯಕ್ಷಗುಹ್ಯಕಗಂಧರ್ವಾಃ-ಯಕ್ಷಗುಹ್ಯಕ ಗಂಧರ್ವರೆಂಬ ದೇವಯೋನಿವಿಶೇಷದವರು, ತಥೈವ-ಹಾಗೆಯೇ, ಅಪ್ಸರಸಾಂ-ಅಪ್ಸರಸ್ತ್ರೀರುಗಳ, ಗಣಾಃ-ಸಮೂಹಗಳು. ವಿವಿಧಾನುಚರಾಶ್ಚೈವ-ಅವರುಗಳಿಗೆ ಸೇವೆಯನ್ನು ಮಾಡುವ ಬಗೆಬಗೆಯಾದ ಪರಿಚಾರಕಜನರು, ರಾಜಸೇಷು ರಜೋಗುಣವವರಲ್ಲಿ, ಉತ್ತಮಾಗತಿಃ-ಉತ್ತಮ ಗತಿಯಾಗಿರುವರು ॥ ॥೪॥

ಕ್ಷತ್ರಿಯಾಃ-ರಾಜವಂಶದವರು, ರಾಜಾನಶ್ಚ-ದೊರೆಗಳು, ನೃಪಾಣಾಂ-ದೊರೆಗಳಿಗೆ, ಪುರೋಹಿತಾಃ-ಯಾಜಕರು, ವಾದ-ವ್ಯವಹಾರದಲ್ಲಿಯೂ, ಪ್ರಸಂಗದಲ್ಲಿಯೂ, ಯುದ್ಧ-ಕಾಳಗದಲ್ಲಿಯೂ, ಪ್ರಧಾನಾಃ-ಮುಖಂಡರಾದವರು, ಇವರುಗಳು, ರಾಜಸೀ-ರಜೋಗುಣಸಂಬಂಧವಾದ, ಮಧ್ಯಮಾ-ಮಧ್ಯಮವೆನಿಸುವ, ಗತಿಃ-ಗತಿಯು ॥ ॥೫॥

ಝಲ್ಲಾಃ-ಚರ್ಮಜೀವಿಗಳು, ಮಲ್ಲಾಃ-ಜಟ್ಟಿಗಳು, ನಟಾಃ-ನಟುವರು, ತಥಾ-ಹಾಗೆ, ಶಸ್ತ್ರೋಪಜೀವಿನಃ-ಆಯುಧದಿಂದ ಜೀವಿಸುವವರು, ಅಂದರೆ [illegible]ನೆಯಲ್ಲಿರುವ ಶೂರರು, ದ್ಯೂತ-ಜೂಜಿನಲ್ಲಿ, ಪಾನ-ಮದ್ಯಾದಿಗಳನ್ನು ಕುಡಿಯುವದರಲ್ಲಿ, ರತಾಃ-ನಿರತರಾದವರು, ಇವರುಗಳೆಲ್ಲಾ, ರಾಜಸೀ-ರಜೋಗುಣಸಂಬಂಧವಾದ, ಅಧಮಾ-ಅಧಮವೆಂಬ, ಗತಿಃ-ಗತಿಯು ॥ ॥೬॥

ಚಾರಣಾಃ-ಚಾರಣರೆಂಬುವರು, ಸುಪರ್ಣಾಶ್ಚ-ಗರುಡಪಕ್ಷಿಗಳು, ಸದಾ-ಯಾವಾಗಲೂ, ಡಾಂಭಿಕಾಃ-ಡಂಭವೃತ್ತಿಪರರಾದ, ಮನುಜಾಃ-ಮನುಷ್ಯರು, ರಕ್ಷಾಂಸಿ-ರಾಕ್ಷಸರು, ಪಿಶಾಚಾಃ-ದೆವ್ವಗಳು, ತಾಮಸೇಷು-

ಶಾಚಾಶ್ಚ ತಾಮಸೀಷೂತ್ತಮಾಗತಿಃ॥೭॥ಗಜಾಶ್ಚೈವತುರಂ
ಗಾಶ್ಚ ಶೂದ್ರಾ ಮ್ಲೇಛ್ಛಾಶ್ಚ ಗರ್ಹಿತಾಃ।ಕೋಲಶಾರ್ದೂ
ಲಸಿಹ್ಮಾಶ್ಚ ಮಧ್ಯಮಾತಾಮಸೀಗತಿಃ ॥೮॥ ಸ್ಥಾವರಾಃಕ್ರಿ
ಮಿಕೀಟಾಶ್ಚ ಮತ್ಸ್ಯಾಃಸರ್ಪಾಸ್ಸಕಛ್ಛಪಾಃ।ಪಶವಶ್ಚ
ಮೃಗಾಶ್ಚೈವಅಧಮಾತಾಮಸೀಗತಿಃ॥೯॥ ಅಸಹಿಷ್ಣುತಾ
ನ್ಯಗುಣಶ್ರವಣೇಕಾರಣಂವಿನಾ।ಬ್ರಹ್ಮಸ್ವತ್ವಾಪಹಾರಶ್ಚ ಪ
ರದಾರರತಿಸ್ತಥಾ ॥೧೦॥ ಸ್ವಕರ್ಮಭಿಶ್ಚ್ಯುತಿಶ್ಚಾಪಿದ್ರೋಹಶ್ಚ

ತಮೋಗುಣದವರಲ್ಲಿ,ಉತ್ತಮಾ–ಉತ್ತಮವೆಂಬ,ಗತಿಃ–ಗತಿಯು ॥೭॥

ಗಜಾಃ–ಆನೆಗಳು, ತುರಂಗಾಶ್ಚ–ಕುದುರೆಗಳು, ಶೂದ್ರಾಃ–ಒಕ್ಕಲಿಗರು, ಗರ್ಹಿತಾಃ–ಉತ್ತಮವರ್ಣದಲ್ಲಿ ಹುಟ್ಟಿನಿಂದೆಯನ್ನು ಪಡೆದವರು, ಮ್ಲೇಚ್ಛಾಃ–ತುರುಷ್ಕರು,ಕೋಲಶಾರ್ದೂಲ ಸಿಹ್ಮಾಶ್ಚ–ಹಂದಿ ಹುಲಿಸಿಹ್ಮಗಳು,ತಾಮಸೀ–ತಮೋಗುಣ ಪ್ರಧಾನವಾದ,ಮಧ್ಯಮಾ–ಮಧ್ಯಮವೆಂಬ, ಗತಿ–ಗತಿಯು ॥ ॥೮॥

ಸ್ಥಾವರಾಃ–ಪರ್ವತ ವೃಕ್ಷಗಳು, ಕ್ರಿಮಿಕೀಟಾಶ್ಚ– ಚೇಳುಗುಂಗುರು ಮುಂತಾದವುಗಳು, ಸಕಛ್ಛಪಾಃ–ಮೊಸಳೆಗಳಿಂದ ಕೂಡಿದ,ಮತ್ಸ್ಯಾಃ–ಮೀನುಗಳು, ಸರ್ಪಾಃ–ಹಾವುಗಳು, ಪಶವಃ–ಹಸು ಎಮ್ಮೆ ಆಡು ಮುಂತಾದವುಗಳು, ಮೃಗಾಃ–ಹುಲ್ಲೆ ದುಪ್ಪಿ ಖಡ್ಗ ಮೃಗಾದಿಗಳು, ತಾಮಸೀ–ತಮೋಗುಣ ಪ್ರಧಾನವಾದ, ಅಧಮ–ಅಧಮವೆನ್ನುವ, ಗತಿಃ–ಗತಿಯು ॥ ॥೯॥

ಅನ್ಯ–ಇತರ ಮನುಷ್ಯನ, ಗುಣ–ಸದ್ಗುಣಗಳ, ಅಂದರೆ ಶೌರ್ಯೋದಾರ್ಯಾದಿ ಗುಣಗಳ, ಶ್ರವಣೇ–ಕೇಳುವಿಕೆಯಲ್ಲಿ, ಕಾರಣಂ–ನಿಮಿತ್ತವು, ವಿನಾ–ಇಲ್ಲದೆ, ಅಸಹಿಷ್ಣುತಾ–ಸಹನವಿಲ್ಲದೆ ಇರೋಣವು, ಬ್ರಹ್ಮ–ಬ್ರಾಹ್ಮಣನ, ಸ್ವತ್ವ–ಸ್ವತ್ತನ್ನು, ಅಪಹಾರಶ್ಚ–ಅಪಹರಿಸುವಿಕೆಯು, ತಥಾ–ಹಾಗೆ, ಪರದಾರ–ಅನ್ಯರ ಹೆಂಡರಲ್ಲಿ, ರತಿಃ–ಕ್ರೀಡೆಯು ॥೧೦॥

ಸ್ವಕರ್ಮಭಿಃ–ತಾನು ಮಾಡಬೇಕಾದ ನಿತ್ಯಕರ್ಮಗಳಿಂದ, ಚ್ಯುತಿಃ–ರಹಿತನಾಗಿರುವಿಕೆ, ಸ್ವಾಮಿಮಿತ್ರಯೋಃ–ತನ್ನ ಪ್ರಭುವಿಗೂ, ಸ್ನೇಹಿತನಿಗೂ, ದ್ರೋಹಃ–ಅಪರಾಧವನ್ನು ಮಾಡುವಿಕೆ, ಅಯಾಜ್ಯಯಾಜನಂ

ಸ್ಯಾಪಿಯಾಜಕೋ ಯಃ । ಅಯಾಜ್ಯಯಾಜನಂ ಚೈವಯಾ
ಜ್ಯಾನಾಂಚವಿಸರ್ಜನಂ ॥೧೧॥ ವಿರಾಗೋವಿಷ್ಣು ಧರ್ಮೇಷು
ನಾಸ್ತಿಕ್ಯಂಕ್ಷುದ್ರಕರ್ಮಚ । ಪ್ರಾಣಿನಾಂಹಿಂಸನಂನಿತ್ಯಂ
ದೇವಪಿತ್ರೋರ್ರ್ಯತರ್ಪಣಂ ॥೧೨॥ ಪರವಿತ್ತಾಪಹಾರಶ್ಚ
ರಾಜದಾರರತಿಸ್ತಥಾ ॥ ಪರಾಪವಾದ ಸಂತೋಷಃ ಪ್ರೇತ
ಜನ್ಮಕರಂಸ್ಮೃತಂ ॥೧೩॥ ಧನಾಶಯೈವವೃದ್ಧಾಯಕುಶೀ
ಲಾಯಕುರೂಪಿಣೇ । ಕನ್ಯಾಂದದಾತಿಯೋ ಮರ್ತ್ಯಃಸಪ್ರ

ಚಾಪಿ-ವೇದೋಕ್ತಕರ್ಮವನ್ನು ಮಾಡಿಸಬಾರದವರಿಗೆ ವೇದೋಕ್ತ ಕರ್ಮ ಗಳನ್ನು ಮಾಡಿಸೋಣವು,ಯಾಜ್ಯಾನಾಂ-ವೇದೋಕ್ತ ಕರ್ಮಗಳನ್ನು ಮಾಡಿಸಬೇಕಾದವರಿಗೆ ವಿಸರ್ಜನಂ-ಮಾಡಿಸದೇ ಹೋಗುವಿಕೆಯು ॥ ॥೧೧॥

ವಿಷ್ಣುಧರ್ಮೇಷು-ವಿಷ್ಣುಪ್ರೀತಿಕರವಾದ ಧರ್ಮಗಳಲ್ಲಿ, ವಿರಾಗಃ-ಮಾಡದೇ ಉದಾಸೀನತೆಯು, ನಾಸ್ತಿಕ್ಯಂ-ದೇವರೇ ಇಲ್ಲವೆಂದು ಹೇಳೋಣವು, ಕ್ಷುದ್ರಕರ್ಮಚ-ಕೊಲ್ಲುವದನ್ನು ಮಾಡುವದು, ಅಥವಾ ಮಾರಣಮಾಡುವದು, ನಿತ್ಯಂ-ಪ್ರತಿದಿನದಲ್ಲಿಯೂ, ಪ್ರಾಣಿನಾಂ-ಜೀವಿಗಳಿಗೆ, ಹಿಂಸನಂ-ಕೇಡುಮಾಡುವಿಕೆಯು, ದೇವಪಿತ್ರೋರ್ರಃ-ದೇವತೆಗಳಿಗೂ ಪಿತೃಗಳಿಗೂ, ಅತರ್ಪಣಂ-ತೃಪ್ತಿಯನ್ನು ಮಾಡದೇ ಇರೋಣವು॥ ॥೧೨॥

ಪರ-ಪರರ, ವಿತ್ತ-ಧನವನ್ನು, ಅಪಹಾರಶ್ಚ-ಕದಿಯುವಿಕೆಯು, ಅಥವಾ ಅಪಲಪಿಸುವಿಕೆಯು, ರಾಜದಾರ-ನೃಪಪತ್ನಿಯಲ್ಲಿ, ರತಿಃ-ಕ್ರೀಡೆಯು, ತಥಾ-ಹಾಗೆ, ಪರಾಪವಾದ-ಅನ್ಯರನ್ನು ನಿಂದಿಸುವದ್ದರಿಂದ, ಅನ್ಯರಿಗೆ ಅಪನಿಂದೆ ಬರುವದ್ದರಿಂದ, ಸಂತೋಷಃ-ಹರ್ಷಿಸುವಿಕೆಯು, ಇದು-ಎಲ್ಲಾ,ಪ್ರೇತಜನ್ಮ-ಪೈಶಾಚಿಕ ಜನ್ಮವನ್ನು, ಕರಂ-ಉಂಟುಮಾಡತಕ್ಕದ್ದು, ಎಂಬದಾಗಿ, ಸ್ಮೃತಂ-ಹೇಳಲ್ಪಡುವುದು ॥ ॥೧೩॥

ಧನಾಶಯೈವ-ದ್ರವ್ಯಾಪೇಕ್ಷೆಯಿಂದಲೆ,ವೃದ್ಧಾಯ-ಮುದುಕನಾದವನಿಗೆ, ಕುಶೀಲಾಯ-ಕುತ್ಸಿತಸ್ವಭಾವವುಳ್ಳವನಾದ, ಕುರೂಪಿಣೇ-ವಿಕಾರರೂಪವುಳ್ಳವನಾದ,ಮನುಷ್ಯನಿಗೆ, ಯಃ-ಯಾವ,ಮರ್ತ್ಯಃ-ಮನುಷ್ಯನು, ಕನ್ಯಾಂ-ಹುಡಿಗಿಯನ್ನು, ದದಾತಿ-ಮದಿವೆಯನ್ನು ಮಾಡಿಕೊಡುತ್ತಾನೋ, ಸಃ-ಆಮನುಷ್ಯನು, ಸ್ಫುಟಂ-ವ್ಯಕ್ತವಾಗಿ, ಪ್ರೇತಃ-ಪೈ

ತೋಜಾಯತೆಸ್ಪೃಹಃ||೧೪||ದೇವಸ್ತ್ರೀಗುರುವಿತ್ತಾನಿಗೃಹೀ
ತ್ವಾನಪ್ರಯಚ್ಛತಿ | ಸಪ್ರೇತೋಜಾಯತೆ ಮರ್ತ್ಯಃಬ್ರಾ
ಹ್ಮಣಾನಾಂಧನಂಹರಃ ||೧೫|| ದ್ವಿಜಾಯದೀಯಮಾನಸ್ಯ
ಯಸ್ತುವಿಘ್ನಂಸಮಾಚರೆತ್ | ಮಾತರಂಪಿತರಂವೃದ್ಧಂ
ಜ್ಞಾತಿಂಸಾಧುಜನಂಸುತಂ | ಲೊಭಾತ್ತ್ಯಜತಿಯೊಮೋ

ಶಾಚ ಜನ್ಮವುಳ್ಳವನು, ಜಾಯತೆ-ಆಗುತ್ತಾನೆ ||ತಾ|| ಯಾವಮನು
ಷ್ಯನು,ಕುರೂಪಿಯಾಗಿಯೂಕುತ್ಸಿತನಾಗಿಯೂ,ಮುದುಕನಾಗಿಯೂ
ಇರುವವನಿಗೆ ಧನಾಶೆಯಿಂದ ಮಗಳನ್ನುಕೊಟ್ಟು ಮದುವೆಯನ್ನು ಮಾ
ಡುತ್ತಾನೋ ಅವನುಪಿಶಾಚವಾಗುವನು|| ||೧೪||
ಯಃ-ಯಾವ ಮನುಷ್ಯನು, ದೇವಸ್ತ್ರೀ ಗುರುವಿತ್ತಾನಿ-ದೇವತೆಗ
ಳ-ಹೆಂಗಸರ ಗುರುಗಳ, ಹಣವನ್ನು, ಗೃಹೀತ್ವಾ-ತೆಗೆದುಕೊಂಡು, ನ
ಪ್ರಯಚ್ಛತಿ-ಕೊಡುವದಿಲ್ಲ, ಸಃ-ಅವನು, ಬ್ರಾಹ್ಮಣಾನಾಂ-ಬ್ರಾಹ್ಮ
ಣರ, ಧನಂ-ಹಣವನ್ನು, ಹರಃ-ಅಪಹರಿಸಿದವನು, ಪ್ರೇತಃ-ಪಿಶಾಚಜ
ನ್ಮವುಳ್ಳವನು, ಜಾಯತೆ-ಆಗುತ್ತಾನೆ ||ತಾ|| ದೇವರಿಗಾಗಿ ಗೊತ್ತು
ಮಾಡಿದ ದ್ರವ್ಯವನ್ನು ಗುರುವಿಗಾಗಿ ಗೊತ್ತುಮಾಡಿದ ದ್ರವ್ಯವನ್ನು
ಸ್ತ್ರೀರಿಗಾಗಿ ಗೊತ್ತುಮಾಡಿರುವ ದ್ರವ್ಯವನ್ನು, ಆಗಲೀ, ಅಥವಾ-ದೇವ
ಸ್ತ್ರೀಗುರುಗಳಿಂದ ಸಾಲವಾಗಿ ಪಡೆದ ದ್ರವ್ಯವನ್ನು, ಅಥವಾ-ದೇವಾ
ಲಯಗಳ ಮಠಗಳ, ಪತಿಸುತ ಹೀನರಾದ ಸ್ತ್ರೀರ ದ್ರವ್ಯವನ್ನು, ತೆಗೆ
ದುಕೊಂಡು, ಬ್ರಾಹ್ಮಣ ದ್ರವ್ಯವನ್ನು ಅಪಹರಿಸಿಕೊಂಡು ಯಾವಮ
ನುಷ್ಯನು ಪುನಃ-ಕೊಡುವದಿಲ್ಲವೊ ಅವನು ಪಿಶಾಚವಾಗುವನು|| ||೧೫||
ದ್ವಿಜಾಯ-ಬ್ರಾಹ್ಮಣನಿಗೆ, ದೀಯಮಾನಸ್ಯ-ಧನವನ್ನು ಕೊಡು
ತ್ತಿರುವವನಿಗೆ, ಯಸ್ತು-ಯಾವ ಮನುಷ್ಯನು, ವಿಘ್ನಂ-ಅಡ್ಡಿಯ
ನ್ನು, ಸಮಾಚರೇತ್-ಮಾಡುತ್ತಾನೋ, ಯಃ-ಯಾವ ಮನುಷ್ಯ
ನು, ಮಾತರಂ-ತಾಯಿಯನ್ನು, ವೃದ್ಧಂ-ಮುದುಕನಾದ, ಪಿತರಂ-ತಂ
ದೆಯನ್ನು, ಅಥವಾ ವೃದ್ಧಂ-ಮುದುಕನಾದ ಮನುಷ್ಯನನ್ನು, ಜ್ಞಾ
ತಿಂ-ತಮ್ಮ ವಂಶದವನನ್ನು. ಸಾಧುಜನಂ-ಸಾತ್ವಿಕನಾದವನನ್ನು,ಸು
ತಂ-ತನ್ನ ಮಗನನ್ನು, ಮೋಹಾತ್-ಅಜ್ಞಾನದಿಂದಲಾಗಲಿ, ಲೋ

ಹಾತ್ಸಪ್ರೇತೋಜಾಯತೇನರಃ ॥೧೬॥ ಶೂದ್ರಾನ್ನೇನೋದರ ಸ್ಥೇನಬ್ರಾಹ್ಮಣೋಮ್ರಿಯತೇಯದಿ । ತ್ರಿಕಾಲಜ್ಞೋಪಿವೇದ ವೇದೀತಥಾವೇದಷಡಂಗವಿತ್। ಚತುರ್ವೇದ್ಯಪಿಯೋವಿಪ್ರ ಸ್ಸಪ್ರೇತೋಜಾಯತೇಸದಾ ॥೧೭॥ ವೃದ್ಧಂಬಾಲಂಗುರುಂವಿ ಪ್ರಾನ್ಯೋವಮತ್ಯಭುನಕ್ತಿವೈ।ಕನ್ಯಾಂದದಾತಿಶುಲ್ಕೇನಸ

ಭಾತ್–ಲುಬ್ಧತೆಯಿಂದಾಗಲಿ, ಸಃ–ಅವನು, ಪ್ರೇತಃ–ಪಿಶಾಚಜನ್ಮದವ ನು, ಜಾಯತೇ–ಆಗುತ್ತಾನೆ. ॥ತಾ॥ ಬ್ರಾಹ್ಮಣನಿಗೆ ಕರವು ಕೊಡು ತ್ತಿರುವದನ್ನು ಕೊಡಬಾರದಂತೆ ಹೇಳಿ ವಿಘ್ನಮಾಡುವವನು, ತಂದೆತಾ ಯಿಗಳನ್ನು, ಮುಮುಕರನ್ನು, ಜ್ಞಾತಿಯನ್ನು, ಸತ್ಪುರುಷರನ್ನು, ಮ ಗನನ್ನು ಲೋಭದಿಂದಲೂ, ಅಜ್ಞಾನದಿಂದಲೂ ಬಿಡುವವನು, ಪಿಶಾಚಿ ನಾಗುವನು॥ ॥೧೬॥

ಬ್ರಾಹ್ಮಣಃ–ವಿಪ್ರನು, ಉದರಸ್ಥೇನ–ಹೊಟ್ಟೆಯಲ್ಲಿರುವ, ಶೂದ್ರಾ ನ್ನೇನ–ಶೂದ್ರನಿಂದ ಪರಿಗೃಹೀತವಾದ, ಆಮಶ್ರಾದ್ಧವ–ಅಕ್ಕಿಯಿಂದ ಮಾಡಲ್ಪಟ್ಟ ಅನ್ನದಿಂದ, ಅಂದರೆ ತಿಂದ ಶೂದ್ರಾನ್ನವು ಜೀರ್ಣವಾಗು ವದಕ್ಕಿಂತ ಮುಂಚೆಯೇ,ಮ್ರಿಯತೇಯದಿ–ಸತ್ತವನಾದರೆ, ಸವಿಪ್ರಃ– ಆ ದ್ವಿಜನು. ತ್ರಿಕಾಲಜ್ಞೋಪಿ–ಭೂತಭವಿಷ್ಯದ್ವರ್ತಮಾನ ಕಾಲಗಳ ಲ್ಲಿ ಆಗುವದನ್ನು ತಿಳಿದವನಾದಾಗ್ಯೂ, ವೇದವೇದೀ–ತಿಳಿಯತಕ್ಕದ್ದ ನ್ನು ತಿಳಿದವನಾದಾಗ್ಯೂ, ಧರ್ಮಜ್ಞೋಪಿ–ಧರ್ಮಗಳನ್ನು ತಿಳಿದವನಾಗಿ ದ್ದಾಗ್ಯೂ, ಷಡಂಗವಿತ್–ಶಿಕ್ಷಾವ್ಯಾಕರಣ ನಿರುಕ್ತಜ್ಯೋತಿಷ ಕಲ್ಪಗ ಳನ್ನು ತಿಳಿದವನಾದಾಗ್ಯೂ, ಚತುರ್ವೇದ್ಯಪಿ–ನಾಲ್ಕು ವೇದಗಳನ್ನು ತಿಳಿದವನಾಗಿದ್ದಾಗ್ಯೂ, ಸದಾ–ಯಾವಾಗಲೂ, ಪ್ರೇತಃ–ಪಿಶಾಚನು, ಜಾಯತೇ–ಆಗುತ್ತಾನೆ ॥ ॥೧೭॥

ವೃದ್ಧಂ–ಮುದುಕನನ್ನು, ಬಾಲಂ–ಹುಡುಗನನ್ನು, ಗುರುಂ–ಆಚಾ ರ್ಯನನ್ನು, ವಿಪ್ರಾನ್–ಬ್ರಾಹ್ಮಣರನ್ನು, ಯಃ–ಯಾವ ಮನುಷ್ಯನು, ಅವಮತ್ಯ–ತಿರಸ್ಕರಿಸಿ,ಭುನಕ್ತಿವೈ–ಭೋಜನವನ್ನು ಮಾಡುತ್ತಾನೋ, ಶುಲ್ಕೇನ–ಕ್ರಯದಿಂದ, ಕನ್ಯಾಂ–ಹುಡಿಗಿಯನ್ನು, ದದಾತಿ–ಕೊಡು ತ್ತಾನೋ, ಸಃನರಃ–ಆ ಮನುಷ್ಯನು, ಪ್ರೇತಃ–ಪಿಶಾಚನು, ಜಾಯ

ಪ್ರೇತೋಜಾಯತೇನರಃ ॥೧೪॥ ಸಂಯೋಗಂಪತಿತೈರ್ಗತ್ವಾ

ಪರಸ್ಯೈವಚಯೋಷಿತಂ ।ಅಪಹೃತ್ಯಚವಿಪ್ರಸ್ವಂಭವತಿಬ್ರ

ಹ್ಮರಾಕ್ಷಸಃ ॥೧೯॥ ಗುರುಂತ್ವಂಕೃತ್ಯಹುಂಕೃತ್ಯವಿಪ್ರಾ

ನ್ನಿರ್ಜಿತ್ಯವಾದತಃ।ಸ್ಮಶಾನೇಜಾಯತೇವೃಕ್ಷಃಕಂಕಗೃಧ್ರೋಪ

ಸೇವಿತಃ ॥ ೨೦ ॥ ಉಪಸ್ಥಿತೇವಿವಾಹೇತುಯಜ್ಞೇದಾನೇಮಹೋ

ತ್ಸವೇ । ಮೋಹಾತ್ಕರೋತಿಯೋವಿಘ್ನಂ ಸಮೃತೋಜಾಯತೇ

ಕ್ರಿಮಿಃ ॥ ೨೧ ॥ ಚಂಡಾಲಾದಂತ್ಯಜಾದ್ವಾಪಿಪ್ರತಿಗೃಹ್ಣ

ತೇ–ಆಗುತ್ತಾನೆ ॥ ॥೧೪॥

ಪತಿತೈಃ–ಜಾತಿ ಭ್ರಷ್ಟರಿಂದ, ಸಂಯೋಗಂ–ಸಂಪರ್ಕವನ್ನು, ಗತ್ವಾ–ಪಡದು, ಪರಸ್ಯ–ಅನ್ಯನ, ಯೋಷಿತಂ–ಹೆಂಗಸನ್ನು, ವಿಪ್ರಸ್ವಂ–ಬ್ರಾಹ್ಮಣಸ್ವತ್ತನ್ನು, ಅಪಹೃತ್ಯ–ಅಪಹರಿಸಿ, ಬ್ರಹ್ಮರಾಕ್ಷಸಃ–ಬ್ರಾಹ್ಮಣಪಿಶಾಚಿಯು, ಭವತಿ–ಆಗುತ್ತಾನೆ ॥ ॥೧೯॥

ಗುರುಂ–ಆಚಾರ್ಯನನ್ನು, ತಂದೆ ತಾಯಿಗಳನ್ನು, ತ್ವಂಕೃತ್ಯ–ನೀನೆಂಬದಾಗಿ ಹೇಳಿ ಧಿಕ್ಕರಿಸಿ,ವಾದತಃ–ಶಾಸ್ತ್ರಪ್ರಸಂಗದಿಂದ, ವಿಪ್ರಾನ್–ಬ್ರಾಹ್ಮಣರನ್ನು, ನಿರ್ಜಿತ್ಯ–ಗೆದ್ದು, ಸ್ಮಶಾನೆ ಹೆಣಗಳನ್ನು ಸುಡುವ ಸ್ಥಳದಲ್ಲಿ, ಕಂಕ–ಕರೀಹದ್ದುಗಳಿಂದ, ಗೃಧ್ರ–ಬಿಳೀ ರಣಹದ್ದುಗಳಿಂದ, ಉಪಸೇವಿತಃ–ಆಶ್ರಯಿಸಲ್ಪಟ್ಟ, ವೃಕ್ಷಃ–ಮರವು, ಜಾಯತೆ–ಆಗುತ್ತಾನೆ । ॥೨೦॥

ವಿವಾಹೆ–ಮದಿವೆಯು, ಯಜ್ಞೇ–ಯಾಗವು, ಮಹೋತ್ಸವೆ–ಅಭ್ಯುದಯೋತ್ಸವವು, ಉಪಸ್ಥಿತೆ–ಒದಗಿರಲು, ಯಃ–ಯಾವ ಮನುಷ್ಯನು, ಮೋಹಾತ್–ಅಜ್ಞಾನದಿಂದ, ವಿಘ್ನಂ–ಅದು ಆಗದಂತೆ ಅಡ್ಡಿಯನ್ನು, ಕರೋತಿ–ಮಾಡುತ್ತಾನೇ, ಸಃ–ಆ ಮನುಷ್ಯನು, ಮೃತಃ–ಸತ್ತವನಾಗಿ. ಕ್ರಿಮಿಃ–ಹುಳವು, ಜಾಯತೆ–ಆಗುತ್ತಾನೆ ॥ ॥೨೧॥

ಚಂಡಾಲಾತ್–ಹೊಲೆಯರವನಿಂದ, ಅತ್ಯಜಾತ್–ಮಾದಿಗರವನಿಂದ, ದಕ್ಷಿಣಾಂ–ದಾನರೂಪವಾದ ದಕ್ಷಿಣೆಯನ್ನು, ಪ್ರತಿಗೃಹ್ಣಾತಿ–ಪರಿಗ್ರಹಿಸುತ್ತಾನೋ, ಯಾಜಕಃ–ಚಂಡಾಲನಿಗೆ ಕರ್ಮವನ್ನು ಮಾಡಿಸಿದವನು, ಯಜಮಾನಶ್ಚ–ಯಾಜಮಾನನಾಗಿದ್ದವನು, ಸ್ಥಲಕೀಟತ್ವಂ–ಇದ್ದ ಸ್ಥ

ತ್ರಿದಕ್ಷಿಣಾಂ ।ಯಾಜಕೋಯಜಮಾನಶ್ಚ ಸ್ಥಲಕೀಟತ್ವಮಾ
ಪ್ನುಯಾತ್ ॥ ೨೨ ॥ ವೇದಾಗ್ನಿನಿಂದ ಕಾಯಜ್ಞಯಜ್ಞಬ್ರಾ
ಹ್ಮಣನಿಂದಕಾಃ । ಇಹಜನ್ಮನಿಶೂದ್ರಾಸ್ತೇ ಮೃತಾಃ ಶ್ವಾನಾ
ಸ್ತತೇನರಾಃ ॥ ೨೩ ॥ ವೇದೋಕ್ತಂಯಃಪರಿತ್ಯಜ್ಯಧರ್ಮಮ
ನ್ಯಂ ಸಮಾಚರೇತ್ । ದಶವರ್ಷ ಸಹಸ್ರಾಣಿ ಕುಯೋ
ನೌಜಾಯತೇನರಃ ॥೨೪॥ಜ್ಯೇಷ್ಠಂಪಿತೃಸಮಂಚಾಪಿಭ್ರಾತ

ಲದಲ್ಲಿ ಇರುವ ಜಾಡಿ ಮುಂತಾದ ಕೀಟತ್ವವನ್ನು, ಆಪ್ನುಯಾತ್-ಪಡೆಯುವನು ॥ ॥೨೨॥

ಯೇ-ಯಾರು, ವೇದಾಗ್ನಿನಿಂದಕಾಃ--ವೇದಗಳನ್ನು, ಯಜ್ಞಾಗ್ನಿಗಳನ್ನು, ದೂಷಿಸುವರೋ, ತೇ-ಅವರು, ಯಜ್ಞ-ಯಾದಾದರೇ, ಬ್ರಾಹ್ಮಣನಿಂದಕಾಃ-ಬ್ರಾಹ್ಮಣರನ್ನು ದೂಷಿಸುವರೋ, ಇಹಜನ್ಮನಿ-ಈ ಜನ್ಮದಲ್ಲಿ, ಶೂದ್ರಾಃ-ಶೂದ್ರರಂತೆ ಇರುವವರಾಗಿ, ತೇನರಾಃ-ಆ ಮನುಷ್ಯರು, ಮೃತಾಃ-ಸತ್ತವರಾಗಿ, ಶ್ವಾನಾಃ-ನಾಯಿಗಳಾಗುವರು. ॥ತಾ॥ ವೇದಗಳನ್ನು, ಯಜ್ಞಾಗ್ನಿಯನ್ನು, ಬ್ರಾಹ್ಮಣರನ್ನು ದೂಷಿಸುವವರು ಬದುಕಿರುವಾಗಲೇ ಶೂದ್ರರಾಗಿ, ಸತ್ತಬಳಿಕ ನಾಯಿಯ ಜನ್ಮವನ್ನು ಪಡೆಯುವರು ॥ ॥೨೩॥

ಯಃ-ಯಾವ ಮನುಷ್ಯನು, ವೇದೋಕ್ತಂ-ವೇದದಲ್ಲಿ ಹೇಳಿರುವ ಧರ್ಮವನ್ನು, ಪರಿತ್ಯಜ್ಯ-ಬಿಟ್ಟು, ಅನ್ಯಂ-ತನ್ನ ಜಾತಿಗೆ ಭಿನ್ನವಾದ, ಧರ್ಮಂ-ನಡತೆಯನ್ನು, ಸಮಾಚರೇತ್-ಮಾಡುವನೋ, ನರಃ-ಆ ಮನುಷ್ಯನು, ದಶವರ್ಷಸಹಸ್ರಾಣಿ-ಹತ್ತು ಸಾವಿರ ವರ್ಷಗಳು, ಕುಯೋನೌ-ಕುತ್ಸಿತಯೋನಿಯಲ್ಲಿ, ಅಂದರೆ ನಾಯಿ ಮುಂತಾದವುಗಳಲ್ಲಿ, ಜಾಯತೇ-ಹುಟ್ಟುತ್ತಾನೆ. ॥ತಾ॥ ಬ್ರಾಹ್ಮಣನಿಗೆ ಯೋಗ್ಯವಾದ ವೇದೋಕ್ತ ಧರ್ಮಗಳನ್ನು ಬಿಟ್ಟು, ಹೀನವರ್ಣಗಳ ಧರ್ಮಗಳನ್ನು ಮಾಡುವ ಮನುಷ್ಯನು, ಹತ್ತುಸಾವಿರ ವರ್ಷಗಳವರೆಗೆ ನಾಯಿ ಮೊದಲಾದ ದುರ್ಯೋನಿಗಳಲ್ಲಿ ಜನಿಸುತ್ತಾನೆ ॥ ॥೨೪॥

ಪಿತೃಸಮಂ-ತಂದೆಗೆ ಸಮವಾದವನನ್ನು, ಅಥವಾ ತಂದೆಗೆ ಸಮಾನನಾದ, ಜ್ಯೇಷ್ಠಂ-ದೊಡ್ಡವನಾದ, ಭ್ರಾತರಂ-ಅಣ್ಣನನ್ನು, ಯಃ-ಯಾ

ರಂಯೋವಮನ್ಯೇತ । ಸೋಪಿಮೃತ್ಯುಮವಾಪ್ತಸ್ಸನ್ ಕ್ರೌಂ
ಚಯೋನೌಜನಿಷ್ಯತಿ ॥೨೫॥ ಮಾತರಂಪಿತರಂಪುತ್ರಃಯೋ
ವಮನ್ಯೇತಬುದ್ಧಿತಃ। ಸಬ್ರಾಹ್ಮಣೋಮೃತೋಜಂತುಃಪೂ
ರ್ವಂಭವತಿಗರ್ದಭಃ॥೨೬॥ ವಿಶ್ವಾಸದ್ರೋಹಕಾರೀಚಮ
ತ್ಸ್ಯೋಜಾಯತೇನರಃ॥ ಜಲಪ್ರವಹಣಂಭಿಂದ್ಯಾತ್ಸೋಪಿಮ
ತ್ಸ್ಯೋಭವಿಷ್ಯತಿ॥೨೭॥ ಆಶಾಪಹರ್ತಾತುನರಃಕ್ರಿಮಿಯೋ

ವ ಮನುಷ್ಯನು, ಅವಮನ್ಯೇತ–ತಿರಸ್ಕರಿಸುತ್ತಾನೋ, ಸೋಽಪಿ–ಅವನು, ಮೃತ್ಯುಂ–ಮರಣವನ್ನು, ಅವಾಪ್ತಸ್ಸನ್–ಪಡೆದವನಾಗಿ, ಕ್ರೌಂಚಯೋನೌ–ಕ್ರೌಂಚಪಕ್ಷಿಯ ಶರೀರದಲ್ಲಿ, ಜನಿಷ್ಯತಿ–ಹುಟ್ಟುತ್ತಾನೆ. ॥ತಾ॥ ಯಾವ ಮನುಷ್ಯನು ತಂದೆಗೆ ಸಮಾನರಾದವರನ್ನು, ಅಣ್ಣನನ್ನು ತಿರಸ್ಕರಿಸುವವನು ಸತ್ತಬಳಿಕ ಕ್ರೌಂಚಪಕ್ಷಿಯಾಗಿ ಜನಿಸುತ್ತಾನೆ ॥ ॥೨೫॥

ಯಃ–ಯಾವ, ಪುತ್ರಃ–ಮಗನು, ಮಾತರಂ–ತಾಯಿಯನ್ನು, ಪಿತರಂ–ತಂದೆಯನ್ನು, ಬುದ್ಧಿತಃ–ಜ್ಞಾನದಿಂದ, ಅವಮನ್ಯೇತ–ತಿರಸ್ಕರಿಸುತ್ತಾನೋ, ಸಃ–ಆ, ಬ್ರಾಹ್ಮಣಃ–ವಿಪ್ರನು, ಮೃತಃ–ಸತ್ತವನಾಗಿ, ಪೂರ್ವಂ–ಮೊದಲು, ಜಂತುಃ–ಹುಳವಾಗಿ, ಗರ್ದಭಃ–ಆಮೇಲೆ ಕತ್ತೆಯು, ಭವತಿ–ಆಗುತ್ತಾನೆ. ॥ತಾ॥ ತಂದೆ ತಾಯಿಗಳನ್ನು, ತಿರಸ್ಕರಿಸಿದ ಮಗನು ಸತ್ತಬಳಿಕ ಕ್ರಿಮಿ ಕೀಟಾದಿ ಜನ್ಮವನ್ನು ಪಡದು, ಆಬಳಿಕ ಕತ್ತೆಯಾಗಿ ಜನಿಸುವನು ॥ ॥೨೬॥

ಯಃ–ಯಾವನು, ವಿಶ್ವಾಸದ್ರೋಹಕಾರೀಚ–ನಂಬಿಸಿ ದ್ರೋಹವನ್ನು ಮಾಡುವವನೋ, ಸಃ–ಅವನು, ಮತ್ಸ್ಯಃ–ಮೀನು, ಜಾಯತೇ–ಆಗುವನು, ಜಲಪ್ರವಹಣಂ–ನೀರು ನಿಂತು ಪ್ರವಹಿಸುವದಕ್ಕೆ ಆಧಾರವಾದ ಏರಿಯನ್ನು, ಭಿಂದ್ಯಾತ್–ಯಾವನು ಕಿತ್ತು ಹಾಕುತ್ತಾನೋ, ಸೋಽಪಿ–ಅವನು, ಮತ್ಸ್ಯಃ–ಮೀನು, ಭವಿಷ್ಯತಿ–ಆಗುತ್ತಾನೆ. ॥ತಾ॥ ವಿಶ್ವಾಸಘಾತಕನು ನೀರಿನ ಆಸರೆಯ ಕಟ್ಟೆಯನ್ನು ಛೇದಿಸಿದವನು ಮತ್ಸ್ಯವಾಗುವನು ॥ ॥೨೭॥

ಆಶಾಪಹರ್ತಾ–ಇತರರ ಕೋರಿಕೆಯನ್ನು ಕೆಡಿಸಿದವನಾದ್ದ, ನರಃ–

ನ್ ಪ್ರಜಾಯತೆ। ಅಯೋನಿಗಾಮೀತಸ್ಸ್ಯಕಃ ಉಲೂಕಃ ಕ್ರಯವಂಚಕಃ ॥೨೪॥ ಕಾಮಕಾರೇಣಯಶ್ಶಿಷ್ಯಂಪುತ್ರತುಲ್ಯಂ ವಿಶೇಷತಃ । ಗುರುಃ ಪರಿತ್ಯಜೇತ್ಸೋಽಪಿ ಮೃತೋಹಿಂಸ್ರಃ ಪ್ರಜಾಯತೇ ॥೨೯॥ ಆಚಾರ್ಯಂರುತ್ವಿಜಂಚೈವಗುರುಂಚಾಪಿ ತಪಸ್ವಿನಂ । ತಿರಸ್ಕರೋತಿಚರುಷೀನ್ಸಭವೇದ್ಬ್ರಹ್ಮರಾಕ್ಷಸಃ ॥೩೦॥ ಪ್ರತಿಶ್ರುತ್ಯದ್ವಿಜೇಭ್ಯಶ್ಚ ಅದತ್ವಾಮಧುಮಕ್ಷಿಕಃ ।

ಮನುಷ್ಯನು, ಕ್ರಿಮಿಯೋನೌ-ಕ್ರಿಮಿಯ ದೇಹದಲ್ಲಿ, ಪ್ರಜಾಯತೆ- ಹುಟ್ಟುವನು, ಅಯೋನಿಗಾಮೀತು-ಮಿಯೋಸಿಯಲ್ಲಿ ಸಂಗಮಮಾಡಿದವನು, ವೃಕಃ-ತೋಳನಾಗುವನು, ಕ್ರಮವಂಚಕಃ-ಬೆಲೆಯಲ್ಲಿ ವಂಚನೆ ಮಾಡುವವನು, ಉಲೂಕಃ-ಗೂಬೆಯು, ಆಗುವನು ॥ ॥೨೪॥

ಯಃ-ಯಾವ, ಗುರುಃ-ಗುರುವು, ಕಾಮಕಾರೇಣ-ಮಾಡಬೇಕೆಂಬ ಕೋರಿಕೆಯಿಂದ, ಪುತ್ರತುಲ್ಯಂ-ಮಗನಿಗೆ ಸಮಾನಾದ, ಶಿಷ್ಯಂ-ಅಂತೆವಾಸಿಯನ್ನು, ವಿಶೇಷತಃ-ಅತಿಶಯವಾಗಿ, ಪರಿತ್ಯಜೇತ್-ಬಿಡುತಾನೆಯೋ, ಸೋಽಪಿ-ಅವನು, ಮೃತಃ-ಶರೀರವನ್ನು ಬಿಟ್ಟ ಬಳಿಕ, ಹಿಂಸ್ರಃ-ಹಿಂಸೆಯನ್ನು ಮಾಡುವ ಕರಡಿ ಮುಂತಾದಜನ್ಮಉಳ್ಳವನಾಗಿ, ಪ್ರಜಾಯತೆ-ಹುಟ್ಟುವನು ॥ ॥೨೯॥

ಆಚಾರ್ಯಂ-ಮಂತ್ರವ್ಯಾಖ್ಯಾನವನ್ನು ಮಾಡಿಸಿಕೊಟ್ಟವನನ್ನು, ರುತ್ವಿಜಂ-ರುತ್ವಿಜನನ್ನು, ಗುರುಂ-ಮಂತ್ರೋಪದೇಶವನ್ನು ಮಾಡಿದವನ್ನು, ತಪಸ್ವಿನಂ-ತಪೋನಿಷ್ಠನಾದವನನ್ನು ರುಷೀನ್ಚ-ಮುನಿಗಳನ್ನು, ತಿರಸ್ಕರೋತಿ-ಯಾವನು-ಧಿಕ್ಕರಿಸುತಾನೊ,ಸಃ-ಅವನು,ಬ್ರಹ್ಮರಾಕ್ಷಸಃ-ಬ್ರಹ್ಮಪಿಶಾಚವು, ಭವೇತ್-ಆಗಾನು ॥ ॥೩೦॥

ದ್ವಿಜೇಭ್ಯಃ-ಬ್ರಾಹ್ಮಣರಿಗೆ, ಪ್ರತಿಶ್ರುತ್ಯ-ಇದನ್ನು ಕೊಡುತ್ತೇನೆಂಮವಾಗ್ದಾನವನ್ನುಮಾಡಿ, ಅದತ್ವಾ-ಕೊಡದೇ ಹೋದರೆ, ಮಧುಮಕ್ಷಿಕಃ-ಜೇನುನೊಣವು, ಭವೇತ್- ಆಗಾನು, ದೇವಲಕಃ- ಕೂಲಿಗೆ ದೇವರ ಪೂಜಕನು, ಪಶ್ಚಾತ್-ಸತ್ತ ತರುವಾಯ, ಚಂಡಾಲ ಸಂಜ್ಞಿತಾಂ-ಚಂಡಾಲ ಸಂಜ್ಞೆಯುಳ್ಳ, ಯೋನಿಂ-ಜನ್ಮವನ್ನು, ಲಭೇತ್-

ಭವೇದ್ವಿವಲಕೋಪಸ್ತ್ವಾಷ್ಟ್ಯೋನಿಂಚಡಾಲಸಂಜ್ಞಿತಾಂ|| ೩೧ ||
ಕೂಟಸಾಕ್ಷ್ಯರತಾಃಪಾಪಾಃಅಮೆಧ್ಯಕ್ರಿಮಯಶ್ಚಿರಂ|| ಭೂ
ತ್ವಾಭವಂತಿಸರ್ಪಾಸ್ತೇಪಿಶಾಚಾಸ್ತದನಂತರಂ || ೩೨ || ಗು
ರುಶಿಷ್ಯದ್ರುಹಃ ಪಾಪಾಃ ಯೇಚಸ್ವಾಮಿದ್ರು ಹೋಜನಾಃ |
ದ್ವಿಜಶಿಷ್ಯದ್ರುಹಶ್ಚೈವಕೃತಘ್ನಾನಾಸ್ತಿಕಾಸ್ತಥಾ || ೩೩ ||
ತ್ಯಾಗಿನೋಬಾಂಧವಾನಾಂ ಚತ್ಯಾಗಿ ನಶ್ಶರಣಾರ್ಥಿನಾಂ ||
ಅಮೆಧ್ಯಕ್ರಿಮಯಸ್ಸರ್ವೇ ಮೃಗವ್ಯಾಧಾಭವಂತಿಚ ||೩೪||
ವಿಪ್ರಃಪಂಚಮಹಾಯಜ್ಞಾನಕೃತ್ವಾಯೋನ್ನಮಶ್ನುತೆ|ವಿ

ಪಡದಾನು || ||೩೧||

ಕೂಟಸಾಕ್ಷ್ಯರತಾಃ–ಕೂಟಸಾಕ್ಷಿಯನ್ನು ಹೇಳುವದರಲ್ಲಿ ಆಸಕ್ತ ರಾದ, ಪಾಪಾಃ–ದುಷ್ಟರು, ಚಿರಂ–ಬಹುಕಾಲದವರಿಗೆ, ಅಮೇಧ್ಯ–ವಿಷ್ಟೆಯಲ್ಲಿ,ಕ್ರಿಮಯಃ–ಹುಳಗಳು,ಭೂತ್ವಾ-ಆಗಿದ್ದು,ತೆ–ಆಪ್ರಾಣಿಗಳು, ಸರ್ಪಾಃ–ಹಾವುಗಳು ಭವಂತಿ–ಆಗುತ್ತಾರೆ, ತದನಂತರಂ–ಆಬಳಿಕ, ಪಿಶಾಚಾಃ–ದೆವ್ವಗಳು, ಭವಂತಿ–ಆಗುವರು || ||೩೨||

ಗುರುಶಿಷ್ಯದ್ರುಹಃ–ಗುರುಶಿಷ್ಯರಿಗೆ ದ್ರೋಹವನ್ನು ಮಾಡುವವರಾದ, ಪಾಪಾಃ–ದುಷ್ಟರು, ಸ್ವಾಮಿದ್ರುಹಃ–ಸ್ವಾಮಿದ್ರೋಹವನ್ನು ಮಾಡುವವರು, ಯೆಜನಾಃ–ಯಾವ ಜನರು ಇರುವರೋ ಅವರು, ದ್ವಿಜ–ಬ್ರಹ್ಮಕ್ಷತ್ರಿಯ ವೈಶ್ಯರಿಗೂ, ದ್ರುಹಃ–ದ್ರೋಹವನ್ನು ಮಾಡುವವರು, ಕೃತಘ್ನಾಃ–ಮಾಡಿದ ಉಪಕಾರವನ್ನು ಎಣಿಸದೇ ಇರುವವರು, ತಥಾ–ಹಾಗೆ, ನಾಸ್ತಿಕಾಃ–ದೇವರಲ್ಲಿನಂಬಿಕೆಯಿಲ್ಲದವರುಆಗುವರು, || ||೩೩||

ಬಾಂಧವಾನಾಂ–ಬಂಧುಗಳನ್ನು,ತ್ಯಾಗಿನಃ–ಬಿಟ್ಟಿರುವವರು,ಶರಣಾರ್ಥಿನಾಂ–ಕಾಪಾಡಬೇಕೆಂದುಮರೆಹೊಕ್ಕವರನ್ನು ತ್ಯಾಗಿನಃ–ಬಿಟ್ಟವರು,ಸರ್ವೆ–ಇವರೆಲ್ಲರೂ,ಅಮೇಧ್ಯ–ವಿಷ್ಟೆಯಲ್ಲಿ, ಕ್ರಿಮಯಃ–ಹುಳಗಳಾಗಿ, ಅಬಳಿಕ, ಮೃಗವ್ಯಾಧಾಃ–ಮೃಗಗಳೂ, ಬ್ಯಾಡರೂ, ಭವಂತಿ–ಆಗುವರು || ||೩೪||

ವಿಪ್ರಃ–ಬ್ರಾಹ್ಮಣನು, ಪಂಚಮಹಾಯಜ್ಞಾನ್–ದೇವರುಋಷಿ ಪಿತೃ ಭೂತಮನುಷ್ಯ ಯಜ್ಞಗಳನ್ನು, ಅಕೃತ್ವಾ–ಮಾಡದೆ, ಯಃ–ಯಾವ

ಷ್ಠಾಶೋಭವೇನ್ನಿತ್ಯಂಕ್ರವ್ಯಾಶೀವ್ಯಾಧಿತಾಂವ್ರಜೇತ್॥೩೫॥
ದ್ವಿಜಸ್ತ್ವೇಕಶಫಾನಾಂಚವಿಕ್ರಯಾಜ್ಜಾಯತೆಮೃಗಃ ।
ಕಾಕೋಮಂತ್ರಿತಭೋಜೀಚಬಹುಯಾಚನಕಃಖರಃ॥ ೩೬ ॥
ಅಪರೀಕ್ಷಿತಭೋಜೀಸ್ಯಾದ್ವಾನರೋವಿಜನೇವನೇ ॥ ಅವಿದ್ಯಾಂ
ಯಃಪ್ರಯುಞ್ಜೀತಬಲೀವರ್ದೋಭವಿಷ್ಯತಿ॥೩೭॥ಅದತ್ವಾ
ಚಾಗ್ನಿವಿಪ್ರೇಭ್ಯಃಹೃದ್ಯಾನಿಮಧುರಾಣಿಚ । ಪ್ರಾಶನಾತ್ತ

ನು, ಅನ್ನಂ-ಆಹಾರವನ್ನು, ಅಶ್ನಾತೇ-ತಿನ್ನುತ್ತಾನೋ, ವಿಷ್ಠಾಶಃ-ಅಮೇಧ್ಯವನ್ನು ತಿನ್ನುವ, ವರಾಹಃ-ಹಂದಿಯು, ಭವೇತ್-ಆದಾನು, ಆಬಳಿಕ, ನಿತ್ಯಂ-ಪ್ರತಿದಿನವಲ್ಲಿಯೂ, ಕ್ರವ್ಯಾಶೀ-ಮಾಂಸವನ್ನೇ ತಿನ್ನುವವನಾಗಿ, ವ್ಯಾಧಿತಾಂ-ಬ್ಯಾಧಿರತನವನ್ನು, ವ್ರಜೇತ್-ಹೊಂದುವನು ॥ ॥೩೫॥

ದ್ವಿಜಸ್ತು-ಬ್ರಾಹ್ಮಣನಾದರೋ ನೋ ಏಕಶಫಾನಾಂ-ಒಂದು ಗೊರಸುಳ್ಳ ಪ್ರಾಣಿಗಳ, ವಿಕ್ರಯಾತ್-ಮಾರೋಣದರಿಂದ, ಮೃಗಃ-ದುಪ್ಪಿ ಮುಂತಾದ ಮೃಗವು, ಜಾಯತೆ-ಆಗುವನು, ಅಮಂತ್ರಿತ-ಪರಿಷೇಚನಾದಿ ಮಂತ್ರಗಳಿಂದ ಮಂತ್ರಿತವಲ್ಲದ ಅನ್ನವನ್ನು, ಭೋಜೀ-ತಿನ್ನುವವನು, ಕಾಕಃ-ಕಾಗಿಯು, ಬಹುಯಾಚನಕಃ-ಬಹಳವಾಗಿ ಯಾಚಿಸುವನು, ಅಂದರೆ-ಅಂಗಡಿ ಮನೆಗಳಲ್ಲಿ ಒಂದುಕಾಸನ್ನಾದರೂ ಬಿಡದೆ ಯಾಚನೆ ಮಾಡುವವನು, ಖರಃ-ಕತ್ತೆಯು, ಆಗುವನು ॥ ॥೩೬॥

ಅಪರೀಕ್ಷಿತ-ಒಳ್ಳೇದು ಕೆಟ್ಟದ್ದೆಂಬ ವಿಚಾರವಿಲ್ಲದೆ, ಭೋಜೀ-ಭೋಜನವನ್ನು ಮಾಡುವವನು, ವಿಜನೆ-ಜನರಿಲ್ಲದ, ವನೆ-ಅರಣ್ಯದಲ್ಲಿ, ವಾನರಃ-ಕಪಿಯು, ಜಾಯತೆ-ಆಗುವನು, ಯಃ-ಯಾವನು, ಅವಿದ್ಯಾಂ ಅಜ್ಞಾನ ಪ್ರದವಾದ ವಿದ್ಯೆಯನ್ನು, ಪ್ರಯುಂಜೀತ್-ಹೇಳಿಕೊಟ್ಟರೆ, ಬಲೀವರ್ದಃ-ವೃಷಭವು, ಭವಿಷ್ಯತಿ-ಆಗುತ್ತಾನೆ ॥ ॥೩೭॥

ಅಗ್ನಿ-ಯಜ್ಞೇಶ್ವರನಿಗೂ, ವಿಪ್ರೇಭ್ಯಃ-ಬ್ರಾಹ್ಮಣರಿಗೂ, ಹೃದ್ಯಾನಿ-ಮನೋಹರಗಳಾದ, ಮಧುರಾಣಿಚ-ರುಚಿಯಾದ, ಅಥವಾ ಶ್ರೀಯ್ಯಾದ, ಪದಾರ್ಥಗಳನ್ನು, ಅದತ್ವಾ-ಕೊಡದೆ, ಪ್ರಾಶನಾತ್-ತಾನೇ ತಿನ್ನುತ್ತಾ-ಬರುವವರ ದಶೆಯಿಂದ, ಮನುಜಃ-ಮನುಷ್ಯನು, ಭೋಗೀ-ಸುಖಸ

ಸುಜೋಭೋಗೀಭುಜಗತ್ವಮವಾಪ್ನುಯಾತ್ ॥ ೩೮ ॥ ವಿ
ಪ್ರಾ ಜಕ್ಷ ಭವಿಷ್ಯಂತಿವೇದಸ್ತ್ರೀಜೀವಿನೋದ್ವಿಜಾಃ ।ಮೌ
ಲ್ಯಾದ್ವೇದೋಪದೇಷ್ಟಾಚಶಾರ್ದೂಲೋಜಾಯತೇನರಃ॥೩೯ ॥
ವಿನಾನುಜ್ಞಾಂ ಗುರೋರ್ವೇದ ಪಾಠಕೋಜಂಬುಕೋಭವೇ
ತ್ ।ಅಧರ್ಮಧರ್ಮವಾದೀಜನಿಷ್ಕರ್ಮೀಮನುಜೋಭವೇತ್ ॥೪೦॥
ಅದಾನಾಚ್ಚ ದರಿದ್ರಸ್ಸ್ಯಾತ್ಸ್ವಾಮಿದ್ರೋಹಾಚ್ಚ ಕುಕ್ಕು

ಟುವವನಾದರೆ, ಭುಜಗತ್ವಂ–ಸರ್ಪಜನ್ಮವನ್ನು, ಅವಾಪ್ನುಯಾತ್–ಪಡೆಯುತ್ತಾನೆ. ॥ತಾ॥ ಮನೋಹರಗಳಾದ ರುಚಿಯಾದ ವಸ್ತುಗಳನ್ನು ಅಗ್ನಿಯಲ್ಲಿ ಹೋಮ ಮಾಡದೆ, ಬ್ರಾಹ್ಮಣರಿಗೆ ಕೊಡದೆ ತಾನೇ ತಿನ್ನುವ ಮನುಷ್ಯನು, ಸರ್ಪವಾಗುವನು ॥ ॥೩೮॥

ದ್ವಿಜಾಃ–ಬ್ರಹ್ಮ, ಕ್ಷತ್ರಿಯ,ವೈಶ್ಯರು,ವೇದ–ವೇದಗಳಿಂದ, ಸ್ತ್ರೀ–ಹೆಂಗಸರಿಂದ, ಜೀವಿನಃ–ಬದುಕುವವರು, ಮೌಲ್ಯಾತ್–ಕ್ರಯದಿಂದ, ವೇದೋಪದೇಷ್ಟಾಚ–ವೇದವನ್ನು ಹೇಳತಕ್ಕವನಾದ, ನರಃ–ಮನುಷ್ಯನು, ಶಾರ್ದೂಲಃ–ವ್ಯಾಘ್ರವು, ಜಾಯತೆ–ಆಗುತ್ತಾನೆ. ॥ತಾ॥ ವೇದದಿಂದ ಹೆಂಗಸರಿಂದ ಜೀವಿಸುವವನು, ಕ್ರಯಕ್ಕೆ ವೇದವನ್ನು ಬೋಧಿಸುವವನು ಹುಲಿಯಾಗಿ ಹುಟ್ಟುವನು॥ ॥೩೯॥

ಗುರೋಃ–ಆಚಾರ್ಯನ, ಅನುಜ್ಞಾಂ–ಅಪ್ಪಣೆಯನ್ನು, ವಿನಾ–ಇಲ್ಲದೆ, ನರಃ–ಮನುಷ್ಯನು, ವೇದಪಾಠಕಃ–ವೇದವನ್ನು ಪುಸ್ತಕದಲ್ಲಿ ಓದಿಕೊಳ್ಳುವವನು, ಜಂಬುಕಃ–ನರಿಯು, ಭವೇತ್–ಆಗುವನು, ಅಧರ್ಮ–ಅಧರ್ಮಕೆಲಸವನ್ನು, ಧರ್ಮವಾದೀಚ–ಧರ್ಮ ಕೆಲಸವೆಂಬದಾಗಿ ಹೇಳುವವನಾದ, ಮನುಜಃ–ಮನುಷ್ಯನು, ನಿಷ್ಕರ್ಮಿ–ವೇದೋವಿತಕರ್ಮಹೀನನಾದವನು,ಭವೇತ್–ಆದಾನು.॥ತಾ॥ಅಧರ್ಮವಾಗಿರುವ ಕೆಲಸವನ್ನು ಧರ್ಮವಾದದ್ದೆಂದು ಹೇಳುವವನು, ಕರ್ಮಹೀನಜಾತಿಯಲ್ಲಿ ಜನಿಸುತ್ತಾನೆ. ಗುರುವಿನ ಮುಖದಿಂದ ಹೇಳಿಸಿಕೊಳ್ಳದೆ ಪುಸ್ತಕವನ್ನು ನೋಡಿ, ವೇದವನ್ನು ಓದುವವನು ನರಿಯಾಗಿ ಹುಟ್ಟುವನು ॥ ॥೪೦॥

ಅದಾನಾತ್–ಯಾರಿಗೂ ಯಾವ ಪದಾರ್ಥವನ್ನು ಕೊಡದೇ ಇರುವವನು, ದರಿದ್ರಃ–ಬಡವನು, ಸ್ಯಾತ್–ಆಗುವನು, ಸ್ವಾಮಿ–ತನ್ನ ಯಜ

ಟಃ।ಅದತ್ವಾಭಕ್ಷಕಾಯೆತೇಕುದೇಶೇಜನ್ಮಚಾಪ್ನುಯುಃ ॥೪೧॥
ಜಾಯಂತೆರೋಗಿಣೋರೌದ್ರಾಃಹಿಂಸ್ರಾಃಕುಬ್ಜಾಸ್ತ್ವದಾ
ನತಃ ॥ ಅಪುತ್ರಾಕ್ಕಲಹಾಕ್ರಾಂತಾಃ ಪರದಾರೋಪಸೇವ
ಕಾಃ॥೪೨॥ಕುದಂತಾಶ್ಚಪಲಾಲುಬ್ಧಾಃಕುಶರೀರಾಃ ಕುಶೀ
ಲಿನಃ।ಧನಹೀನಾಭವಂತ್ಯೇತೆದೇವಬ್ರಹ್ಮಸ್ವಭಕ್ಷಕಾಃ॥೪೩॥ಭಾ
ರ್ಯಾತ್ಯಾಗೀತುತಾಮಿಸ್ರಂನರಕಂಪ್ರತಿಪದ್ಯತೆ।ಅನೃತಾದ್ಗ

ಮಾನನಿಗೆ, ದ್ರೋಹಾಚ್ಚ-ಮೋಸಮಾಡುವದ್ದರಿಂದ,ಕುಕ್ಕುಟಃ-ಕೋಳಿಯು, ಆಗುತ್ತಾನೆ, ಯೆ-ಯಾರು, ಅದತ್ವಾ-ಇತರರಿಗೆ ಕೊಡದೆ, ಭಕ್ಷಕಾಃ-ತಿನ್ನುವರೋ, (ತೆ-ಅವರು) ಕುದೇಶೆ-ಕುತ್ಸಿತವಾದ ದೇಶದಲ್ಲಿ, ಜನ್ಮ-ಉತ್ಪತ್ತಿಯನ್ನು, ಆಪ್ನುಯುಃ-ಪಡೆಯುತಾರೆ. ॥ತಾ॥ ದಾತೃತ್ವವಿಲ್ಲದವನು ದರಿದ್ರನಾಗುತ್ತಾನೆ, ತನ್ನ ಯಜಮಾನನಿಗೆ ದ್ರೋಹಮಾಡಿದವನು ಕೋಳಿಯಾಗಿ ಹುಟ್ಟುತ್ತಾನೆ, ತಿನ್ನುವ ವಸ್ತುಗಳನ್ನು ಧರ್ಮಮಾಡದೇ ಇರುವವರು, ತಿನ್ನುವ ವಸ್ತುಗಳಿಲ್ಲದ ಕುತ್ಸಿತದೇಶದಲ್ಲಿ ಹುಟ್ಟುವರು ॥ ॥೪೧॥

ರೌದ್ರಾಃ-ಕ್ರೂರರಾದವರು, ಹಿಂಸ್ರಾಃ-ಹಿಂಸೆಯನ್ನು ಮಾಡುವವರು, ರೋಗಿಣಃ-ರೋಗವುಳ್ಳವರು, ಜಾಯಂತೆ-ಆಗುವರು, ಅದಾನತಃ-ಕೊಡದೇ ಇರುವದ್ದರಿಂದ, ಕುಬ್ಜಃ-ಮೋಟಾದವನು, (ಆಗುವನು,) ಕಲಹಾಕ್ರಾಂತಾಃ-ಜಗಳವನ್ನೇ ಆಡುತ್ತಾ ಇರುವವರು, ಪರದಾರ-ಅನ್ಯರ ಹೆಂಡರನ್ನು, ಉಪಸೇವಕಾಃ-ಕಾಮದಿಂದ ಆಶ್ರಯಿಸುವವರು, ಅಪುತ್ರಾಃ-ಗಂಡುಮಕ್ಕಳಿಲ್ಲದವರು, ಆಗುವರು ॥ ॥೪೨॥

ಕುದಂತಾಃ-ಕುತ್ಸಿತ ದಂತಗಳುಳ್ಳವರು, ಚಪಲಾಃ-ಚಂಚಲರಾಗಿಯೂ, ಲುಬ್ಧಾಃ-ಲೋಭವುಳ್ಳವರಾಗಿಯೂ ಇರುವವರು, ಕುಶೀಲಿನಃ-ಕೆಟ್ಟ ಸ್ವಭಾವವುಳ್ಳವರು, ಕುಶರೀರಾಃ-ಕೆಟ್ಟ ಶರೀರವುಳ್ಳವರಾಗಿ, ಭವಂತಿ-ಆಗುವರು, ದೇವ-ದೇವರುಗಳ,ಬ್ರಹ್ಮ-ಬ್ರಾಹ್ಮಣರ, ಸ್ವ-ಸ್ವತ್ತನ್ನು, ಭಕ್ಷಕಾಃ-ತಿನ್ನುವವರು, ಎತೆ-ಇವರು, ಧನಹೀನಾಃ-ಹಣವಿಲ್ಲದವರು, ಭವಂತಿ-ಆಗುತ್ತಾರೆ ॥ ॥೪೩॥

ಭಾರ್ಯಾತ್ಯಾಗೀ-ಹೆಂಡತಿಯನ್ನು ಬಿಟ್ಟವನು, ತಾಮಿಸ್ರಂ-ತಮೋ

ಹ್ಗದೀಭೂಯಾನ್ಮೂಕೋಪಿಸ್ಯಾದ್ಗವಾನ್ನತೆ ॥೪೪॥ ದಾನಾ
ತ್ಪರ್ಯುಷಿತಾನ್ನಸ್ಯಕುಬ್ಜತಾಂಯಾತಿಮಾನವಃ ॥ ದ್ವೇಷೇಣ
ಬಧಿರೋಭೂಯಾದಂಧೋಮಾತ್ಸರ್ಯತೋಭವೇತ್॥೪೫॥ಅನಪ
ತ್ಯೋಭವೇನ್ಮರ್ತ್ಯೋಽದತ್ವಾಭಕ್ಷ್ಯಭಕ್ಷಕಃ। ಪಠ್ಯಮಾನಾ
ನಿಗೀತಾನಿಹರೇಶ್ಚಾಪಿಹರಸ್ಯಚ। ಅಶ್ರುತ್ವಾಯೇಗಮಿಷ್ಯಂ
ತಿತೇಬಾಧಿರ್ಯಂವ್ರಜಂತಿಚ ॥೪೬॥ ದೃಷ್ಟ್ವಾತುದೇವತಾಗಾ
ರಂಅಕೃತ್ವಾಚನಮಸ್ಕೃತಿಂ। ಗಮಿಷ್ಯಂತಿನರಾಯೇತು

ಪ್ರಧಾನವಾಗಿರುವ,ನರಕಂ-ನಿರಯವನ್ನು, ಪ್ರತಿಪದ್ಯತೇ-ಪಡೆಯುತ್ತಾನೆ, ಅನೃತಾತ್-ಸುಳ್ಳನ್ನು ಹೇಳುವದರಿಂದ, ಗದ್ಗದೀ-ಗದ್ಗದ ಧ್ವನಿಯುಳ್ಳವನು, ಭೂಯಾತ್-ಆದಾನು, ಗವಾನ್ನತೆ-ಆಕಳ ವಿಷಯವಾಗಿ ಸುಳ್ಳನ್ನು ಹೇಳಿ, ಅದಕ್ಕೆ ಬಾಧೆಯುಂಟಾದಲ್ಲಿ, ಮೂಕೋಪಿ-ಮೂಗನು, ಸ್ಯಾತ್-ಆದಾನು ॥ ॥೪೪॥

ಮಾನವಃ-ಮನುಷ್ಯನು, ಪರ್ಯುಷಿತಾನ್ನಸ್ಯ-ತಂಗಳನ್ನದ, ದಾನಾತ್-ಕೊಡುವಿಕೆಯಿಂದ, ಕುಬ್ಜತಾಂ-ವಾಮನತ್ವವನ್ನು, ಯಾತಿ-ಪಡೆಯುವನು, ದ್ವೇಷೇಣ-ಕ್ರೋಧದಿಂದ, ಬಧಿರಃ-ಕಿವುಡನು, ಭೂಯಾತ್-ಆದಾನು, ಮಾತ್ಸರ್ಯತಃ-ಮತ್ಸರತ್ವದಿಂದ, ಅಂಧಃ-ಕುರುಡನು, ಭವೇತ್-ಆಗುವನು॥ ॥೪೫॥

ಅದತ್ವಾ-ಕೊಡದೆ, ಭಕ್ಷ್ಯ-ತಿನ್ನುವ ವಸ್ತುವನ್ನು, ಭಕ್ಷಕಃ-ತಿನ್ನುತ್ತಿರುವವನು, ಅನಪತ್ಯಃ-ಮಕ್ಕಳಿಲ್ಲವವನು, ಭವೇತ್-ಆಗುವನು, ಹರೇಶ್ಚ-ವಿಷ್ಣುವಿನ, ಹರಸ್ಯಚ-ಶಿವನ, ಪಠ್ಯಮಾನಾನಿ ಪುರಾಣವಾಗುತ್ತಿರುವ, ಗೀತಾನಿ-ಚರಿತ್ರೆಗಳನ್ನು, ಅಥವಾ ಹರಿ ವಿಷ್ಣುಗಳ ಪ್ರೀತಿಕರವಾದ ಸಾಮವೇದರುಕ್ಕುಗಳ ಗಾನವನ್ನು, ಅಶ್ರುತ್ವಾ-ಕೇಳದೆ, ಯೆ-ಯಾರು, ಗಮಿಷ್ಯಂತಿ-ಹೋಗುವರೋ, ತೆ-ಅವರು, ಬಾಧಿರ್ಯಂ-ಕಿವುಡುತನವನ್ನು, ವ್ರಜಂತಿ-ಹೊಂದುವರು ॥ ॥೪೬॥

ದೇವತಾಗಾರಂ-ದೇವಾಲಯವನ್ನು,ದೃಷ್ಟ್ವಾ-ನೋಡಿ, ನಮಸ್ಕೃತಿಂ-ನಮಸ್ಕಾರವನ್ನು, ಅಕೃತ್ವಾ-ಮಾಡದೆ, ಯೆನರಾಃ-ಯಾವ ಮನುಷ್ಯರು, ಗಮಿಷ್ಯಂತಿ-ಹೋಗುತ್ತಾರೋ, ತೆ-ಅವರು, ಅಂಗಹೀ

ಅಂಗಹೀನಾಭವಂತಿತೇ ॥ ೪೭ ॥ ಮೂರ್ಛಾರೋಗೀಸುರದ್ವೇ
ಷ್ಟಾ ಪಕ್ಷಪಾತೀಜ್ವರೀಭವೇತ್ । ಮಿಥ್ಯಾಚಾರೀಬುದ್ಬು
ದಾಸ್ಯಃ ದುಷ್ಕುಲೀಯೋತಿಮಾನವಾನ್ ॥೪೮॥ ಹೃದ್ರೋ
ಗೀ ಮನುಜೋ ಭೂಯಾದ್ದೇವದ್ರವ್ಯೋಪಜೀವನಾತ್ ।
ಅಗ್ರಭುಕ್ಶೂಲರೋಗೀಚ ಪಿಶುನಃಪೂತಿನಾಸಿಕಃ ॥೪೯॥ ಏ
ಕಾಂರಮತಿಸಕ್ಲೀಬಃಬಹುಪತ್ನೀಷುಸತ್ಸ್ವಪಿ । ವ್ಯವಹಾ

ನಾಃ-ಕೈಕಾಲುಮುಂತಾದ ಅಂಗಗಳಿಲ್ಲದವರು,ಭವಂತಿ-ಆಗುವರು॥೪೭॥

ಸುರ-ದೇವತೆಗಳನ್ನು, ದ್ವೇಷ್ಟಾ-ದ್ವೇಷಿಸುವವನು, ಮೂರ್ಛಾ ರೋಗೀ--ಮೂರ್ಛೆರೋಗವುಳ್ಳವನು, ಪಕ್ಷಪಾತೀ--ನ್ಯಾಯವನ್ನು ಹೇಳದೆ ಪಕ್ಷಪಾತವಾಗಿ ಹೇಳುವವನು,ಜ್ವರೀ-ಜ್ವರರೋಗವುಳ್ಳವನು, ಭವೇತ್-ಆದಾನು, ಮಿಥ್ಯಾಚಾರೀ-ಸುಳ್ಳಾದ ನಡತೆಯುಳ್ಳವನು,ಬುದ್ಬುದಾಸ್ಯಃ--ಕೋವೇರೋಗದವನು, ಭವೇತ್--ಆಗುವನು, ಅತಿಮಾನವಾನ್-ಬಹಳ ಗರ್ವವುಳ್ಳವನು, ದುಷ್ಕುಲೀಯಃ-ಕೆಟ್ಟ ವಂಶದಲ್ಲಿ ಹುಟ್ಟುವವನು ಆಗುವನು॥ ॥೪೮॥

ದೇವದ್ರವ್ಯ-ದೇವಾಲಯ ದ್ರವ್ಯದಿಂದ, ಉಪಜೀವನಾತ್-ಜೀವನ ಮಾಡುವದ್ದರಿಂದ, ಮನುಜಃ-ಮನುಷ್ಯನು, ಹೃದ್ರೋಗೀ-ಹೃದಯ ವ್ಯಾಧಿಯುಳ್ಳವನು, ಭೂಯಾತ್--ಆದಾನು, ಅಗ್ರಭುಕ್-ಯೋಗ್ಯರನ್ನು ಭೋಜನಕ್ಕೆ ಕರದು, ಅವರು ಬರುವದಕ್ಕಿಂತ ಮುಂಚೆಯೇ, ತಾನು ಊಟವನ್ನು ಮಾಡುವವನು, ಶೂಲರೋಗೀಚ-ಶೂಲರೋಗವುಳ್ಳವನು, ಪಿಶುನಃ--ಪೈಶುನ್ಯವುಳ್ಳವನು, ಪೂತಿನಾಸಿಕಃ-ದುರ್ಗಂಧವಾದ ಮೂಗುಳ್ಳವನು, ಭೂಯಾತ್-ಆದಾನು ॥ ॥೪೯॥

ಬಹುಪತ್ನೀಷು-ಅನೇಕ ಹೆಂಡತಿಯರು, ಸತ್ಸ್ವಪಿ-ಇರುತ್ತಿರಲೂ, ಏಕಾಂ_ಒಬ್ಬಳನ್ನು, ರಮತಿ-ಕ್ರೀಡಿಸುವನೋ, ಸಃ-ಅವನು, ಕ್ಲೀಬಃ-ನಪುಂಸಕನು, ಭವಿಷ್ಯತಿ-ಆಗುವನು, ವ್ಯವಹಾರೆ_ವಿವಾದದಲ್ಲಿ, ಪಕ್ಷಪಾತಾತ್_ನ್ಯಾಯವನ್ನು ಬಿಟ್ಟು ಇತರರಿಗೆ ಸಹಾಯ ಮಾಡುವದ್ದರಿಂದ,ಜಿಹ್ವಾರೋಗೀ_ನಾಲಿಗೆಯ ಬೇನೆಯುಳ್ಳವನು, ಭವಿಷ್ಯತಿ-ಆಗು

ರೇಪಕ್ಷಪಾತಾಜ್ಜಿಹ್ವಾರೋಗೀಭವಿಷ್ಯತಿ ॥೫೦॥ ಪುಣ್ಯಾಕ್ಷೇಪೀವಕ್ರನಾಸಃರಾಕ್ಷಸೋ ಧರ್ಮದೂಷಕಃ ।ತಪಸ್ವಿನಾಂಗುರೂಣಾಂಚದ್ವೇಷ್ಟಾವಕ್ರ ಮುಖೋಭವೇತ್ ॥ ೫೧ ॥ ಬ್ರಾಹ್ಮ್ಯಂಧರ್ಮಂ ಸಮುತ್ಸೃಜ್ಯಕ್ಷತ್ರ ಧರ್ಮಾನುಗೋಯದಿ । ಬ್ರಾಹ್ಮಣ್ಯಾತ್ಸ ಪರಿಭ್ರಷ್ಟಃ ಕ್ಷತ್ರಯೋನೌ ಪ್ರಜಾಯತೇ ॥ ೫೨ ॥ ಶೂದ್ರಸ್ಯಕರ್ಮ ವೈಶ್ಯಸ್ಯಕೃತ್ವಾತದ್ಭಾವಮಾಪ್ನುಯಾತ್ ॥ ಕ್ಷತ್ರಿಯೋಪಿಸ್ವಕಂ ಕರ್ಮ ತ್ಯಜನ್ನೆವಂಸಮಾಪ್ನುಯಾತ್ ॥ ೫೩ ॥ ಭರ್ತೃಸೌಖ್ಯೇನಯಾನಾರೀತ್ಯ

ತ್ತಾನೆ ॥ ॥೫೦॥

ಪುಣ್ಯಾಕ್ಷೇಪಿ–ಪುಣ್ಯವನ್ನು ದೂಷಿಸುವವನು,ವಕ್ರನಾಸಃ–ಚೊಟ್ಟದ ಮೂಗುಳ್ಳವನು, ಧರ್ಮ–ಧರ್ಮವನ್ನು,ದೂಷಕಃ–ದೂಷಿಸುವವನು, ರಾಕ್ಷಸಃ-ರಕ್ಕಸನು,ತಪಸ್ವಿನಾಂ-ತಪೋನಿರತರಾದವರನ್ನು,ಗುರೂಣಾಂ-ತಂದೆತಾಯಿ ಪುರೋಹಿತರನ್ನು,ದ್ವೇಷ್ಟಾ–ದ್ವೇಷಮಾಡುವವನು,ವಕ್ರಮುಖಃ–ವಿಕಾರವಾದ ಮುಖವುಳ್ಳವನು,ಭವೇತ್–ಆಗುವನು॥ ॥೫೧॥

ಯಃ–ಯಾವ ಬ್ರಾಹ್ಮಣನು, ಬ್ರಾಹ್ಮ್ಯಂ–ಬ್ರಾಹ್ಮಣಸಂಬಂಧವಾದ, ಧರ್ಮಂ–ನಡತೆಯನ್ನು, ಪರಿತ್ಯಜ್ಯ–ಬಿಟ್ಟು, ಕ್ಷತ್ರಧರ್ಮಾನುಗೋಯದಿ–ಕ್ಷತ್ರಿಯರ ನಡತೆಯನ್ನು ಅನುಸರಿಸಿರುವವನಾದರೆ, ಬ್ರಾಹ್ಮಣ್ಯಾತ್-ಬ್ರಾಹ್ಮಣವೃತ್ತಿಯಿಂದ, ಸಃ–ಅವನು, ಪರಿಭ್ರಷ್ಟಃ–ಪತಿತನಾಗಿ, ಕ್ಷತ್ರಯೋನೌ–ಕ್ಷತ್ರಿಯಯೋನಿಯಲ್ಲಿ, ಪ್ರಜಾಯತೇ-ಜನಿಸುತ್ತಾನೆ ॥ ॥೫೨॥

ಶೂದ್ರಸ್ಯ–ಶೂದ್ರನ, ವೈಶಸ್ಯ–ವೈಶ್ಯನ, ಕರ್ಮ–ಕ್ರಿಯೆಯನ್ನು, ಕೃತ್ವಾ–ಮಾಡಿ, ತದ್ಭಾವಂ–ಶೂದ್ರತ್ವವನ್ನು, ವೈಶ್ಯತ್ವವನ್ನು, ಆಪ್ನುಯಾತ್–ಪಡೆಯುವನು, ಕ್ಷತ್ರಿಯೋಪಿ–ಕ್ಷತ್ರಿಯ ಜಾತಿಯವನು, ಸ್ವಕಂ–ತನ್ನ ಜಾತಿಗೆ ಯೋಗ್ಯವಾದ, ಕರ್ಮ–ಕೆಲಸವನ್ನು, ತ್ಯಜನ್–ಬಿಡುತ್ತಿರುವವನಾಗಿ, ಏವಂ–ಹೀಗೆಯೇ, ಅಂದರೆ ಶೂದ್ರತ್ವವನ್ನು, ಸಮಾಪ್ನುಯಾತ್-ಹೊಂದುವನು ॥ ॥೫೩॥

ಭರ್ತೃ–ಗಂಡನ, ಸೌಖ್ಯೇನ–ಭೋಗದಿಂದ,ಯಾನಾರೀ–ಯಾವ ಹೆಂ

ಪ್ತಾನಭವತಿಸ್ಪೃಹಾಂ । ಪರೇಷುದೀಯತೇ ಸಾತುಶ್ಯೇನೀ
ಭವತಿಕರ್ಮತಃ । ತ್ರೀಣಿಪಂಚಚ ವರ್ಷಾಣಿಜನಿಂಪ್ರಾ
ಪ್ನೃಯಾತಿ ಭೂತಲೇ॥೫೮॥ ವಾಚಾತುಭರ್ತ್ಸನಂಕೃತ್ವಾಸನ್ನಿ
ರುಧ್ಯಪತಿಂಹ್ರಿಯಾ । ಪರ್ಯಂಕಾತ್ಪಾತಯೇದ್ಯಾತುಸಾನಾ
ರೀಫಲ್ಗುನೀಭವೇತ್ ॥೫೯॥ ಕ್ರಮಂಗತಸ್ಯಯಾಭರ್ತುಃ
ವಿದ್ಯಮಾನಂಧನಂ ಬಹು । ನದಚ್ಛತಿ ವರಾರೋಹಾವಿ

ಗಸು, ತೃಪ್ತಾ-ತೃಪ್ತಿಯನ್ನು ಪಡೆದವಳು, ನಭವತಿ-ಆಗುವದಿಲ್ಲ,ಸ್ಪೃ
ಹಾಂ-ತನ್ನ ಅಪೇಕ್ಷೆಯನ್ನು, ಪರೇಷು-ಅನ್ಯರಮೇಲೆ,ದೀಯ್ಯತೆ-ಅವ
ಳಿಂದ ಇರಿಸಲ್ಪಡುವದೊ, ಸಾ-ಆ ಹೆಂಗಸು,ಕರ್ಮತಃ-ತನ್ನ ಪಾಪಕರ್ಮ
ದಿಂದ,ಶ್ಯೇನೀ-ಹೆಣ್ಣುಹದ್ದು,ಭವತಿ-ಆಗುತ್ತಾಳೆ,ತ್ರೀಣಿಪಚಚವರ್ಷಾ
ಣಿ-೧೫ ವರ್ಷಗಳ ವರಿಗೂ, ಭೂತಲೇ-ಭೂಮಿಯಲ್ಲಿ, ಜನಿಂ-ಉತ್ಪತ್ತಿ
ಯನ್ನು, ಪ್ರಾಪ್ನೃಯಾತಿ-ಹೊಂದುವಳು, ॥ತಾ॥ ಗಂಡನಿಂದ ಉಂಟಾಗುವ
ರತಿಸುಖಕ್ಕೆ ತೃಪ್ತಳಾಗದೆ,ಪರಪುರುಷರಲ್ಲಿ ಮನಸ್ಸಿಡುವ ಹೆಂಗಸು ಹೆ
ಣ್ಣುಹದ್ದಾಗುವಳು, ಹದ್ದಾಗಿ ಹದಿನೈದು ವರ್ಷಗಳ ವರಿಗೂ, ಭೂ
ಮಿಯಲ್ಲಿರುತ್ತಾಳೆ ॥ ॥೫೮॥

ವಾಚಾ-ಮಾತಿನಿಂದ, ಪತಿಂ-ಗಂಡನನ್ನು, ಭರ್ತ್ಸನಂ-ಜಭರಿಸುವಿ
ಕೆಯನ್ನು, ಕೃತ್ವಾ-ಮಾಡಿ, ಹ್ರಿಯಾ-ನಾಚಿಕೆಯಿಂದ, ಸನ್ನಿರುಧ್ಯ-ನಿ
ರೋಧಿಸಿ, ಯಾತು-ಯಾವಳಾದರೆ, ಪರ್ಯಂಕಾತ್-ಮಂಚದಿಂದ, ಹಾಸಿ
ಗೆಯಿಂದ, ಪಾತಯೇತ್-ಕೆಡುವುತ್ತಾಳೊ, ಹೊರಡಿಸುತ್ತಾಳೋ, ಸಾ
ನಾರೀ-ಆಹೆಂಗಸು, ಫಲ್ಗುನೀ-ಕಲ್ಲು ಹತ್ತೀಗಿಡವು, ಭವೇತ್-ಆ
ದಾಳು॥ ॥೫೯॥

ಕ್ರಮಂಗತಸ್ಯ-ಕಷ್ಟವನ್ನು ಹೊಂದಿರುವವನಾದ, ಭರ್ತುಃ-ಗಂ
ಡನಿಗೆ, ಯಾ-ಯಾವ ಹೆಂಗಸು, ವಿದ್ಯಮಾನಂ-ತನ್ನಲ್ಲಿಸಿದ್ಧವಾಗಿರುವ,
ಬಹು-ಬಹಳವಾದ, ಧನಂ-ದ್ರವ್ಯವನ್ನು, ನಪ್ರಯಚ್ಛತಿ-ಕೊಡುವದಿಲ್ಲ,
ಸಾವರಾರೋಹಾ-ಆಹೆಂಗಸು, ವಿಷ್ಠಾಯಾಂ-ಅಮೇಧ್ಯದಲ್ಲಿ,ಕ್ರಿಮಿಃ-
ಹುಳವಾಗಿ, ಜಾಯತೆ, ಹುಟ್ಟುತ್ತಾಳೆ, ಕ್ರಿಮಿದೇಹಾತ್-ಅಮೇಧ್ಯ
ಹುಳವಾಗಿರುವ ಶರೀರದಿಂದ, ವಿನಿರ್ಮುಕ್ತಾ-ಬಿಡಲ್ಪಟ್ಟವಳಾಗಿ ಪಾ

ಷ್ಟಾಯಸ್ಯಾಂಜಾಯತೇಕ್ರಿಮಿಃ ॥ ಕ್ರಿಮಿರ್ದೇಹಾದ್ವಿನಿರ್ಮುಕ್ತಾ
ಪಾಠಕೀಟೋಭವಿಷ್ಯತಿ ॥೫೬॥ ಭರ್ತಾರಂರುತುಕಾಲೇತು
ಅರೋಗಾಯಾನಗಚ್ಛತಿ । ಪತಿಹೀನಾ ಭವೇತ್ಸಾತುಜನ್ಮ
ಜನ್ಮಾಂತರೇಕ್ರಮಾತ್॥೫೭॥ ಯೇನಯೇನೈವಭಾವೇನಯದ್ಯ
ತ್ಕರ್ಮಶುಭಾಶುಭಂ।ಯಾದೃಶಂಯಾದೃಶಂಕುರ್ಯಾಜ್ಜನ
ಸ್ತತ್ಫಲಮವಾಪ್ನುಯಾತ್ ॥ ೫೮ ॥ ಪಾಪಿನೋನರಕಂಗತ್ವಾ
ಪ್ರಾಪ್ಯತಾಂನಾರಕೀಂವ್ಯಥಾಂ । ಕರ್ಮಾನುಬದ್ಧಚಿಹ್ನಾ

ಠಕೀಟಾ—ಮರವನ್ನು ಕೊರೆಯುವ ದುಂಬಿಯು, ಭವಿಷ್ಯತಿ— ಆ
ಗುವಳು ॥ ॥೫೬॥

ಭರ್ತಾರಂ—ಗಂಡನನ್ನು, ರುತುಕಾಲೇತು—ರುತುವಾದ ಹದಿನಾರು ದಿನಗಳ ಕಾಲದೊಳಗೆ, ಅರೋಗಾ—ರೋಗವಿಲ್ಲದವಳಾಗಿ ಯಿದ್ದಾಗ್ಯೂ, ಯಾ-ಯಾವ ಹೆಂಗಸು, ನಗಛ್ಛತಿ, ಹೊಂದುವದಿಲ್ಲವೋ, ಕ್ರಮಾತ್-ಪಾಜ್ತವಾಗಿ, ಜನ್ಮಜನ್ಮಾಂತರೇ—ಏಳು ಜನ್ಮಗಳವರಿಗೆ, ಸಾ-ಆಹೆಂಗಸು, ಪತಿಹೀನಾ—ವಿಧವೆಯಾದವಳು, ಭವೇತ್—ಆದಾಳು ॥ ॥೫೭॥

ಯೇನಯೇನ ಯಾವಯಾವ ಭಾವೇನೈವ-ಅಭಿಪ್ರಾಯದಿಂದಲೇ, ಶುಭಾಶುಭಂ—ಪುಣ್ಯಪಾಪಾತ್ಮಕವಾದ, ಕರ್ಮ—ಕಾರ್ಯವನ್ನು, ಯಾದೃಶಂಯಾದೃಶಂ-ಯಂಥಾ ಯಂಥಾದ್ದನ್ನು, ಕುರ್ಯಾತ್—ಮಾಡುವರೋ, ಜನಃ-ಜನವು, ತತ್ಫಲಂ-ಆಯಾಯಿ ಕರ್ಮಾನುಗುಣವಾದ ಅಭಿಪ್ರಾಯಾನುಗುಣವಾದ ಪ್ರತಿಫಲವನ್ನು, ಆಪ್ನುಯಾತ್-ಹೊಂದುವನು ॥ ॥೫೮॥

ಪಾಪಿನಃ-ದೋಷಿಗಳು, ನರಕಂ—ನಿರಯವನ್ನು, ಗತ್ವಾ—ಸೇರಿ, ತಾಂ—ಆ, ನಾರಕೀಂ—ನರಕಸಂಬಂಧವಾದ, ವ್ಯಥಾಂ—ದುಃಖವನ್ನು, ಪ್ರಾಪ್ಯ—ಹೊಂದಿ, ತೇ-ಅವರು, ಭುವಿ-ಭೂಲೋಕದಲ್ಲಿ, ಕರ್ಮಾನುಬದ್ಧಚಿಹ್ನಾಃ—ತಾವು-ಪೂರ್ವದಲ್ಲಿ ಮಾಡಿದ ಪುಣ್ಯಪಾಪ ಕರ್ಮದಿಂದ ಕೂಡಿರುವ ಕುರುಹುಗಳುಳ್ಳವರಾಗಿ, ಜಾಯಂತೇ-ಹುಟ್ಟುತ್ತಾರೆ, ತಚ್ಛ—ಅವ

ಸ್ತ್ರೀಪಾಯಂತೆಭಾವಿತೋರ್ಕ್ಶ್ಯಣು ॥ ॥೫೯॥

ಇತಿ ಶ್ರೀ ಭವಿಷ್ಯೋತ್ತರಪುರಾಣೆ ವೆಂಕಟೇಶಮಾ
ಹಾತ್ಮ್ಯೆ ಉತ್ತರಭಾಗೆ ಪಾಪಪರಿಪಾಕ
ನರಕಾನುಭವ ಕಥನಂ ನಾಮ
ಷಷ್ಠೋಽಧ್ಯಾಯಃ ॥

---

ಶುಗಳನ್ನು, ಶೃಣು-ಕೇಳು ॥ ॥೫೯॥

ಇಂತು ಭವಿಷ್ಯೋತ್ತರಪುರಾಣದೊಳು ವೆಂಕಟೇಶ
ಮಹಾತ್ಮ್ಯೆಯ ವುತ್ತರಭಾಗದಲ್ಲಿ ಪಾಪ
ಪರಿಪಾಕ ನರಕಾನುಭವಕಥನವೆಂಬ
ಆರನೇ ಅಧ್ಯಾಯವು.

---

ಶ್ರೀನಿವಾಸಃ॥ ದಂಷ್ಟ್ರಿಭ್ಯಶ್ಚನಖಿಭ್ಯಶ್ಚಚಂಡಾಲಾ
ದ್ಬ್ರಾಹ್ಮಣಾತ್ತಥಾ।ಮಂದಿರಾತ್ಪತನಾಚ್ಚಾಪಿದ್ರುಮಾಚ್ಚ
ಪತನಾತ್ತಥಾ॥ಶೃಂಗಿಭ್ಯಶ್ಚವಿಷೇಭ್ಯಶ್ಚಮರಣಂಪಾಪಕರ್ಮ
ಣಾಂ॥ ೧ ॥ ಅವಟೇಮರಣಂಚಾಪಿತಟಾಕಾದಿಷುಪಾಪಿನಾಂ।

ದಂಷ್ಟ್ರಿಭ್ಯಃ-ಹಾವು ಮುಂತಾದವುಗಳ ದೆಶೆಯಿಂದ, ನಖಿಭ್ಯಶ್ಚ-ಹುಲಿಕರಡಿಮುಂತಾದ ಜೀವಿಗಳ ದೆಶೆಯಿಂದ,ಚಂಡಾಲಾತ್-ಅಂತ್ಯಜನ ದೆಶೆಯಿಂದ, ಬ್ರಾಹ್ಮಣಾತ್-ಬ್ರಾಹ್ಮಣನಿಂದ, ತಥಾ-ಹಾಗೆ,ಮಂದಿರಾತ್-ಮನೆಯಿಂದ,ಪತನಾಚ್ಚಾಪಿ-ಬೀಳುವದ್ದರಿಂದ,ದ್ರುಮಾಚ್ಚ-ಮರದಿಂದ, ಪತನಾತ್-ಬೀಳುವದ್ದರಿಂದ, ತಥಾ-ಹಾಗೆ, ಶೃಂಗಿಭ್ಯಶ್ಚ-ಯೆತ್ತು ಕೋಣ ಮುಂತಾದ ಪಶುಗಳಿಂದ, ವಿಷೇಭ್ಯಶ್ಚ-ಪಾಷಾಣ ಅಫೀಮು ಮುಂತಾದ ವಿಷವಸ್ತುಗಳಿಂದಲೂ, ಪಾಪಕರ್ಮಣಾಂ-ಪಾಪಿಷ್ಠರಾದವರಿಗೆ, ಮರಣಂ-ಸಾಯುವಿಕೆಯು, (ಭವತಿ-ಉಂಟಾಗುವದು) ॥೧॥

ಪಾಪಿನಾಂ-ಪಾಪಿಷ್ಠರಿಗೆ, ಅವಟೇ-ಗುಂಡಿಯಲ್ಲಿ, ಹಾಳು ಭಾವಿಯಲ್ಲಿ, ಹಗೇವಿನಲ್ಲಿ, ತಟಾಕಾದಿಷು-ಕೆರೆಭಾವಿ ಕೊಳ ನದಿಸರಸ್ಸುಗಳಲ್ಲಿ, ಮರ

ದಂಡ ಶಸ್ತ್ರ ಪ್ರಪಾತಾಚ್ಚ ಔಷಧೀನಾಂ ಚಸೇವನಾ
ತ್ ‖೧‖ ತಾಡನಾತ್ತಾಡನಂಯಾತಿ ಹತ್ವಾವಧಮವಾಪ್ನು
ಯಾತ್ । ಹಾರಿತೋಹಾರ್ಯತೇಚಾಪಿಗತಿಃ ಪಾಪಾತ್ಮನಾಮಿ
ಯಂ ‖೨‖ ನಾಸ್ತಿಕಾನಿಷ್ಕ್ರಿಯಾ ಕ್ರೂರಾಃಗುರುಶಾ
ಸ್ತ್ರಾತಿಲಂಘನಃ । ಅಧರ್ಮನಿರತಾಚಾರಾಃಕುಶೀಲಾಶ್ಚ

ಞಂ–ಸಾಯುವಿಕೆ,(ಭವತಿ–ಉಂಟಾಗುವದು)ದಂಡಶಸ್ತ್ರ ಪ್ರಪಾತಾಚ್ಚ–ದೊಣ್ಣೆ ಕತ್ತಿಮುಂತಾದ ಆಯುಧಗಳ, ಪ್ರಪಾತಾಚ್ಚ–ಬೀಳುವಿಕೆಯಿಂದಲೂ, ಪೆಟ್ಟನಿಂದಲೂ, ಔಷಧೀನಾಂ ಬಂಗಿ ಅಫೀಮು ಮುಂತಾದ ಕ್ರೂರವಸ್ತುಗಳನ್ನು ಸೇವಿಸುತ್ತಿರುವದರಿಂದಲೂ, (ಮರಣಂ–ಮೃತಿಯು, ಭವತಿ–ಉಂಟಾಗುವದು) ‖೧‖

ತಾಡನಾತ್–ತಾನು ಇತರರನ್ನು ಹೊಡೆಯುವದ್ದರಿಂದ, ತಾಡನಂ–ಪೆಟ್ಟನ್ನು, ಯಾತಿ–ಪಡೆಯುತ್ತಾನೆ. ಹತ್ವಾ–ಕೊಂದು, ವಧಂ–ಕೊಲ್ಲುವಿಕೆಯನ್ನು, ಅವಾಪ್ನುಯಾತ್–ಪಡೆಯುತ್ತಾನೆ, ಹಾರಿತಃ–ಅಪಹರಿಸಲ್ಪಟ್ಟವನು, ಹಾರ್ಯತೆ–ಅಪಹರಿಸಲ್ಪಡುವನು, ಪಾಪಾತ್ಮನಾಂ–ಪಾಪಬುದ್ಧಿಯುಳ್ಳವರಿಗೆ, ಇಯಂ–ಇದು, ಗತಿಃ–ಉಂಟಾಗುವ ಶಿಕ್ಷೆಯು. ‖ತಾ‖ ಅನ್ಯನನ್ನು ಹೊಡದವನು ತಾನೂ ಅನ್ಯನಿಂದ ಹೊಡೆಯಲ್ಪಡುವನು. ಕೊಂದವನು ಕೊಲ್ಲಲ್ಪಡುವನು, ಅಪಹರಿಸಿದವನು ಅಪಹರಿಸಲ್ಪಡುವನು, ಇದು ಪಾಪಿಷ್ಠರಿಗೆ ಉಂಟಾಗುವ ಯಾತನಾಗತಿಯಾಗಿರುತ್ತೆ ‖ ‖೨‖

ನಾಸ್ತಿಕಾಃ–ದೇವರೇ ಇಲ್ಲ, ಇರುವದೇ ಸುಖವು, ಸಾಯುವದೇ ಮೋಕ್ಷವು ಎಂಬದಾಗಿ ತಿಳಿದಿರುವವರು, ನಿಷ್ಕ್ರಿಯಾಃ–ಕರ್ಮಭ್ರಷ್ಠರು, ಕ್ರೂರಾಃ–ಕಠಿನರು, ಗುರುಶಾಸ್ತ್ರಾತಿಲಂಘನಃ–ಆಚಾರ್ಯನನ್ನು, ಧರ್ಮಶಾಸ್ತ್ರವನ್ನು ಅತಿಕ್ರಮಿಸಿ ನಡೆಯುವವರು, ಅಧರ್ಮ–ಅನ್ಯಾಯದಲ್ಲಿ, ನಿರತ–ಆಸಕ್ತವಾದ, ಆಚಾರಾಃ–ನಡೆತೆಯುಳ್ಳವರು. ಕುಶೀಲಾಃ– ಕುತ್ಸಿತಸ್ವಭಾವವುಳ್ಳವರು, (ಇವರುಗಳೆಲ್ಲರೂ,) ಗತಾಯುಷಃ–ಆಯುರ್ಹೀನರಾಗುವರು,ಅಂದರೆ ಬಾಲ್ಯದಲ್ಲಿಯೇ ಸಾಯು

ಗತಾಯುಷಃ ||೪|| ಯೋಶ್ಚಾನಧ್ಯಯನೇಕಾಲೇಮೋಹಾದಭ್ಯ
ಸ್ಯತೇದ್ವಿಜಃ|ನಿತ್ಯೋಚ್ಛಿಷ್ಟಸ್ಸೂಚಕಶ್ಚನೇಹಾಯುರ್ವಿಂದ
ತೇಚಿರಂ ||೫|| ಪ್ರತ್ಯಾದಿತ್ಯಂ ಪ್ರತ್ಯನಲಂ ಪ್ರತಿಗಾಂಚಪ್ರ
ತಿದ್ವಿಜಂ | ಯೇಮೇಹಂತಿ ಪಥಿಚತೇಭವಂತಿ ಗತಾಯು
ಷಃ ||೬|| ಅಧರ್ಮಜ್ಞಾಗತಾಚಾರಾಃ ನಿತ್ಯಂಸಂಕೀರ್ಣಮೈ
ಥುನಾಃ | ಅಲ್ಪಾಯುಷೋಭವಂತೀಹನರಾನಿರಯಗಾಮಿ

ತ್ತಾರೆ || ||೪||

ಯಃ-ಯಾವ, ದ್ವಿಜಃ-ಬ್ರಾಹ್ಮಣನು, ಅನಧ್ಯಯನೇಕಾಲೇ-ವೇದವನ್ನು ಅಭ್ಯಾಸಮಾಡಬಾರದ, ಅಷ್ಟಮೀ,ಪ್ರದೋಷ,ಚತುರ್ದಶಿ,ಅಮಾವಾಸ್ಯೆ ಪ್ರತಿಪತ್ತುಗಳ ಸಮಯದಲ್ಲಿ,ಮೋಹಾತ್-ಅಜ್ಞಾನದಿಂದ, ಅಭ್ಯಸ್ಯತೆ-ವೇದವನ್ನು ಕಲಿಯುತ್ತಾನೆ, ಅವನು ನಿತ್ಯೋಛಿಷ್ಟಃ-ಯಾವಾಗಲೂ ಅಶುಚಿಯಾಗಿರುವವನು,ಸೂಚಕಶ್ಚ-ಕ್ಷುದ್ರವನ್ನು ಹೇಳುವವನು, ಅಥವಾ ಪಿಶುನನು, ಇಹ-ಈ ಲೋಕದಲ್ಲಿ, ಚಿರಂ-ಬಹುಕಾಲದವರಿಗೆ, ಆಯುಃ-ಆಯುಸ್ಸನ್ನು, ನವಿಂದತೆ-ಹೊಂದಿರುವದಿಲ್ಲ || ||೫||

ಪ್ರತ್ಯಾದಿತ್ಯಂ-ಸೂರ್ಯನಿಗೆ ಎದುರಾಗಿಯೂ, ಪ್ರತ್ಯನಲಂ-ಅಗ್ನಿಗೆ ಎದುರಾಗಿಯೂ,ಪ್ರತಿಗಾಂ-ಹಸುವಿಗೆ ಎದುರಾಗಿಯೂ, ಪ್ರತಿದ್ವಿಜಂ-ಬ್ರಾಹ್ಮಣನಿಗೆ ಎದುರಾಗಿಯೂ, ಪಥಿಚ-ದಾರಿಯಲ್ಲಿಯೂ, ಯೆ-ಯಾರು, ಮೇಹಯಂತಿ-ವಿರ್ಯೋತ್ಸರ್ಗವನ್ನು ಮಾಡುವರೋ, ಅಂದರೆ ಸ್ತ್ರೀಸಂಯೋಗವನ್ನು ಮಾಡುತ್ತಾರೋ,ತೆ-ಅವರು,ಗತಾಯುಷಃ-ಆಯುರ್ಹೀನರಾಗುವರು || ||೬||

ಅಧರ್ಮಜ್ಞಾಃ-ಧರ್ಮವನ್ನು ತಿಳಿಯದೇ ಇರುವವರು, ಗತಾಚಾರಾಃ-ವರ್ಣಾಶ್ರಮೋಚಿತಧರ್ಮಗಳನ್ನು ಬಿಟ್ಟವರು,ನಿತ್ಯಂ-ಪ್ರತಿದಿನದಲ್ಲಿ, ಸಂಕೀರ್ಣ-ಮಿತ್ರರಿಂದ ಕೂಡಿರುವ, ಮೈಥುನಾಃ-ಕ್ರೀಡೆಯುಳ್ಳವರಾದವರು, ಅಂದರೆ ಒಬ್ಬಳಾದ ಸ್ತ್ರೀಯಲ್ಲಿ ಮಿತ್ರರೆಲ್ಲರೂ ಸೇರಿ,ಒಂದು ದಿನದಲ್ಲಿಯೇ ಸಂಗಮವನ್ನು ಮಾಡುವವರಾದ, ನರಾಃ-ಮನುಷ್ಯರು, ಅಲ್ಪಾಯುಷಃ-ಕೊಂಚವಾದ ಆಯುಸ್ಸುಳ್ಳವರಾದವರು, ಇಹ-ಈ ಲೋಕದಲ್ಲಿ, ಭವಂತಿ-ಆಗುತ್ತಾರೆ, (ಅಬಳಿಕ) ನಿರಯ-ನರಕವನ್ನು, ಗಾಮಿ

ನಃ ॥೭॥ ಹೃದ್ರೋಗೀ ಮನುಜೋ ಭೂಯಾದ್ದೇವದ್ರವ್ಯೋಪ
ಜೀವನಾತ್। ಬ್ರಾಹ್ಮಣಾಯ ಪ್ರತಿಜ್ಞಾತಾಮದತ್ವಾಲ್ಪಾ
ಯುರಶ್ನುತೆ ॥೮॥ ಕುಷ್ಠೀ ದ್ವಿಜಘ್ನೋ ಭವತಿ ಕುನಖೀ ಸ್ವ
ರ್ಣಹಾರಕಃ । ಅಧರ್ಮಿಣೋ ವ್ಯಂಗ್ಯಯುತಾಃ ತತ್ತಲ್ಲಿಂಗಾ
ಸ್ತು ಹಿಂಸಕಾಃ ॥೯॥ ಪರಸ್ಯ ದುಃಖದೋ ನಿತ್ಯಮಂಧೋ ಭವತಿ
ಮಾನವಃ। ಪರದಾರಾಭಿಗಾಮೀ ತು ದೀರ್ಘರೋಗೀ ಪುಮಾನ್

ನಃ-ಹೊಂದುತ್ತಾರೆ ॥ ॥೭॥

ಮನುಜಃ-ಮನುಷ್ಯನು, ದೇವದ್ರವ್ಯ-ದೇವರುಗಳ ಹಣದಿಂದ, ಉಪಜೀವನಾತ್-ಬದುಕುತ್ತಿರುವದರಿಂದ, ಹೃದ್ರೋಗೀ-ಹೃದಯಶೂಲಾದಿ ರೋಗವುಳ್ಳವನು, ಭೂಯಾತ್-ಆದಾನು, ಬ್ರಾಹ್ಮಣಾಯ-ದ್ವಿಜನಿಗೆ, ಪ್ರತಿಜ್ಞಾತಾಂ-ವಾಗ್ದಾನಮಾಡಿದ್ದ ವಸ್ತುವನ್ನು, ಅದತ್ವಾ-ಕೊಡದೆ, ಅಲ್ಪಾಯುಃ-ಸ್ವಲ್ಪಕಾಲವು ಬದುಕೋಣವನ್ನು, ಅಶ್ನುತೆ-ಪಡೆಯುವನು ॥ ॥೮॥

ದ್ವಿಜ-ಬ್ರಾಹ್ಮಣನನ್ನು, ಘ್ನಃ-ಕೊಂದವನು, ಕುಷ್ಠೀ-ಕುಷ್ಠರೋಗವುಳ್ಳವನು, ಭವತಿ-ಆಗುತ್ತಾನೆ, ಸ್ವರ್ಣಹಾರಕಃ-ಭಂಗಾರವನ್ನು ಕದ್ದವನು, ಕುನಖಃ-ಕೆಟ್ಟ ಉಗುರುಗಳುಳ್ಳವನು, ಭವತಿ-ಆಗುತಾನೆ, ಅಧರ್ಮಿಣಃ-ಧರ್ಮಮಾರ್ಗವನ್ನು ಬಿಟ್ಟವರು, ವ್ಯಂಗ್ಯಯುಕ್ತಾಃ-ಮಂಗು, ತೊನ್ನು, ಮಚ್ಚೆಗಳು, ಶಿಬ್ಬಗಳುಳ್ಳವರು, ಹಿಂಸಕಾಃ-ಜನರನ್ನು ಹಿಂಸಿಸಿದವರು, ತತ್ತಲ್ಲಿಂಗಾಃ-ಆಯಾಯ ಹಿಂಸಾನುಸಾರವಾಗಿ ಅಂಗಹೀನ ಮಚ್ಚೆಗಳು, ಕುರೂಪ, ಮೆಳ್ಳಗಣ್ಣು ಮುಂತಾದ ಗುರ್ತುಗಳುಳ್ಳವರು, (ಭವಂತಿ-ಆಗುತ್ತಾರೆ.) ॥ ॥೯॥

ಪರಸ್ಯ-ಅನ್ಯನಿಗೆ, ನಿತ್ಯಂ-ಯಾವಾಗಲೂ, ದುಃಖದಃ-ದುಃಖವನ್ನು ಮಾಡಿದವನಾದ, ಮಾನವಃ-ಮನುಷ್ಯನು, ಅಂಧಃ-ಕುರುಡನು, ಭವತಿ-ಆಗುತ್ತಾನೆ, ಪರದಾರಭಿಗಾಮೀ-ಅನ್ಯರ ಹೆಂಡರಲ್ಲಿ ಗಮಿಸಿದವನಾದ, ಪುಮಾನ್-ಪುರುಷನು, ದೀರ್ಘರೋಗೀ-ಬಹುಕಾಲ ಅನುಭವಿಸಿದ್ಧ

ಭವೇತ್ ॥ ೧೦ ॥ ದೃಷ್ಟಿಹರ್ತಾಚಜಾತ್ಯಂಧಃಶ್ರೋತ್ರ
ಹಾಬಧಿರೋಭವೇತ್ ॥ ವಾಚಾಂಹರ್ತಾತುಮೂಕಸ್ಸ್ಯಾತ್
ಕರ್ಣರೋಗೀತುಕರ್ಣಹಾ ॥ ೧೧ ॥ ಯೇನಯಂಗಂಬಾಧ್ಯತೇ
ಯೇನತದಂಗಂತಸ್ಯಬಾಧ್ಯತೇ ॥ ಅಕೃತ್ವಾಲಭತೇನೈವಶುಭಂ
ವಾಯದಿವಾಶುಭಂ ॥೧೨॥ ನೃವಧೇಪ್ಯರ್ಶರೋಗೀಸ್ಯಾತ್
ಕ್ಷಯೀಸ್ಯಾತ್ಕ್ಷತ್ರಮಾರಣೇ ॥ ಸ್ವನಾರೀಹಿಂಸಕೋಮರ್ತ್ಯೋ

ರೋ ತೀರದ ರೋಗವುಳ್ಳವನು, ಭವೇತ್-ಆಗುವನು ॥ ॥೧೦॥

ದೃಷ್ಟಿಹರ್ತಾ-ಅನ್ಯನ ಕಣ್ಣನ್ನು ಹೋಗಲಾಡಿಸಿದವನು, ಜಾತ್ಯಂಧಃ-ಹುಟ್ಟುಕುರುಡನಾಗುವನು, ಶ್ರೋತ್ರಹಾ--ಕಿವಿಯನ್ನು ಕೊಯಿದವನು, ಬಧಿರಃ--ಕಿವುಡನು, ಭವೇತ್-ಆಗುವನು, ವಾಚಾಂ-ಮಾತುಗಳನ್ನು, ಹರ್ತಾ-ಕದ್ದವನು, ಅಂದರೆ ಇತರರು ಮಾಡಿದ ಪುಸ್ತಕ ಮುಂತಾದ್ದನ್ನು ಅಪಹರಿಸಿ, ತಾನು ಮಾಡಿದಂತೆ ಗ್ರಂಥಚೋರನಾದವನು, ಮೂಕಃ--ಮೂಗನು, ಸ್ಯಾತ್-ಆದಾನು, ಕರ್ಣಹಾ-ಕಿವಿಯನ್ನು, ಬಾಧೆಪಡಿಸಿದವನು, ಕರ್ಣರೋಗೀ-ಕಿವಿಸ್ರೋಟು ರೋಗವುಳ್ಳವನಾಗುವನು ॥ ॥೧೧॥

ಯೇನ-ಯಾವ ಮನುಷ್ಯನಿಂದ, ಯದಂಗಂ-ಯಾವ ಅಂಗವು, ಬಾಧ್ಯತೇ-ಬಾಧಿಸಲ್ಪಡುತ್ತಿಯೋ, ತಸ್ಯ-ಅವನಿಗೆ, ತದಂಗಂ-ಆ ಅವಯವವು, ಬಾಧ್ಯತೇ-ಬಾಧಿಸಲ್ಪಡುವದು, ಶುಭಂವಾ-ಒಳ್ಳೇದನ್ನು ಆದಾಗ್ಯೂ, ಅಶುಭಂವಾ-ಕೆಟ್ಟದ್ದನ್ನಾಗಲಿ, ಅಕೃತ್ವಾಯದಿ-ಮಾಡದೇ ಇದ್ದರೆ, ನೈವಲಭತೇ-ಹೊಂದುವದಿಲ್ಲವು ॥ ॥೧೨॥

ನೃವಧೇಪಿ-ಮನುಷ್ಯನನ್ನು ಕೊಂದಲ್ಲಿ, ಅರ್ಶರೋಗೀ-ಮೂಲವ್ಯಾಧಿರೋಗವುಳ್ಳವನು, ಸ್ಯಾತ್-ಆಗುವನು, ಕ್ಷತ್ರ-ಕ್ಷತ್ರಿಯಜಾತಿಯವನನ್ನು, ಮಾರಣೇ--ಕೊಲ್ಲುವವರಲ್ಲಿ, ಕ್ಷಯೀ-ಕ್ಷಯರೋಗವುಳ್ಳವನು, ಸ್ಯಾತ್-ಆಗುವನು, ಸ್ವ-ತನ್ನ, ನಾರೀ-ಹೆಂಗಸನ್ನು, ಹಿಂಸಕಃ-ಕೊಲೆಮಾಡಿದವನಾದ, ಮರ್ತ್ಯಃ-ಮನುಷ್ಯನು, ಜಲೋದರ-ಜಲೋದರ

ಜಲೋದರಯುತೋಭವೇತ್ ॥ ೧೩ ॥ ಕರ್ಣಚ್ಛೇತ್ತಾ ಕರ್ಣ
ಶೂಲೀ, ಓಷ್ಠರೋಗ್ಯೋಷ್ಠನಾಶಕಃ ॥ ದಂತಪಾತನಕ
ರ್ತಾತುದಂತರೋಗೀಭವೇನ್ನರಃ ॥೧೪॥ಮನುಷ್ಯಾಣಾಂಹಿಂ
ಸಕಶ್ಚಮೂಲಶೂಲೀಭವಿಷ್ಯತಿ।ಪಿಶಾಚತಾಂಪಿತೃಘ್ನಸ್ತು
ಜಾತ್ಯಂಧೋಮಾತೃಘಾತಕಃ ॥೧೫॥ ಪ್ರಾಣ್ಯಂಗಂಮೃಗ
ಪ್ರೋತಂಚಹತ್ವಾಮರ್ತ್ಯೋಮೃತಪ್ರಜಃ ॥ ಬಾಲಘ್ನಸ್ಸ್ಪ
ರ್ಶರೋಗೀಸ್ಯಾತ್ಕ್ಷಯೀಸ್ಯಾತ್ಸರ್ವಜೀವಹಾ ॥೧೬॥ ರಸನಾ
ಛೇದಕೋಮರ್ತ್ಯೋರಸನಾವ್ರಣವಾನ್ಭವೇತ್ । ಸರ್ವಜ್ವ

ವೆಂಬ ವ್ಯಾಧಿಯಿಂದ, ಯುತಃ-ಕೂಡಿದವನು, ಭವೇತ್-ಆಗುವನು॥೧೩॥
ಕರ್ಣ-ಛೇತ್ತಾ, ಕಿವಿಗಳನ್ನು ಕೊಯಿದವನು, ಕರ್ಣಶೂಲೀ-ಕಿವಿ
ಯ ಶೂಲೆವುಳ್ಳವನು, ಓಷ್ಠನಾಶಕಃ-ತುಟಿಯನ್ನು ಭಂಗಮಾಡಿದವ
ನು, ಓಷ್ಠರೋಗಿ-ತುಟಿಯ ರೋಗವುಳ್ಳವನು, ದಂತಪಾತನಕರ್ತಾ-
ಹಲ್ಲುಗಳನ್ನು ಕೆಡವಿದವನಾದ, ನರಃ-ಮನುಷ್ಯನು, ದಂತರೋಗೀ-ಹ
ಲ್ಲುಗಳ ಶೂಲೆವುಳ್ಳವನು, ಭವೇತ್-ಆದಾನು ॥ ॥೧೪॥
ಮನುಷ್ಯಾಣಾಂ-ಮನುಷ್ಯರ, ಹಿಂಸಕಃ-ಕೊಲೆಗಾರನು, ಮೂಲ
ಶೂಲೀ-ಗುದಸ್ಥಾನದಲ್ಲಿ ಶೂಲೆಯುಳ್ಳವನು, ಭವಿಷ್ಯತಿ-ಆಗುತ್ತಾನೆ, ಪಿ
ತೃಘ್ನಃ-ಪಿತೃಹತ್ಯೆಯನ್ನು ಮಾಡಿದವನು, ಪಿಶಾಚತಾಂ-ಪಿಶಾಚತ್ವವ
ನ್ನು ಪ್ರಾಪ್ಸ್ಯತಿ-ಪಡೆಯುವನು, ಮಾತೃಘಾತಕಃ-ತಾಯಿಯನ್ನು
ಕೊಂದವನು,ಜಾತ್ಯಂಧಃ-ಹುಟ್ಟುಕುರುಡನು, ಭವತಿ-ಆಗುತ್ತಾನೆ॥೧೫॥
ಪ್ರಾಣಿ-ಜೀವಿಗಳ, ಅಂಗಂ-ಅವಯವವನ್ನು, ಮರ್ತ್ಯಃ-ನರನು,
ಹತ್ವಾ-ಹೊಡದು, ಮೃಗಪ್ರೋತಂ-ಎಳೇ ಜಿಂಕೆಯನ್ನು,ಹತ್ವಾ-ಕೊಂ
ದು, ಮೃತಪ್ರಜಃ-ಸತ್ತು ಹುಟ್ಟುವ ಸಂತಾನವುಳ್ಳವನು, ಭವಿಷ್ಯತಿ-
ಆಗುತ್ತಾನೆ, ಬಾಲಘ್ನಃ-ಹುಡುಗನನ್ನು ಕೊಂದವನು, ಸ್ಪರ್ಶರೋ
ಗೀ-ಇತರರು ಮುಟ್ಟಿದರೆ ಬಾಧೆಯಾಗುವ ರೋಗವುಳ್ಳವನು,ಸ್ಯಾತ್-
ಆಗುವನು, ಸರ್ವ-ಸಕಲವಾದ, ಜೀವಹಾ-ಪ್ರಾಣಿಗಳನ್ನು ಕೊಲ್ಲುವವ
ನು, ಕ್ಷಯೀ-ಕ್ಷಯರೋಗವುಳ್ಳವನು, ಸ್ಯಾತ್-ಆದಾನು ॥ ॥೧೬॥
ರಸನಾಛೇದಕಃ-ಹೆರರನಾಲಿಗೆಯನ್ನು ಕತ್ತರಿಸಿದವನಾದ,ಮರ್ತ್ಯಃ-ಮ

ರೀ ಕೃತಘ್ನಸ್ತು ಜಂತುಹಂತಾ ಮೃತಪ್ರಜಃ ॥೧೩॥ ನಾಡೀ
ವ್ರಣೀ ಸ ಭವತಿ ವೃಕ್ಷಛೇತ್ತಾ ವೃಥಾ ನರಃ। ವನಸ್ಪತೀನಾಂ ಹನ
ನೇ ರತಃ ಸ್ಫುಟಿತಪಾದಕಃ ॥೧೪॥ ವಲ್ಮೀಕಸ್ಥೋರಗಂ ಹತ್ವಾ
ಗಜಚರ್ಮಾ ಜ್ವರೀ ಭವೇತ್ ॥ ಭ್ರೂಣಹಾ ಸ್ವಿನ್ನಹಸ್ತಸ್ಸ್ಯಾ
ದ್ವೃಹಿಣೀ ದಾಸಪತ್ನ್ಯಪಿ ॥೧೫॥ ಪತಂಗಕ್ರಿಮಿಕೀಟಾನಾಂ
ಪಕ್ಷಿಣಾಂ ವಿಡ್ಭುಜಾಂ ತಥಾ। ಸುರಾಪೋ ಯೋನಿಮಾಸಾದ್ಯ

ನುಷ್ಯನು, ರಸನಾವ್ರಣವಾನ್–ನಾಲಿಗೆಯಲ್ಲಿ ಹುಣ್ಣುಳ್ಳವನು, ಭವೇತ್-ಆದಾನು, ಕೃತಘ್ನಸ್ತು-ಮಾಡಿದ ಉಪಕಾರವನ್ನು ಎಣಿಸದವನು, ಸರ್ವಜ್ವರೀ–ಏಕಾಹಿಕದ್ವ್ಯಾಹಿಕತ್ರಾಹಿಕಚಾತುರ್ಥಿಕಾದಿ ಸಮಸ್ತ ಜ್ವರರೋಗವುಳ್ಳವನು, ಜಂತುಹಂತಾ–ಹಾವುಗಳನ್ನು ಕೊಲ್ಲುವವನು, ಮೃತಪ್ರಜಃ–ಸಾಯುವ ಸಂತಾನವುಳ್ಳವನು,ಆಗುವನು ॥ ॥೧೩॥

ನರಃ-ಮನುಷ್ಯನು, ಸದಾ–ಯಾವಾಗಲೂ, ವೃಥಾ–ದೇವೋದ್ದೇಶ್ಯವಿಲ್ಲದೆ. ವೃಕ್ಷಛೇತ್ತಾ-ಮರಗಳನ್ನು ಕಡಿಯುವವನಾದರೆ, ಸಃ-ಅವನು, ನಾಡೀವ್ರಣೀ–ನಾಡೀ ಮಾರ್ಗಗಳಲ್ಲಿ ಹುಣ್ಣುಳ್ಳವನು, ಭವತಿ–ಆಗುವನು, ವನಸ್ಪತೀನಾಂ–ಹುವ್ವನ್ನು ಬಿಡದೇಲೆ ಫಲಗಳುಂಟಾಗುವ ಮರಗಳ, ಹನನೆ–ಛೇದನದಲ್ಲಿ, ರತಃ-ನಿರತನಾದವನು, ಸ್ಫುಟಿತ–ಒಡದಿರುವ, ಪಾದಕಃ–ಹೆಜ್ಜೆಗಳುಳ್ಳವನು, (ಭವತಿ–ಆಗುತ್ತಾನೆ) ॥ ॥೧೪॥

ವಲ್ಮೀಕಸ್ಥೋರಗಂ–ಹುತ್ತದಲ್ಲಿರುವ ಸರ್ಪವನ್ನು, ಹತ್ವಾ-ಕೊಂದು, ಗಜಚರ್ಮಾ–ಆನೆಯಚರ್ಮದಂತೆ-ಚರ್ಮವುಳ್ಳವನು, ಜ್ವರೀ–ಜ್ವರರೋಗವುಳ್ಳವನು, ಭವೇತ್-ಆದಾನು, ಭ್ರೂಣಹಾ–ಗರ್ಭಸ್ರಾವವಾಗುವಂತೆ ಉಪಾಯವನ್ನು ಹೇಳುವವನು,ಮತ್ತು ಔಷಧವನ್ನು ಕೊಡುವವನು, ಸ್ವಿನ್ನಹಸ್ತಃ-ಯಾವಾಗಲೂ, ಬೆವರುತ್ತಿರುವ, ಕೈಯುಳ್ಳವನು, ಸ್ಯಾತ್-ಆದಾನು, ದ್ರೋಹಿಣೀ–ದ್ರೋಹಮಾಡುವ ಹೆಂಗಸು, ದಾಸಪತ್ನ್ಯಪಿ-ಪರಿಚಾರಕನಿಗೆ ಹೆಂಡತಿಯಾಗುವಳು॥ ॥೧೫॥

ಸುರಾಪಃ-ಹೆಂಡವನ್ನು ಕುಡಿಯುವವನು,ಪತಂಗಕ್ರಿಮಿಕೀಟಾನಾಂ–ಪಕ್ಷಿಗಳ, ಹುಳಗಳ,ಚೇಳು ಮುಂತಾದವುಗಳ, ವಿಡ್ಭುಜಾಂ–ಅಮೇಧ್ಯವನ್ನು ತಿನ್ನುವಪ್ರಾಣಿಗಳ,ಪಕ್ಷಿಣಾಂ–ಹಕ್ಕಿಗಳ,ತಥಾ–ಹಾಗೆ,ಯೋನಿಂ–

ಯಾತನಾಂಸಮವಾಪ್ನುಯಾತ್ ॥೨೦॥ ಮದ್ಯವ್ಯಸನಸಂಯು
ಕ್ತಸ್ತುಮದ್ಯಸೇವನತತ್ಪರಃ । ಮದ್ಯವಿಕ್ರಯಿ ಕಶ್ಚಾಪಿಸ
ರ್ವೇತೇಸಮಭಾಗಿನಃ ॥೨೧॥ ಮದ್ಯಪಾನರತಾಶ್ಶೂದ್ರಾಃಕ್ರಿ
ಮಿರ್ಭೂತ್ವಾಮಹೀತಲೇ । ಷಷ್ಟಿವರ್ಷಸಹಸ್ರಾಣಿಶ್ವಾ
ನಯೋನಿಶತಂಗತಾಃ॥೨೨॥ಭೂತಲೇತುಜನಿಂಪ್ರಾಪ್ಯಜಂಬು
ಕೇಪಂಚವಿಂಶತಿಂ ॥ ತತಃಶ್ಶೂದ್ರಾಭವಿಷ್ಯಂತಿದುಷ್ಕುಲೇ
ದುಷ್ಟಬುದ್ಧಯಃ ॥೨೩॥ ಕಾಕೋಭೂತ್ವಾಬ್ರಾಹ್ಮಣಸ್ತು

ಜನ್ಮವನ್ನು, ಆಸಾದ್ಯ-ಪಡದು, ಯಾತನಾಂ-ಬಾಧೆಯನ್ನು, ಸಮವಾ ಪ್ನುಯಾತ್-ಹೊಂದುವನು॥ ॥೨೦॥

ಮದ್ಯವ್ಯಸನ-ಮದ್ಯದವ್ಯಾಪಾರ ವಿಷಯವಾದ ಚಿಂತೆಯಿಂದ, ಯು ಕ್ತಸ್ತು-ಕೂಡಿದವನು, ಮದ್ಯಸೇವನ-ಮದ್ಯವನ್ನು ಕುಡಿಯುವದರ ಲ್ಲಿ, ತತ್ಪರಃ-ಆಸಕ್ತನಾದವನು, ಮದ್ಯವಿಕ್ರಯಿಕಶ್ಚಾಪಿ-ಮದ್ಯವನ್ನು ಕ್ರಯಕ್ಕೆ ಮಾರುವವನೂ, ತೇಸರ್ವೇ-ಅವರೆಲ್ಲರೂ, ಸಮಭಾಗಿನಃ-ಸಮ ಫಲವನ್ನು ಪಡೆಯುವವರಾಗುವರು ॥ ॥೨೧॥

ಮದ್ಯಪಾನರತಾಃ-ಮದ್ಯವನ್ನು ಕುಡಿಯುವವರಾದ,ಶೂದ್ರಾಃ-ಒಕ್ಕಲಿಗರು, ಮಹೀತಲೇ-ಭೂಮಿಯಲ್ಲಿ, ಕ್ರಿಮಿಃ-ಕ್ರಿಮಿಯು, ಭೂ ತ್ವಾ-ಆಗಿ, ಷಷ್ಟಿವರ್ಷ ಸಹಸ್ರಾಣಿ-ಅರವತ್ತು ಸಾವಿರವರ್ಷಗಳವ ರಿಗೂ, ಶ್ವಾನಯೋನಿಶತಂ-ನೂರು ಜನ್ಮಗಳು ನಾಯಿಯಜನ್ಮವನ್ನು, ಗತಾಃ-ಪಡದವರಾಗಿ ॥ ॥೨೨॥

ಭೂತಲೇ-ಭೂಲೋಕದಲ್ಲಿ, ಜಂಬುಕೇ-ನರಿಯಜನ್ಮದಲ್ಲಿ, ಪಂಚವಿಂ ಶತಿಂ-ಇಪ್ಪತ್ತೈದು ಜನ್ಮಗಳನ್ನು, ಜನಿಂ-ಉತ್ಪತ್ತಿಯನ್ನು, ಪ್ರಾ ಪ್ಯ-ಹೊಂದಿ, ತತಃ-ಆಬಳಿಕ, ದುಷ್ಕುಲೇ-ಕೆಟ್ಟವಂಶದಲ್ಲಿ ದುಷ್ಟಬು ದ್ಧಯಃ-ಕೆಟ್ಟಜ್ಞಾನವುಳ್ಳವರಾಗಿ, ಶೂದ್ರಾಃ-ಒಕ್ಕಲಿಗರು, ಭವಿಷ್ಯಂ ತಿ-ಆಗುವರು ॥ ॥೨೩॥

ಬ್ರಾಹ್ಮಣಸ್ತು-ಮದ್ಯಪಾನ ನಿರತನಾದ ಬ್ರಾಹ್ಮಣನಾದರೇನೋ, ಕಾಕಃ-ಕಾಗೆಯು, ಭೂತ್ವಾ-ಆಗಿ, ಆದಿತ್ಯಲಕ್ಷವರ್ಷಾಂತಂ-ಹನ್ನೆರ ಡುಲಕ್ಷ ವರ್ಷಗಳವರಿಗೂ, ಬ್ರಾಹ್ಮಣನು, ಮದ್ಯಪಾನತಃ-ಮದ್ಯವ

ವಿಷ್ಠಾಭಕ್ಷಸ್ತುಜೀವತಿ ॥ ಅಮಿತ್ರ್ಯಾಲಕ್ಷವರ್ಷಾಣಂ ತಾಂಬ್ರ
ಶ್ಯಾಭೂಮ್ಯಾಪಾನತಃ ॥ ೨೪ ॥ ಸ್ವದೇಹಂಪರಮಾಂಸೇನ
ಯಃಪ್ರೋಷಯತಿ ಮೂಢಧೀಃ । ಶತ ಯೋನೌ ಜನಿಂಪ್ರ
ಪ್ಯವ್ಯಾಧಿಯುಕ್ತೋಭವಿಷ್ಯತಿ ॥೨೫॥ ಅಭಕ್ಷ್ಯಭಕ್ಷ
ಕಶ್ಚಾಪಿಸುರಾಪೀಶ್ಯಾವದಂತಕಃ । ಗಂಡಮಾಲೀಚಭವತಿ
ಧಾನ್ಯಹರ್ತಾತುಮೂಷಕಃ॥೨೬॥ಕಾಂಸ್ಯಸ್ತೇಯೀಮರಾಳ
ಸ್ಸ್ಯಾನ್ಮಧುದಂಶಃಪಯೋಹರಃ॥ ಘೃತಹಾರೀಚನಕುಲಃಗೃ
ಧ್ರೋಮಾಂಸಹರೋಭವೇತ್ ॥ ೨೭ ॥ ಅಶ್ವಹರ್ತಾತುಶಾ

ನ್ನು ಕುಡಿದದ್ದರಿಂದ,ವಿಷ್ಠಾಭಕ್ಷಸ್ತು–ಅಮೇಧ್ಯವನ್ನು ತಿನ್ನುವವನಾಗಿ, ಜೀವತಿ–ಬದುಕಿರುವನು ॥ ।೨೪॥

ಯಃ–ಯಾವ ಮನುಷ್ಯನು, ಮೂಢಧೀಃ–ಮಂದಬುದ್ಧಿಯುಳ್ಳವನಾಗಿ,ಸ್ವದೇಹಂ–ತನ್ನ ಶರೀರವನ್ನು, ಪರಮಾಂಸೇನ–ಇತರಪ್ರಾಣಿಗಳ ಮಾಂಸದಿಂದ, ಪೋಷಯತಿ–ಆರೈಕೆ ಮಾಡಿಕೊಳ್ಳುತ್ತಾನೋ, ಸಃ–ಅವನು, ಶತಯೋನೌ–ನೂರು ಯೋನಿಗಳಲ್ಲಿ, ಜನಿಂ–ಉತ್ಪತ್ತಿಯನ್ನು, ಪ್ರಾಪ್ಯ–ಹೊಂದಿ, ವ್ಯಾಧಿಯುಕ್ತಃ–ರೋಗವುಳ್ಳವನು, ಭವಿಷ್ಯತಿ–ಆಗುತ್ತಾನೆ ॥ ॥೨೫॥

ಅಭಕ್ಷ್ಯಭಕ್ಷಕಃ–ತಿನ್ನಬಾರದ ವಸ್ತುವನ್ನು ತಿಂದವನು,ಸುರಾಪೀ–ಸುರಾಪಾನಮಾಡಿದವನು, ಶ್ಯಾವದಂತಕಃ–ದಂತಮಾಲಿನ್ಯವುಳ್ಳವನಾಗುವನು, ಮತ್ತು–ಗಂಡಮಾಲೀಚ–ಗಂಡಮಾಲಾರೋಗವುಳ್ಳವನು, ಭವತಿ–ಆಗುವನು, ಧಾನ್ಯಹರ್ತಾತು–ಭತ್ತಮುಂತಾದ ಧಾನ್ಯವನ್ನು ಕದ್ದವನು,ಮೂಷಕಃ–ಇಲಿಯು, ಭವತಿ–ಆಗುತ್ತಾನೆ॥ ॥೨೬॥

ಕಾಂಸ್ಯ–ಸೀಸವನ್ನು, ಸ್ತೇಯೀ–ಕದ್ದವನು, ಮರಾಳಃ–ಹಂಸಪಕ್ಷಿಯು,ಸ್ಯಾತ್–ಆದಾನು, ಪಯೋಹರಃ–ಹಾಲನ್ನು ಕದ್ದವನು,ಮಧುದಂಶಃ–ಜೇನುಹುಳವು, ಸ್ಯಾತ್–ಆದಾನು, ಘೃತ ಹಾರೀ–ತುಪ್ಪವನ್ನು ಕದ್ದವನು, ನಕುಲಃ–ಮುಂಗಸಿಯಾಗುವನು, ಮಾಂಸಹರಃ–ಮಾಂಸವನ್ನು ಕದ್ದವನು, ಗೃಧ್ರಃ–ಹದ್ದು, ಭವೇತ್–ಆದಾನು ॥೨೭॥

ಅಶ್ವ–ಕುದುರೆಯನ್ನು, ಹರ್ತಾ–ಕದ್ದವನು, ಶಾರ್ದೂಲಃ–ವ್ಯಾ

ರ್ದೂಲಃಮೃಗಹಸ್ತಿಹರೋವೃಕಃ ॥ ವಪಾಹರ್ತಾಮದ್ಗು
ರೇಸ್ತೈಲಹರ್ತಾಬಕೋಭವೇತ್ । ದಧಿಹರ್ತಾತುಶಕು
ನಿಃಕ್ಷೌಮಹರ್ತಾಚದರ್ದುರಃ ॥೧೮॥ ಕಾರ್ಪಾಸತಂತುಹ
ರ್ತಾಪಿಕ್ರೌಂಚಯೋನಿಂಸಮಶ್ನುತೇ ॥ ದಿವ್ಯಗಂಧಹರೋ
ಮರ್ತ್ಯೋಯೌನಿಂಛೌಂಛುಂದರೀಂವ್ರಜೇತ್ ॥೧೯॥ ಪತ್ರ
ಶಾಕಹರೋಬರ್ಹೀರತ್ನಹಾರೀತುಲೋಹಕೃತ್ ।ರಕ್ತವ
ಸ್ತ್ರಾಪಹರ್ತಾಚಜೀವಜೀವೀಭವಿಷ್ಯತಿ ॥೨೦॥ ಸ್ತ್ರೀ

ಘ್ರವು, ಮೃಗ–ಜಿಂಕೆಯನ್ನು, ಹಸ್ತಿ–ಆನೆಯನ್ನು, ಹರಃ–ಕದ್ದವನು, ವೃಕಃ–ತೋಳವು, ಭವೇತ್–ಆದಾನು, ವಪಾಹರ್ತಾ–ವಪೆಯನ್ನು ಕದ್ದವನು, ಮದ್ಗುರೇವ–ನೀರುಕಾಗಿಯೇ, (ಆಗುವನು,) ತೈಲಹರ್ತಾ–ಎಣ್ಣೆಯನ್ನು ಕದ್ದವನು, ಬಕಃ–ಕೊಕ್ಕರೆ, ಭವೇತ್–ಆದಾನು, ದಧಿ–ಮೊಸರನ್ನು, ಹರ್ತಾ–ಕದ್ದವನು, ಶಕುನಿಃ–ಪಕ್ಷಿಯು, ಕ್ಷೌಮಹರ್ತಾಚ–ರೇಶ್ಮೆಯನ್ನು, ರೇಶ್ಮೆಯ ವಸ್ತ್ರವನ್ನು ಕದ್ದವನು, ದರ್ದುರಃ–ಕಪ್ಪೆಯು, ಭವೇತ್–ಆಗುವನು ॥ ॥೧೮॥

ಕಾರ್ಪಾಸತಂತುಹರ್ತಾಪಿ–ಹತ್ತಿಯ ನೂಲನ್ನು ಕದ್ದವನು, ಕ್ರೌಂಚಯೋನಿಂ–ಕ್ರೌಂಚಪಕ್ಷಿಯ ಜನ್ಮವನ್ನು, ಸಮಶ್ನುತೇ–ಪಡೆಯುತ್ತಾನೆ, ದಿವ್ಯ ಗಂಧಹರಃ–ಯೋಗ್ಯವಾದ ಪರಿಮಳವನ್ನು ಕದ್ದವನು, ಛೌಂಛುಂದರೀಂ–ಚುಂದಿಲಿಯ ಸಂಬಂಧವಾದ, ಯೌನಿಂ–ಜನ್ಮವನ್ನು, ವ್ರಜೇತ್–ಹೊಂದುವನು॥ ॥೧೯॥

ಪತ್ರ–ಎಲೆಗಳನ್ನು, ಶಾಕ–ಪಲ್ಯ, ಕಾಯಿಗಳನ್ನು, ಹರಃ–ಕದ್ದವನು, ಬರ್ಹೀ–ನವಿಲಾಗಿ ಹುಟ್ಟುವನು, ರತ್ನಹಾರೀ–ರತ್ನಗಳನ್ನು ಕದ್ದವನು, ಲೋಹಕೃತ್–ಕಬ್ಬಿಣಕೆಲಸ ಮಾಡುವವನು, ಆದಾನು, ರಕ್ತವಸ್ತ್ರಾಪಹರ್ತಾಚ–ಕೆಂಪು ಬಟ್ಟೆಗಳನ್ನು ಕದ್ದವನು, ಜೀವಜೀವಿ–ಪ್ರಾಣಗಳಿಂದ ಜೀವಿಸುವನು, ಅಂದರೆ ಪ್ರಾಣಹಿಂಸೆಯನ್ನು ಮಾಡಿ, ಆ ಮಾಂಸವನ್ನು ತಿಂದು ಬದುಕುವವನು, ಭವಿಷ್ಯತಿ–ಆಗುತ್ತಾನೆ ॥ ॥೨೦॥

ಸ್ತ್ರೀಹರ್ತಾಚಾಪಿ–ಹೆಂಗಸನ್ನು ಅಪಹರಿಸಿದವನೂ ಕೂಡ, ಭಲ್ಲೂ–

ಹರ್ತಾಗಜಾಪಿಭಲ್ಲೂಕಃ ಫಲಪುಷ್ಪಹರಃ ಕಪಿಃ । ಯಾನಹ
ರ್ತಾತಥೋಷ್ಟ್ರಸ್ಸ್ಯಾಚ್ಛಾಗಃ ಪಶುಹರೋಜನಿತ್ ॥೨೯॥
ಅಪಹೃತ್ಯಪರದ್ರವ್ಯಂ ಯದ್ವಾತದ್ವಾಬಲಾನ್ನರಃ । ತಿರ್ಯ
ಕ್ತ್ವಂಯಾತಿತಸ್ಮಾಚ್ಚಪಾಪೇಬುದ್ಧಿಂಪರಿತ್ಯಜೇತ್ ॥೩೦॥
ಏವಮೇವಸ್ತ್ರಿಯೋಹೃತ್ವಾಏತೇಷಾಮೇವಪ್ರಾಣಿನಾಂ ।ಭಾ
ರ್ಯಾತ್ವಮುಪಗಚ್ಛಂತಿತಸ್ಮಾತ್ಪಾಪಂತ್ಯಜೇಜ್ಜನಃ ॥೩೧॥
ವ್ಯಭಿಚಾರರತಾನಾರೀಶುನೀಪಶ್ಚಾಚ್ಚಸೂಕರೀ । ಕರ್ಮಕ್ಷ

ಕಃ–ಕರಡಿಯು, ಆಗುವನು, ಫಲಪುಷ್ಪಹರಃ–ಹಣ್ಣುಗಳನ್ನು, ಹೂವ್ವು ಗಳನ್ನು ಕದ್ದವನು, ಕಪಿಃ–ಕೋಡಗವಾಗಿ ಜನಿಸುವನು, ಯಾನ–ವಾಹನಗಳನ್ನು, ಹರ್ತಾ–ಕದ್ದವನು, ಉಷ್ಟ್ರಃ–ಒಂಟೆಯಾಗಿ ಜನಿಸುವನು, ಪಶುಹರಃ–ಆಕಳು ಮೊದಲಾದ ಪಶುಗಳನ್ನು ಕದ್ದವನು, ಛಾಗಃ–ಆಡಾಗಿ ಹುಟ್ಟುವನು ॥ ॥೨೯॥

ನರಃ–ಮನುಷ್ಯನು, ಪರದ್ರವ್ಯಂ–ಅನ್ಯರ ಹಣವನ್ನು, ಯದ್ವಾತದ್ವಾ–ಹೇಗಾಗಲೀ, ಬಲಾತ್–ನಿರ್ಬಂಧದಿಂದ, ಹೃತ್ವಾ–ಅಪಹರಿಸಿ, ತಿರ್ಯಕ್ತ್ವಂ–ಪಶು, ಪಕ್ಷಿ, ಮೃಗಾದಿ ಜನ್ಮವನ್ನು, ಯಾತಿ–ಪಡೆಯುತ್ತಾನೆ, ತಸ್ಮಾತ್–ಆದ್ದರಿಂದ, ಪಾಪೇ–ಪಾಪಬರುವ ಕೆಲಸದಲ್ಲಿ, ಬುದ್ಧಿಂ–ಜ್ಞಾನವನ್ನು, ಪರಿತ್ಯಜೇತ್–ಬಿಡಬೇಕು ॥ ॥೩೦॥

ಏವಮೇವ–ಇದೇ ರೀತಿಯಲ್ಲಿಯೇ, ಸ್ತ್ರಿಯಃ–ಹೆಂಗಸರು, ಹೃತ್ವಾ–ಪರವಸ್ತುಗಳನ್ನು ಅಪಹರಿಸಿ, ಏತೇಷಾಂ–ಈ, ಪ್ರಾಣಿನಾಮೇವ–ಜೀವಿಗಳಿಗೇನೇ, ಭಾರ್ಯಾತ್ವಂ–ಪತ್ನೀತ್ವವನ್ನು, ಉಪಗಚ್ಛಂತಿ–ಪಡೆಯುತ್ತಾರೆ, ತಸ್ಮಾತ್–ಆ ಕಾರಣದಿಂದ, ಜನಃ–ಸ್ತ್ರೀಜನ ಪುರುಷ ಜನವು, ಪಾಪಂ–ಪಾತಕವನ್ನು, ತ್ಯಜೇತ್–ಬಿಡಬೇಕು ॥ ॥೩೧॥

ವ್ಯಭಿಚಾರ–ಜಾರತ್ವದಲ್ಲಿ, ರತಾ–ನಿರತಳಾದ, ನಾರೀ–ಹೆಂಗಸು, ಶುನೀ–ಹೆಣ್ಣು ನಾಯಿಯು,ಆಗಿ,ಪಶ್ಚಾತ್–ಆಬಳಿಕ, ಸೂಕರೀ–ಹೆಣ್ಣು ಹಂದಿಯೂ ಆಗಿ,ಕರ್ಮಕ್ಷಯೇ–ನಾಯಿಯ ಹಂದಿಯ ಜನ್ಮಹೇತುವಾದ ಕರ್ಮವು ಮುಗಿಯುವ ಕಾಲದಲ್ಲಿ, ಸಾ–ಅವಳೇ, ಮಾನುಷೀಷು–ಮನುಷ್ಯಸ್ತ್ರೀರಲ್ಲಿ, ಕುತ್ಸಿತಾ–ನೀಚಜನ್ಮಪ್ರಾಪ್ತಳಾಗಿ, ಜನಿಷ್ಯತಿ–ಹುಟ್ಟು

ಯೋನಯೋನುಷ್ಷೋಕೇತ್ಸಿತಾಸೋಜನಿಷ್ಯತಿ ||೩೬|| ಪಾಪಾ
ನಾಂಬಹುಳತ್ವಾಚ್ಚ ಪಾಪಭೇದಾಸ್ತಥಾವಿಧಾಃ || ಅತೋನಂ
ತ್ವಾತ್ಕರ್ಮಫಲಂವಕ್ತುಂಶಕ್ಯಂಕಥಂಭವೇತ್|| ||೩೭||

ಇತಿ ಶ್ರೀ ಭವಿಷ್ಯೋತ್ತರಪುರಾಣೇ ವೆಂಕಟೇಶಮಾ
ಹಾತ್ಮ್ಯೆ ಉತ್ತರಭಾಗೆ ನರಕಾನುಭವಾತ್ಪರಂ
ವಿಯೋನಿಜನ್ಮ ಕಥನಂ ನಾಮ
ಸಪ್ತಮೋಧ್ಯಾಯಃ ||

---

ತ್ತಾಳಿ || ||೩೬||

ಪಾಪಾನಾಂ—ಪಾತಕಗಳ, ಬಹುಳತ್ವಾಚ್ಚ—ಆಧಿಕ್ಯದಿಂದಲೂ, ಪಾಪಭೇದಾಃ-ದುರಿತಪ್ರಭೇದಗಳು, ತಥಾವಿಧಾಃ—ಹಾಗೆ ಅನೇಕ ಬಗೆಗಳಾಗಿರುವವವು, ಅತಃ-ಆ ಕಾರಣದಿಂದ, ಅನಂತ್ವಾತ್—ಕರ್ಮಕ್ಕೆ ಕೊನೆಯಿಲ್ಲದೇ ಇರುವದ್ದರಿಂದ, ಅಂದರೆ ಅನಾದಿಯಾಗಿರುವದ್ದರಿಂದ, ಕರ್ಮಫಲಂ—ಕರ್ಮಪ್ರಯೋಜನವನ್ನು, ವಕ್ತುಂ—ಹೇಳುವದಕ್ಕೆ, ಶಕ್ಯಂ—ತಕ್ಕದ್ದು, ಕಥಂ—ಹೇಗೆ, ಭವೇತ್—ಆದೀತು. ||ತಾ|| ಅನಾದಿಯಾಗಿರುವ ಕರ್ಮವು ತರತರವಾಗಿ ಇರುವದ್ದರಿಂದಲೂ ಪಾಪಗಳು, ತರತರಗಳಾಗಿರುವದ್ದರಿಂದಲೂ, ಕರ್ಮಫಲವನ್ನು ಹೇಳುವದಕ್ಕೆ ಶಕ್ಯವಲ್ಲ, ಮಾಡಿದ ಕರ್ಮಗಳಲ್ಲಿ ತಾರತಮ್ಯವು ಉಂಟಾಗಿರುವಂತೆಯೇ ಪಾಪಫಲದಲ್ಲಿಯೂ ತಾರತಮ್ಯವು ಉಂಟಾಗಿರುವದು, ಸೂಕ್ಷ್ಮಕರ್ಮಸ್ವರೂಪವನ್ನು ಜ್ಞಾನದಿಂದ ತಿಳಿಯಬೇಕೆಂಬ ಭಾವವು || ||೩೭||

ಇಂತು ಭವಿಷ್ಯೋತ್ತರಪುರಾಣದೊಳು ವೆಂಕಟೇಶ
ಮಹಾತ್ಮ್ಯೆಯ ಉತ್ತರಭಾಗದಲ್ಲಿ ನರಕದಲ್ಲಿ
ಪಾಪಾನುಭವವಾದ ಬಳಿಕವಿಯೋನಿ
ಜನ್ಮ ಕಥನವೆಂಬ ಏಳನೇ
ಅಧ್ಯಾಯವು.

---

ವೈಖಾನಸಃ । ಸ್ವಾಮಿನ್ ಶ್ರುತ್ವಾ ತ್ವಯೋಕ್ತಾಂ ತಾಂ ಮಹಾ
ನರಕಯಾತನಾಂ । ಭೀತಿರ್ಜಾತಾ ತತೋ ಬ್ರೂಹಿ ಪುಣ್ಯಕ
ರ್ಮ ಮಲಾಪಹಂ ॥೧॥ ಶ್ರೀನಿವಾಸಃ ॥ ದಾನೇನ ತಪಸಾ ತೀರ್ಥ
ಯಾತ್ರಯಾ ಮಂತ್ರಜಾಪನಾತ್ । ಪಾಪಕರ್ಮ ಪ್ರಣಶ್ಯೇ
ತ ತದ್ವಕ್ಷ್ಯಾಮಿ ನಿಶಾಮಯ ॥೨॥ ತುಲಾಪುರುಷದಾನಂ ಚ
ವ್ರತಂ ಚಾಂದ್ರಾಯಣಂ ಪರಂ । ಗವಾಮನುಸ್ಮೃತಿಶ್ಚಾಪಿ

ವೈಖಾನಸಃ–ವೈಖಾನಸಮುನಿಯು ಹೇಳುತ್ತಲಿದ್ದಾನೆ॥ ಸ್ವಾಮಿನ್–ನಿಯಾಮಕನಾದ ಶ್ರೀನಿವಾಸನೇ, ತ್ವಯಾ–ನಿನ್ನಿಂದ, ಉಕ್ತಾಂ–ಹೇಳಲ್ಪಟ್ಟ, ಮಹಾ-ಅಧಿಕವಾದ, ನರಕಯಾತನಾಂ–ನರಕ ಬಾಧೆಯನ್ನು, ಶ್ರುತ್ವಾ–ಕೇಳಿ, ಭೀತಿಃ–ಅಂಜಿಕೆಯು, ಜಾತಾ–ಉಂಟಾಯಿತು. ತತಃ–ನರಕದಿಂದ ಭಯ ತೋರಿರುವದ್ದರಿಂದ, ಮಲಾಪಹಂ–ಪಾಪಪರಿಹಾರಕವಾದ, ಪುಣ್ಯಕರ್ಮ–ಪುಣ್ಯವನ್ನುಂಟುಮಾಡುವ ಕೃತ್ಯವನ್ನು, ಬ್ರೂಹಿ–ಹೇಳಿ. ॥ತಾ॥ ಶ್ರೀನಿವಾಸಮೂರ್ತಿಯೇ ನರಕದಲ್ಲಿ ಉಂಟಾಗುವ ಕಷ್ಟಗಳನ್ನು ಕೇಳಿದ್ದರಿಂದ ಭಯವುಂಟಾದ ಕಾರಣ ನರಕಯಾತನೆಗಳು ಉಂಟಾಗದಂತೆ ಮಾಡಬೇಕಾಗಿರುವ ಪುಣ್ಯಕರ್ಮಗಳನ್ನು ಹೇಳುವವನಾಗು ॥ ॥೧॥

ಶ್ರೀನಿವಾಸಃ–ಶ್ರೀನಿವಾಸನು ಹೇಳುತ್ತಲಿದ್ದಾನೆ॥ ದಾನೇನ–ಮಹಾದಾನಗಳನ್ನು ಮಾಡುವದ್ದರಿಂದ, ತಪಸಾ–ಕೃಚ್ಛ್ರ ಚಾಂದ್ರಾಯಣಾದಿ ವ್ರತರೂಪವಾದ ತಪಸ್ಸಿನಿಂದಲೂ, ತೀರ್ಥಯಾತ್ರಯಾ–ಗಂಗಾದಿ ಪುಣ್ಯ ಕ್ಷೇತ್ರಗಳ ಯಾತ್ರೆಯನ್ನು ಮಾಡಿ, ತೀರ್ಥಸ್ನಾನವನ್ನು ಮಾಡುವದ್ದರಿಂದಲೂ, ಮಂತ್ರಜಾಪನಾತ್–ದೇವತಾಮಂತ್ರಗಳನ್ನು ಜಪಿಸುವದ್ದರಿಂದಲೂ, ಪಾಪಕರ್ಮ–ಪಾತಕಕೃತ್ಯವು, ಪ್ರಣಶ್ಯೇತ–ನಾಶವಾಗುವದು, ತತ್–ಅದನ್ನು, ವಕ್ಷ್ಯಾಮಿ–ಹೇಳುತ್ತೇನೆ, ನಿಶಾಮಯ–ಕೇಳು ॥ ॥೨॥

ತುಲಾಪುರುಷದಾನಂ ಚ–ವಿಧಿಯನ್ನು ಅನುಸರಿಸಿ, ಒಂದು ಕಡೆಯಲ್ಲಿ ತ್ರಾಸಿನಲ್ಲಿ ತಾನು ಕೂತು, ಮತ್ತೊಂದು ಕಡೆಯಲ್ಲಿ, ಭಂಗಾರ, ಬೆಳ್ಳಿ, ರತ್ನ ಮುಂತಾದವುಗಳನ್ನು ತನ್ನ ತೂಕಕ್ಕೆ ಹಾಕಿ. ಬಳಿಕ ಅದನ್ನು

ಸರ್ವಪಾಪಪ್ರಣಾಶಕಂ ॥೩॥ ರುದ್ರಂಪುರುಷಸೂಕ್ತಂಚ
ಶ್ರೀಸೂಕ್ತಂ ಚತ್ರ್ಯಂಬಕಂ । ಗೋಸೂಕ್ತಂಚಾಪಿಭೂ
ಸೂಕ್ತಂಮಂತ್ರಾಶ್ಚಾಥರ್ವಣಾಸ್ತಥಾ ॥೪॥ ಇತಿಹಾಸಪು
ರಾಣಾನಿ-ಸ್ತೋತ್ರಾಮಮವಿಶೇಷತಃ । ಅಷ್ಟಾಕ್ಷರೋಮಹಾ

ದಾನವಮಾಡುವದಾದ ತುಲಾಪುರುಷವೆಂಬ ಹೆಸರುಳ್ಳ ದಾನವು, ಚಾಂದ್ರಾ ಯಣಂ-ಚಾಂದ್ರಾಯಣವೆಂಬ, ವ್ರತಂ-ನಿಯಮವು, ಅಂದರೆ ಚಂದ್ರ ನಿಗೆ ವೃದ್ಧಿಕ್ಷಯಗಳಾಗುವಂತೆ, ತಾನು ಆಹಾರ ಕಬಳಗಳನ್ನು ತಗ್ಗಿಸಿ ಹೆಚ್ಚುಮಾಡುವದೇ ಮೊದಲಾದ ಆಹಾರ, ನಿಯಮ, ವ್ರತರೂಪವಾದ ಚಾಂದ್ರಾಯಣ ವ್ರತವು, ಗವಾಂ-ಹಸುಗಳ, ಅನುಸ್ಮೃತಿಶ್ಚಾಪಿ-ಅನುಸ ರಣೆಯು, ಅಂದರೆ ಹಸುವು ಯಾವ ಮಾರ್ಗದಲ್ಲಿ ಹೋಗುತ್ತೋ ರ ಹಿಂದೆ ಅದನ್ನು ಕಾಪಾಡುತ್ತಾ ಹೋಗುವ ರೂಪವಾದ ಸ್ಮೃತಿಯೆಂಬುವದು, ಸರ್ವಪಾಪಪ್ರಣಾಶಕಂ-ಸಮಸ್ತ ಪ ಹೋಗಲಾಡಿಸುವಂಥಾದ್ದು ॥

ರುದ್ರಂ-ಯಜುರ್ವೇದದಲ್ಲಿ ಬರುವ ಶ್ರೀರುದ್ರಾಧ್ಯಾಯವನ್ನು ರುಷಸೂಕ್ತಂ-ಆರಣ್ಯಕದಲ್ಲಿ ಬರುವ ವಿರಾಟ್ಪುರುಷನ ಸೂಕ್ತವನ್ನು, ಶ್ರೀಸೂಕ್ತಂ--ಲಕ್ಷ್ಮೀಸೂಕ್ತವನ್ನು, ತ್ರಿಯಂಬಕಂ-ನಾರಾಯಣದ ಲ್ಲಿ ಬರುವ ತ್ರ್ಯಂಬಕ ರುಕ್ಕನ್ನು, ತಥಾ-ಹಾಗೆ, ಗೋಸೂಕ್ತಂ-ಧೇ ನುಸೂಕ್ತವು, ಆಥರ್ವಣಾಃ-ಅಥರ್ವಣವೇದ ಪ್ರೋಕ್ತಗಳಾದ, ಮಂ ತ್ರಾಶ್ಚ-ಮಂತ್ರಗಳು ಪಾಪನಾಶಕಗಳು॥ ॥೪॥

ಇತಿಹಾಸ-ಭಾರತವು,ಭಾಗವತ,ರಾಮಾಯಣವು, ಪುರಾಣಾನಿ-ಹದಿ ನೆಂಟು ಪುರಾಣೋಪಪುರಾಣಗಳು,ಅಂದರೆ, ೧.ಬ್ರಹ್ಮ,೨.ಪಾದ್ಮ,೩,ವೈ ಷ್ಣವ,೪.ಶೈವ ೫.ಭಾಗವತ,೬,ಭವಿಷ್ಯ,೭.ನಾರದೀಯ್ಯ,೮. ಮಾರ್ಕಂ ಡೇಯ,೯.ಆಗ್ನೇಯ, ೧೦.ಬ್ರಹ್ಮವೈವರ್ತ,೧೧. ಲೈಂಗ,೧೨.ವಾರಾಹ, ೧೩. ಸ್ಕಾಂದ, ೧೪. ವಾಮನ, ೧೫. ಕೌರ್ಮ, ೧೬. ಮಾತ್ಸ್ಯ, ೧೭. ಗಾ ರುಡ, ೧೮. ಬ್ರಹ್ಮಾಂಡ, ಈ ಹದಿನೆಂಟು ಪುರಾಣಗಳು, ಮನು-ನನ್ನು, ಸ್ತವಃ-ಸ್ತೋತ್ರಗಳು, ವಿಶೇಷತಃ-ಅತಿಶಯವಾಗಿ, ಅಷ್ಟಾಕ್ಷರಃ-ಅ ಷ್ಟಾಕ್ಷರವೆಂಬ, ಮಹಾಮಂತ್ರಃ-ಮಹಾಮನುವು, ತಾರಕಾಖ್ಯಃ-ತಾ

ಮಂತ್ರಸ್ತಾರಕಾಖ್ಯಃಷಡಕ್ಷರಃ ।೫

ರಕವೆಂಬ ಹೆಸರುಳ್ಳ, ಷಡಕ್ಷರಃ-ಷಡಕ್ಷರವಮನುವು, ಪಾಪನಾಶಕವು, ॥

ಅಷ್ಟಾದಶ ಪುರಾಣಗಳು.

ತಾ॥ ಸರ್ಗ, ಪ್ರತಿಸರ್ಗ, ಮನ್ವಂತರ, ವಂಶಾನು ಚರಿತಗಳೆಂಬ ಐದು ಲಕ್ಷಣಗಳಿಂದ ಕೂಡಿರುವ ಪುರಾಣಗಳೊಳಗೆ,ಬ್ರಹ್ಮ, ಮರೀಚಿ ಮುಂತಾದವರಿಗೆ ಬೋಧಿಸಿದ ಬ್ರಹ್ಮಕಲ್ಪ ವಿಷಯವೇ ಮೊದಲಾದ ಸಂಗತಿಗಳುಳ್ಳ ಬ್ರಹ್ಮಪುರಾಣವು ೧೦೦೦೦ ಹತ್ತುಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ಪದ್ಮಗರ್ಭ ಪ್ರೋಕ್ತವಾದ ಪಾದ್ಮಕಲ್ಪವಿತರಣೆಯುಳ್ಳದ್ದಾದ ಪಾದ್ಮವು ೫೫೦೦೦ ಐವತ್ತೈದು ಸಾವಿರಗ್ರಂಥಸಂಖ್ಯೆಯುಳ್ಳದ್ದು, ಕೃಷ್ಣದ್ವೈಪಾಯನ ಪ್ರೋಕ್ತವಾದ ವಿಷ್ಣುಮಹಿಮಾಭಿವರ್ಣನೆಯುಳ್ಳ ವಿಷ್ಣುಪುರಾಣವು. ೨೪೦೦೦ ಇಪ್ಪತ್ತುನಾಲ್ಕು ಸಾವಿರ ಗ್ರಂಥಸಂಖ್ಯೆಯುಳ್ಳದ್ದಾಗಿರುವದು,ವಾಯುದೇವ ಪ್ರೋಕ್ತವಾದ ಶ್ವೇತಕಲ್ಪವಿಚಾರ ಶಿವಮಹಾತ್ಮ್ಯ ಪ್ರತಿಪಾದಕವಾದ, ಶೈವಪುರಾಣವು, ೧೨೦೦೦ ಹನ್ನೆರಡು ಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ಗಾಯತ್ರೀ ದೇವೀಯನ್ನು ಪರಮಾತ್ಮಾರಾಧನ ಪ್ರಕಾರವನ್ನು ವಿವರಿಸುವದಾಗಿಯೂ, ವೃತ್ರವಧೆ ಮುಂತಾದವುಗಳಿಂದ ಕೂಡಿರುವದಾಗಿಯೂ ಇರುವ ದೇವೀಭಾಗವತವು, ೧೮೦೦೦ ಹದಿನೆಂಟು ಸಾವಿರ ಗ್ರಂಥಸಂಖ್ಯೆಯಿಂದ ಕೂಡಿರುವದು,ಇದಲ್ಲದೇ ಪರಿಕ್ಷಿದ್ರಾಯನಿಗೆ ಶುಕಮುನಿಯಿಂದ ಹೇಳಲ್ಪಟ್ಟಕೃಷ್ಣಲೀಲಾಸಮನ್ವಿತವಾದ ಭಾಗವತವು೧೮೦೦೦ ಸಾವಿರ ಗ್ರಂಥಸಂಖ್ಯೆಯುಳ್ಳದ್ದಾಗಿರುವದು, ಆದರೆ ಈ ಯೆರಡು ಭಾಗವತಗಳಲ್ಲಿ, ಯಾವದು ಭಾಗವತವೆಂದರೆ, ॥ ಯತ್ರಾಧಿಕೃತ್ಯಗಾಯತ್ರೀಂ ವರ್ಣ್ಯತೆದರ್ಮವಿಸ್ತರಃ। ವೃತ್ರಾಸುರವಧೋಪೇತಂತದ್ಭಾಗವತ ಮಿಷ್ಯತೆ, ಯೆಂಬದಾಗಿಭಾಗವತಲಕ್ಷಣವೆಂಬಕೂಡಿರುವದೇಅಷ್ಟಾದಶಪುರಾಣಾಂತರ್ಗತಭಾಗವತವೆಂದುತಿಳಿಯಬೇಕು.॥ ಪ್ರೋಷ್ಠಪದ್ಯಾಂಭಾಗವತಂಹೇಮಸಿಹ್ಮಸಮನ್ವಿತಂ॥ದದಾತಿಯೋಭಕ್ತಿಯುತಃಸಯಾತಿ ಪರಮಾಂಗತಿಂ॥ ಯೆಂಬದಾಗಿಹೇಳಿರುವದ್ದರಿಂದ,ಸಿಹ್ಮವಾಹನವುಳ್ಳದೇವತೆಗೆ ವಿಶೇಷವಾಗಿರುವದ್ದರಿಂದಲೂ ದೇವೀಭಾಗವತವೇ ಗಾಯತ್ರೀಪ್ರತಿಪಾದ್ಯವಾ

ದ ಭಾಗವತವೆಂದು ನಂಬಬೇಕು॥ ಶುಕಭಾಗವತವು, ರಾಮಾಯಣ ಭಾರತ ಭಾಗವತಗಳೆಂಬದಾಗಿ ಮೂರೂ ಅತಿಪ್ರಸಿದ್ಧಗಳಾಗಿಯೂ ನಿತ್ಯವು ಇತಿಹಾಸತ್ರಯವೂ ಪಾರಾಯಣಯೋಗ್ಯವಾಗಿ ಬೆಳಿಗ್ಯೆ ಮಧ್ಯಾಹ್ನ ಸಾಯಂಕಾಲಗಳಲ್ಲಿ, ಕ್ರಮವಾಗಿ ಭಾರತರಾಮಾಯಣ ಭಾಗವತಗಳು ಪಾರಾಯಣಾರ್ಹಗಳೆಂದು ವಿಶಿಷ್ಟಶಿಷ್ಟಾದರಣೀಯ್ಯವಾಗಿ ಪ್ರಸಿದ್ಧಗಳಾಗಿರುವವು, ಶತಾನೀಕನಿಗೆ ಸುಮಂತುವು ಹೇಳಿದ ಸೂರ್ಯಮಹಿಮೆಭವಿಷ್ಯತ್ಕಲ್ಪವಿಷಯಾದಿಗಳುಳ್ಳಭವಿಷ್ಯತ್ಪುರಾಣವು೧೪೦೦೦ಹದಿನಾಲ್ಕು ಸಾವಿರ ಗ್ರಂಥಸಂಖ್ಯೆಯುಳ್ಳದ್ದಾಗಿರುವದು, ನಾರದಮುನಿಪ್ರೋಕ್ತವಾದ ಬೃಹತ್ಕಲ್ಪಧರ್ಮಾದಿಗಳುಳ್ಳ ನಾರದೀಯ ಪುರಾಣವು ೨೫೦೦೦ ಇಪ್ಪತ್ತೈದು ಸಾವಿರ ಗ್ರಂಥಸಂಖ್ಯೆಯುಳ್ಳದ್ದಾಗಿರುವದು. ಮಾರ್ಕಂಡೇಯ ಋಷಿ ಪ್ರೋಕ್ತವಾದ ಚಂಡಿಕಾಮಹಾತ್ಮ್ಯೆಯನ್ನು ವಿವರಿಸುತ್ತಿರುವದಾದ ಮಾರ್ಕಂಡೇಯ ಪುರಾಣವು, ೯೦೦೦ ಒಂಭತ್ತು ಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ಭೃಗುಪ್ರೋಕ್ತವಾಗಿಯೂ ಯಜ್ಞಾದ್ಯಗ್ನಿವಿಷಯಗಳುಳ್ಳದ್ದಾದ ಅಗ್ನಿ ಪುರಾಣವು, ೧೫,೦೦೦ ಹದಿನೈದುಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ವಸಿಷ್ಠರುಷಿ ಪ್ರೋಕ್ತವಾದ ಸೃಷ್ಟ್ಯಾದಿವಿವರಣದಿಂದ ಕೂಡಿರುವ ವಿಷ್ಣು ಧರ್ಮಪ್ರತಿಪಾದಕವಾದ ಬ್ರಹ್ಮವೈವರ್ತಪುರಾಣವು ೧೮,೦೦೦ ಹದಿನೆಂಟು ಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ನಂದಿಕೇಶ್ವರ ಪ್ರೋಕ್ತವಾದ ಈಶಾನ ಕಲ್ಪ ವಿಷಯಗಳಿಂದ ಕೂಡಿದ ಲಿಂಗಪುರಾಣವು ೧೧,೦೦೦ ಹನ್ನೊಂದು ಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ವರಾಹಾವತಾರಿಯಾದ ನಾರಾಯಣ ಮೂರ್ತಿಯಿಂದ ಪ್ರೋಕ್ತವಾಗಿ ಮಾನವಕಲ್ಪ ವಿವರಣ ವಿಚಾರದಿಂದೊಡಗೂಡಿದವಾರಾಹಪುರಾಣವು೨೪,೦೦೦ ಇಪ್ಪತ್ತುನಾಲ್ಕು ಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ಶಿವಮಾಹಾತ್ಮ್ಯಬೋಧಕವಾಗಿಯೂ,ತತ್ಪುರುಷಕಲ್ಪಸಂಬಂಧವುಳ್ಳದ್ದಾಗಿಯೂ,ಸ್ಕಂದಪ್ರೋಕ್ತವಾದ ಸ್ಕಾಂದ ಪುರಾಣವು ೧,೦೦,೦೦೦ ಲಕ್ಷ ಗ್ರಂಥಸಂಖ್ಯೆಯುಳ್ಳದ್ದಾಗಿರುವದು,ಶ್ವೇತಕಲ್ಪಸಂಬಂಧವುಳ್ಳದ್ದಾಗಿವೇದತ್ರಯ ಸಂಗತಿಗಳು ತ್ರಿವಿಕ್ರಮಾವತಾರವರ್ಣನೆಯು ಉಳ್ಳದ್ದಾದ ಬ್ರಹ್ಮಪ್ರೋಕ್ತವಾದವಾಮನ ಪುರಾಣವು ೧೪,೦೦೦ ಹದಿನಾಲ್ಕು ಸಾವಿರ ಗ್ರಂಥ ಸಂಖ್ಯೆಯುಳ್ಳ

ಷಡಕ್ಷರೋಮಹೇಶಸ್ಯವಿಷ್ಣೋರ್ದ್ವಾವಶವರ್ಣಕಃ || ಅಷ್ಟಾಟಷೆ

ದ್ದಾಗಿರುವದು,ವಿಷ್ಣುವು ಕೂರ್ಮಾವತಾರವಮಾಡಿದಾಗ ಇಂದ್ರದ್ಯುಮ್ನ ರಾಯನಿಗೆ ಬೋಧಿಸಿದ ಶಿವಮಹಾತ್ಮ್ಯಾದಿಗಳುಳ್ಳ, ಕೌರ್ಮಪುರಾಣವು ೬೦೦೦ಆರು ಸಾವಿರ ಗ್ರಂಥಸಂಖ್ಯೆಯುಳ್ಳದ್ದಾಗಿರುವದು, ವಿಷ್ಣುವುಮತ್ಸ್ಯಾವತಾರವನ್ನು ಮಾಡಿದಾಗಮನುವಿಗೆಹೇಳಿದ ಏಳುಕಲ್ಪವೃತ್ತಾಂತಗಳಿಂದ ಕೂಡಿದ್ದಾಗಿ ನೃಸಿಹ್ಮಾವತಾರ ಸಂಗತಿಗಳುಳ್ಳದ್ದಾದ ಮತ್ಸ್ಯ ಪುರಾಣವು ೧೪,೦೦೦ ಹದಿನಾಲ್ಕು ಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿ ರುವದು, ವಿಷ್ಣುವು ಭಕ್ತನಾದ ಗರುಡನಿಗೆ ಬೋಧಿಸಿದ ಗರುಡೋತ್ಪತ್ತಿಮುಂತಾದವಿಷಯಗಳಿಂದಕೂಡಿರುವ ಗಾರುಡ ಪುರಾಣವು ೧೯೦೦೦ ಹತ್ತೊಂಭತ್ತು ಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ಬ್ರಹ್ಮಪ್ರೋಕ್ತವಾಗಿ ಲಲಿತೋಪಾಖ್ಯಾನಾದಿ ದೇವೀಮಹಿಮಾನುಬದ್ಧವಾದ ಬ್ರಹ್ಮಾಂಡ ಪುರಾಣವು ೧೨,೦೦೦ ಹನ್ನೆರಡು ಸಾವಿರ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ಈಪುರಾಣಗಳ, ಒಟ್ಟು ಗ್ರಂಥ ಸಂಖ್ಯೆಯು ೪,೦೦,೦೦೦ ನಾಲ್ಕು ಲಕ್ಷಪರಿಮಿತಿಯುಳ್ಳದ್ದಾಗಿರುವದು.

ಉಪಪುರಾಣಗಳು.

ಈ ಅಷ್ಟಾದಶ ಮಹಾ ಪುರಾಣಗಳಿಗೆ ಹದಿನೆಂಟು ಉಪಪುರಾಣಗಳುಂಟಾಗಿರುವವು, ಅವುಗಳು ಯಾವವೆಂದರೆ,—

೧. ಸನತ್ಕುಮಾರ, ೨. ನಾರಸಿಹ್ಮ, ೩. ಸ್ಕಾಂದ, ೪. ಶಿವಧರ್ಮಪುರಾಣ, ೫. ದೌರ್ವಾಸವು ೬. ನಾರದೀಯ್ಯವು, ೭ ಕಾಪಿಲವು, ೮. ಮಾನವವು, ೯. ಔಶನಸವು ೧೦. ಬ್ರಹ್ಮಾಂಡವು, ೧೧. ವಾರುಣವು, ೧೨. ಕೌಶಿಕವು, ೧೩. ಕಾಳೀಪುರಾಣ, ೧೪. ಮಹೇಶ್ವರಪುರಾಣ, ೧೫. ಸೌಮ್ಯವು, ೧೬. ಸಾಂಬವು, ಎಲ್ಲಾ೧೭.ಆದಿತ್ಯವು, ೧೮. ಭಾರ್ಗವವು ಈ ಹದಿನೆಂಟು ಉಪಪುರಾಣಗಳು ೧,೦೦,೦೦೦,ಒಂದು ಲಕ್ಷ ಗ್ರಂಥ ಸಂಖ್ಯೆಯುಳ್ಳದ್ದಾಗಿರುವದು, ಇದಲ್ಲದೆ ಪರಾಶರ, ಮರೀಚಿ ಮುಂತಾದವರಿಂದ ರಚಿಸಲ್ಪಟ್ಟ, ಪಾರಾಶರ,ಮಾರೀಚ, ಸಾವಿತ್ರಗಳೇ ಮೊದಲಾದಮುವ್ವತ್ತಾರು ಸಂಹಿತೆಗಳು ಪುರಾಣರೂಪವಾಗಿರುವವು. ||೫||

ಮಹೇಶಸ್ಯ—ಶಿವನ,ಷಡಕ್ಷರಃ-ಷಡಕ್ಷರಮನುವು, ವಿಷ್ಣೋ—ವಾಸುದೇ

ರಶ್ಚ ಸವಿತುಃಜನನೀಛಂದಸಾಮಪಿ ||೬|| ಐಂದ್ರಃ- ರುದ್ರ
ಸ್ಯಗಾಯತ್ರೀದುರ್ಗಾಮಂತ್ರಶ್ಚ ಗಾರುಡಃ | ಕೂಷ್ಮಾಂ
ಡಾದೀನಿಸೂಕ್ತಾನಿಉಪಾಖ್ಯಾನಾನಿಪಾಠತಃ|ಶ್ರವಣಾತ್ಪಾ
ಪಕರ್ಮಭ್ಯಃಮುಚ್ಯತೆಮನುಜೋಭುವಿ ||೭|| ಗಣೇಶಂಚದಿ
ನೇಶಂಚಧ್ಯಾಯನ್ನಾರೋಗ್ಯಮಾಪ್ನುಯಾತ್|ದುರ್ಗಾಣಿ
ಹರತೆ ದುರ್ಗಾಕೇಶವೊಮೋಕ್ಷ ದೋಭವೆತ್ ||೮|| ಹರೋದ
ದಾತಿ ಸುಜ್ಞಾನಂ ಗರುಡೋವಿಷಹಾಭವೇತ್ || ಗಣೇಶೊ

ವನ, ದ್ವಾದಶವರ್ಣಕಃ-ದ್ವಾದಶಾಕ್ಷರಮನುವು, ಸವಿತುಃ-ಸೂರ್ಯನ,ಅಷ್ಟಾಕ್ಷರಃ-ಅಷ್ಟಾಕ್ಷರಮಂತ್ರವು, ಛಂದಸಾಂ-ವೇದಗಳಿಗೆ, ಜನನೀ-ತಾಯಿಯಾದ, ಗಾಯತ್ರಿಯ ಮಂತ್ರವು, ಪಾಪಹರವು, ||೬||

ಐಂದ್ರಃ-ಇಂದ್ರಸಂಬಂಧವಾದಮಂತ್ರವು.ರುದ್ರಸ್ಯ-ಶಿವನ,ಗಾಯತ್ರೀ-ಗಾಯತ್ರಿಯು, ದುರ್ಗಾಮಂತ್ರಃ-ದುರ್ಗಾ ದೇವತೆಯಮಂತ್ರವು, ಗಾರುಡಃ-ಗರುಡಮಂತ್ರವು, ಕೂಷ್ಮಾಂಡಾದೀನಿ-ಕೂಷ್ಮಾಂಡಸೂಕ್ತವೇ ಮೊದಲಾದ, ಸೂಕ್ತಾನಿ-ವೇದಮಂತ್ರಗಳು, ಉಪಾಖ್ಯಾನಾನಿ-ಚರಿತ್ರೆಗಳು, ಪಾಠತಃ-ಪಾರಾಯಣದಿಂದ,ಶ್ರವಣಾತ್-ಕೇಳುವದ್ದರಿಂದ, ಪಾಪಕರ್ಮಭ್ಯಃ-ಪಾಪಕೃತ್ಯಗಳಿಂದ, ಭುವಿ-ಭೂಲೋಕದಲ್ಲಿ, ಮನುಜಃ-ಮನುಷ್ಯನು, ಮುಚ್ಯತೆ-ಬಿಡಲ್ಪಡುವನು || ||೭||

ಗಣೇಶಂಚ-ಗಣಪತಿಯನ್ನು, ದಿನೇಶಂಚ-ಸೂರ್ಯನನ್ನು, ಧ್ಯಾಯನ್-ಧ್ಯಾನಿಸಿದವನಾಗಿ, ಆರೋಗ್ಯಂ-ನಿರೋಗತೆಯನ್ನು, ಆಪ್ನುಯಾತ್-ಪಡೆಯುವನು, ದುರ್ಗಾ-ದುರ್ಗಾದೇವಿಯು, ದುರ್ಗಾಣಿ-ಕಷ್ಟಗಳನ್ನು, ಹರತೆ-ಹೋಗಲಾಡಿಸುತ್ತಾಳೆ, ಕೇಶವಃ-ವಿಷ್ಣುವು, ಮೋಕ್ಷದಃ-ಮುಕ್ತಿಯನ್ನು ಕೊಡುವಂಥಾವನು, ಭವೇತ್-ಆದಾನು || ||೮||

ಹರಃ-ಶಿವನು, ಸುಜ್ಞಾನಂ-ಆತ್ಮಜ್ಞಾನವನ್ನು, ದದಾತಿ-ಕೊಡುತ್ತಾನೆ,ಗರುಡಃ-ವೈನತೇಯನು,ವಿಷಹಾ-ವಿಷವನ್ನು ಹೋಗಲಾಡಿಸುವವನು, ಭವೇತ್-ಆಗುವನು, ಗಣೇಶಃ-ಗಣಪತಿಯು, ಅಖಿಲ-ಸಮಸ್ತವಾದ, ವಿಘ್ನಾನಿ-ಅಂತರಾಯಗಳನ್ನು, ಶಮಯೇತ್-ಹೋಗಲಾಡಿಸು

ಪ್ರೀಪಿಘ್ನಾ ನಿಶಮುಂಚಿನ್ನಾತ್ರಸಂಶಯಃ ॥೯॥ ಸೌಭಾಗ್ಯಂ
ಸುಂದರೀದದ್ಯಾನ್ಮಹಾಲಕ್ಷ್ಮೀಮಹಾಶ್ರಿಯಂ॥ದದಾತಿಮ
ನುಜಾನಾಂತುಮಂಗಳಂಸರ್ವಮಂಗಳಾ॥೧೦॥ಗ್ರಹಾಶ್ಚ ಕಾ
ಲಜಾದೋಷಾ ಹನ್ಯುಸ್ತನ್ಮಂತ್ರಜಾಪನಾತ್ ।ಕಾಮೀ
ಕಾಮಾನವಾಪ್ನೋತಿನಿಷ್ಕಾಮೀಮೋಕ್ಷಮಾಪ್ನುಯಾತ್॥೧೧॥
ಶಾಸ್ತ್ರದೃಷ್ಟೇನ ವಿಧಿನಾಪ್ರಾಣಾಯಾಮ ಷಡಾಚರೇ

ಪನು, ಅತ್ರ–ಈ ವಿಷಯದಲ್ಲಿ, ಸಂಶಯಃ–ಸಂದೇಹವು, ನ–ಇಲ್ಲ ॥೯॥

ಸುಂದರೀ–ತ್ರಿಪುರಸುಂದರೀದೇವಿಯು,ಸೌಭಾಗ್ಯಂ–ಸಂಪತ್ಕರತ್ವವ ನ್ನು, ಮಹಾಲಕ್ಷ್ಮೀ–ಇಂದಿರೆಯು, ಮಹಾಶ್ರಿಯಂ–ಹೆಚ್ಚಾದ ಐಶ್ವ ರ್ಯವನ್ನು, ದದ್ಯಾತ್–ಕೊಡುವಳು, ಮನುಜಾನಾಂ–ಮನುಷ್ಯರಿಗೆ, ಸ ರ್ವಮಂಗಳಾ–ಮಂಗಳಚಂಡಿಯು, ಮಂಗಳಂ–ಶುಭವನ್ನು, ದದಾತಿ– ಕೊಡುತ್ತಾಳೆ ॥ ॥೧೦॥

ಗ್ರಹಾಶ್ಚ–ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶ ನಿ, ರಾಹುಕೇತುಗಳು, ತನ್ಮಂತ್ರ–ಆದಾಯ ಗ್ರಹಗಳ, ಮಂತ್ರಗಳ, ಜಾಪನಾತ್–ಪಾಠದಿಂದ, ಕಾಲಜಾ–ಬಾಲ್ಯ,ಯೌವನ, ಕೌಮಾರ,ವಾ ರ್ಧಕ್ಯಾದಿ ಕಾಲಗಳಲ್ಲಿ ಪೂರ್ವಜನ್ಮದಲ್ಲಿ ಈ ಜನ್ಮದಲ್ಲಿ ಮಾಡಿದ ಪಾಪ ಗಳನ್ನು, ಪಾಪದಿಂದ ಉಂಟಾದ ಬಾಧೆಗಳನ್ನು, ಹನ್ಯುಃ–ಹೋಗ ಮಾಡುವರು, ಕಾಮೀ–ಕೋರಿಕೆಯುಳ್ಳವನು, ಕಾಮಾನ್–ಇಷ್ಟಾರ್ಥವ ನ್ನು, ಅವಾಪ್ನೋತಿ–ಪಡೆಯುವನು, ನಿಷ್ಕಾಮೀ–ಕೋರಿಕೆಯಿಲ್ಲದೆ ಜಪ ಮಾಡುವವನು, ಮೋಕ್ಷಂ–ಮುಕ್ತಿಯನ್ನು, ಆಪ್ನುಯಾತ್–ಪಡೆಯು ತ್ತಾನೆ ॥ ॥೧೧॥

ಶಾಸ್ತ್ರ–ಯೋಗಶಾಸ್ತ್ರದಲ್ಲಿ, ದೃಷ್ಟೇನ–ನೋಡಲ್ಪಡುವ, ವಿಧಿ ನಾ–ವಿಧಾನದಿಂದ, ಷಟ್–ಆರು ಸಂಖ್ಯೆಯಾದ, ಪ್ರಾಣಾಯಾಮಾನ್– ಪ್ರಾಣಾಯಾಮಗಳನ್ನು, ಆಚರೇತ್–ಮಾಡಬೇಕು, ಯತ್– ಯಾವ, ಪಾಪಂ–ಪಾತಕವು, ಉಪಸ್ಥ–ಶಿಶ್ನದಿಂದ, ಕೃತಂ–ಮಾಡಲ್ಪ ಟ್ಟಿತೋ, ಪಾದಾಭ್ಯಾಂ–ಕಾಲುಗಳಿಂದ, ಯತ್ಕೃತಂ–ಯಾವ ಪಾಪ ವು, ಮಾಡಲ್ಪಟ್ಟಿತೋ, ಬಾಹುಭ್ಯಾಂ–ತೋಳು, ಕೈಗಳಿಂದ, ಮನ

ತ್ರೀ।ಯದುಪಸ್ಥಕೃತಂಪಾಪಂಪಾದಾಭ್ಯಾಂಚಾಪಿಯತ್ಕೃತಂ।
ಬಾಹುಭ್ಯಾಂಮನಸಾವಾಚಾಶ್ರೋತ್ರತ್ವಘ್ರಾಣಚಕ್ಷುಷಾ।

ಸಾ–ಚಿತ್ತದಿಂದ,ವಾಚಾ–ಮಾತಿನಿಂದ,ಶ್ರೋತ್ರತ್ವಘ್ರಾಣಚಕ್ಷುಷಾ–ಕಿವಿ,ಮೂಗು,ಕಣ್ಣುತ್ವಕ್ಕುಗಳಿಂದ,ಯತ್ಕೃತಂ–ಯಾವ ಪಾಪವು ಮಾಡಲ್ಪಟ್ಟಿತೋ,ತತ್ಸರ್ವಂ–ಆ ಪಾಪವೆಲ್ಲವೂ, ತೂಲಂ–ಹತ್ತಿಯು,ಅಗ್ನಿನಾ–ಬೆಂಕಿಯಿಂದ,ಯಥಾ–ಹೇಗೆ,ದಹ್ಯತೆ–ಸುಡಲ್ಪಡುತ್ತೋ, ಹಾಗೆ,ಕ್ಷೀಯತೆ–ನಾಶವಾಗುವದು. ॥ತಾ॥ ಕೈ, ಕಾಲು, ಕಣ್ಣು, ಮೂಗು; ಕಿವಿಗಳಿಂದಲೂ ಮನಸ್ಸಿನಿಂದಲೂ ಮಾಡಲ್ಪಟ್ಟ ಸಮಸ್ತ ಪಾಪಗಳು ಯೋಗಶಾಸ್ತ್ರದಲ್ಲಿ ಹೇಳಿರುವ ರೀತಿಯಿಂದ ಪ್ರಾಣಾಯಾಮಗಳನ್ನು ಮಾಡಿದರೆ ಹೋಗುವವು. ಆದರೆ ಇದುವಾಸ್ತವವಾಗಿದ್ದಾಗ್ಯೂ, ಕಲಿಯುಗದಲ್ಲಿ ಬಾಲ್ಯದಿಂದ ಬ್ರಹ್ಮಚರ್ಯಹೀನರಾಗಿಯೂ,ತಪೋಹೀನರಾಗಿಯೂ ಇರುವದ್ದರಿಂದ ಯೋಗಶಾಸ್ತ್ರಾನುಸಾರವಾಗಿರೇಚಕಪೂರಕಕುಂಭಕಾದಿಗಳನ್ನು ಮಾಡಿ, ವಾಯುವನ್ನು ಸ್ವಾಧೀನದಲ್ಲಿ ತಂದುಕೊಳ್ಳಲು ಆಗುವದಿಲ್ಲ, ಪ್ರಾಯಶಃ ಇಂದ್ರಿಯವ್ಯಯವಿಲ್ಲದವನಿಗೆ ಯೋಗಶಾಸ್ತ್ರವು ಅನುಭವದಲ್ಲಿ ಬರುವುದು, ಮತ್ತು ಯೋಗಶಾಸ್ತ್ರವನ್ನು ತಾವು ಅಭ್ಯಾಸಮಾಡಿ ಸಿದ್ಧರಾಗಿದ್ದುಕೊಂಡು ಇತರರಿಗೆ,ಅಭ್ಯಾಸಮಾಡಿಸುವ ಗುರುಗಳು ದೊರೆಯದೇ ಇರುವದ್ದರಿಂದ, ಸದ್ಗುರುಮೂಲಕವಾಗಿ ಬಾರದೇಇರುವ ಯೋಗಾಭ್ಯಾಸವು ಪ್ರಮಾದವನ್ನುಂಟುಮಾಡುತ್ತೆ, ಅಥವಾ ಮಿತವಾಗಿ ಆಸನಾದಿಗಳನ್ನು ಹಾಕಿಕೊಂಡು ಯಥೋಚಿತವಾಗಿ ಇರುತ್ತಿದ್ದರೆ, ಗರಡಿ ಸಾಧನೆಯಂತೆ ದೇಹಕ್ಕೆ ಅಲ್ಪವಾಗಿ ಲಘುವಾಗಿರುವಂತೆ ತೋರುತ್ತಾ ಇರುವುದು. ಆದ್ದರಿಂದ ಕಲಿಯುಗದಲ್ಲಿ ಸದ್ಗುರು ಕಟಾಕ್ಷವಿಲ್ಲದೆ ಯೋಗಸಿದ್ಧಿಯೂ, ಆತ್ಮಜ್ಞಾನವೂ ಲಭಿಸುವದಿಲ್ಲ.

### ಯೋಗಸಿದ್ಧಿಲಕ್ಷಣ.

ಉಪನಯನವಾದ ಕೂಡ್ಲೇ ಗಾಯತ್ರೀಮಂತ್ರಜಪಾದಿಗಳಿಂದ ವೇದಮಾತೆಯ ಅನುಗ್ರಹಕ್ಕೆ ಪಾತ್ರನಾಗಿದ್ದರೆ ೧೨ ವರ್ಷಪರ್ಯಂತರ ಮಾಡುತ್ತಿರುವಬ್ರಹ್ಮಚರ್ಯದಲ್ಲಿಯೇ ಯೋಗವುಸಿದ್ಧಿಯಾಗಿ,ಆನೆಯಂತೆ ಬಲ

ತತ್ಸರ್ವಂಕ್ಷೀಯತೇತೂಲಮಗ್ನಿನಾದಹ್ಯತೇಯಥಾ||೧೨||ಮ
ಹಾಪಾತಕಿನಶ್ಚೈವಶೇಷಾಶ್ಚಾಕಾರ್ಯಕಾರಿಣಃ | ಬಹುಕಾ
ಲಂಸುತಪ್ತೇನಮುಚ್ಯಂತೇಪಾತಕಾತ್ತತಃ||೧೩|| ಮನೋವಾ
ಕ್ಕಾಯಜಂಪಾಪಂವಿನಶ್ಯತಿತಪೋಬಲಾತ್ | ತಸ್ಮಾತ್ತ
ಪೋರತೋಭೂತ್ವಾವಸ್ತವ್ಯಂ ಬ್ರಾಹ್ಮಣೇನತು ||೧೪|| ದೇವ
ಬ್ರಾಹ್ಮಣಪೂಜಾಚತೀರ್ಥಯಾತ್ರಾಜಪಸ್ತಪಃ | ಗ್ರಹ

ವು,ತೇಜಸ್ಸು,ಅಪಿಭುಕ್ತಂವಿಷಂಘೋರಂಪಿಯೋಗ್ಯಾಷವಿಮಜೀರ್ಯತೇ|| ಎಂ
ಬಂತೆ ವಿಷವನ್ನು ತಿಂದಾಗ್ಯೂ, ಜೀರ್ಣಮಾಡಿಕೊಳ್ಳುವ ಶಕ್ತಿಯೂ, ಪರಹೃದಯತಾತ್ಪರ್ಯವನ್ನು ತಿಳಿಯೋಣವು, ಶಾಪಾನುಗ್ರಹಸಾಮ ರ್ಥ್ಯವೂ, ಭೂತ ಭವಿಷ್ಯದ್ವರ್ತಮಾನಾರ್ಥಗಳನ್ನು ತಿಳಿಸುವ ಸಾಮ ರ್ಥ್ಯವೂ ಉಂಟಾಗುವವೇ ಯೋಗಸಿದ್ಧನಿಗೆ ಚಿಹ್ನವಾಗಿರುತ್ತದೆ.

ಮತ್ತು ಪೃಥಿವ್ಯಪ್ತೇಜೋವಾಯ್ವಾಕಾಶಾದಿಗಳಿಂದ ಉಂಟಾಗುವ ಬಾಧೆಗಳು ಯೋಗಿಗೆ ಘಟಿಸುವದಿಲ್ಲ. ಆಹಾರಾದಿಗಳನ್ನು ಬಿಟ್ಟದ್ದಾ ಗ್ಯೂ, ಅತ್ಯಾಹಾರವನ್ನು ಮಾಡಿದಾಗ್ಯೂ ಒಂದೇ ಸಮವಾದ ಕಾಯ ಸಿದ್ಧಿಯೇ ಉಂಟಾಗದವನಿಗೆ ಯೋಗಸಿದ್ಧಿಯಾಗುವದಿಲ್ಲ || ||೧೨||

ಮಹಾಪಾತಕಿನಃ–ಮಹಾ ಪಾಪಗಳನ್ನು ಮಾಡಿದವರು, ಶೇಷಾಃ– ಮಿಕ್ಕ, ಅಕಾರ್ಯಕಾರಿಣಶ್ಚ–ಮಾಡಬಾರದ ಪಾಪಗಳನ್ನು ಮಾಡಿದವ ರು, ಬಹುಕಾಲಂ–ಬಹಳ ಕಾಲದವರಿಗೂ, ಸುತಪ್ತೇನ–ಮಾಡಿದ ತಪಸ್ಸಿ ನಿಂದ, ತತಃ–ಆಬಳಿಕ, ಪಾತಕಾತ್–ಪಾಪದ್ದಶೆಯಿಂದ, ಮುಚ್ಯಂತೇ– ಮುಕ್ತರಾಗುತ್ತಾರೆ || ||೧೩||

ತಪೋಬಲಾತ್–ತಪಶ್ಶಕ್ತಿಯಿಂದ, ಮನೋವಾಕ್ಕಾಯಜಂ–ಚಿತ್ತ ವಾಗ್ದೇಹಗಳಿಂದ ಉಂಟಾದ, ಪಾಪಂ–ಪಾಪವು, ವಿನಶ್ಯತಿ–ನಾಶವಾ ಗುತ್ತೆ, ತಸ್ಮಾತ್–ಆದಕಾರಣದಿಂದ, ಬ್ರಾಹ್ಮಣೇನ–ದ್ವಿಜನಿಂದ, ತಪೋ ರತಃ–ತಪೋನಿಷ್ಠನು, ಭೂತ್ವಾ–ಆಗಿ,ವಸ್ತವ್ಯಂ–ಇರತಕ್ಕದ್ದು|| ||೧೪||

ದೇವ–ದೇವತೆಗಳ, ಬ್ರಾಹ್ಮಣ–ಬ್ರಾಹ್ಮಣರ, ಪೂಜಾ–ಸೇವೆಯು, ತೀರ್ಥಯಾತ್ರಾ–ಗಂಗಾದಿ ತೀರ್ಥೋದಕ ಸ್ನಾನರೂಪವಾದ ಯಾತ್ರೆ ಯು, ಜಪಃ–ಮಂತ್ರಜಪ, ಪಾರಾಯಣರೂಪವಾದ ಜಪವು, ತಪಃ–

ಣಾವಿಷುಕಾಲೇಷುಮಹಾಪಾತಕನಾಶಕಂ ॥೧೫॥ ಅಯೋ
ಧ್ಯಾಮಧುರಾಮಾಯಾಕಾಶೀಕಾಂಚೀಅವಂತಿಕಾ ॥ ಬೃಂ

ಸ್ಪೃ... ... ...ಯಣಾವಿರೂಪ ತಪಸ್ಸು, ಗ್ರಹಣ-ಸೂರ್ಯಚಂದ್ರೋ ಪರಾಗದಲ್ಲಿ,ಅವಿ-ಅರ್ಧೋದಯ,ಮಹೋದಯ, ಸಂಕ್ರಮಣ ಮುಂತಾ ದ, ಕಾಲೇಷು-ಪುಣ್ಯಕಾಲಗಳಲ್ಲಿ, ಮಹಾಪಾತಕನಾಶನಂ-ಮಹಾ ಪಾ ಪಗಳನ್ನು, ಹೋಗಲಾಡಿಸುವದು ॥ ॥೧೫॥

ಅಯೋಧ್ಯಾ-ಸೂರ್ಯವಂಶದ ದೊರೆಗಳಿಗೆ ಪ್ರಧಾನಪುರವಾಗಿದ್ದ ಸ ರಯೂನದಿಯ ಬಳಿಯಲ್ಲಿರುವ ಅಯೋಧ್ಯಾಪುರವು,ಮಧುರಾ-ಕೃಷ್ಣ ಮೂರ್ತಿಗೆ ಮಾತಾಮಹನಾದ ಉಗ್ರಸೇನನ ಮಗನಾದ ಕಂಸನು ಆ ಳುತ್ತಿದ್ದ ಮಧುರಾಪುರವು, ಮಾಯಾ-ಮಾಯಾವತಿಯೆಂಬ ಹೆಸರುಳ್ಳ ಮೂಲಪ್ರಕೃತ್ಯವತಾರಾಧಿಷ್ಠಾನವಾಗಿರುವ ಪುರವು, ಕಾಶೀ-ಜನಕ ರಾಯನ ತಮ್ಮನಾದ ಕುಶಧ್ವಜನು ಪಾಲಿಸುತ್ತಿದ್ದದ್ದಾಗಿಯೂ, ಮ ತ್ತು ಸಕಲ ದೇವತಾವಾಸವಾಗಿ, ಮಹಾ ಪ್ರಳಯಕಾಲದಲ್ಲಿಯೂ, ಈ ಶ್ವರನ-ತ್ರಿಶೂಲಾಗ್ರದಲ್ಲಿ ಇದ್ದುಕೊಂಡು ನಾಶವಾಗದೇಲೂ, ಅಲ್ಲಿ ಮೃತರಾದವರಾದ ಪಶುಪಕ್ಷಿ ಮೃಗ ಚಂಡಾಲಯತಿಗಳೇ ಮೊದಲಾದ ಪ್ರಾಣಿಗಳಿಗೆ ಈಶ್ವರತಾರಕೋಪದೇಶದಿಂದ ಮುಕ್ತಿಯನ್ನು ಕೊಡು ವದಾಗಿಯೂ, ಪಾಷಾಣಪ್ರತಿಮಾದಿಗಳಲ್ಲಿ ವಿಷ್ಣುಕಲಾಯುಕ್ತವಾಗಿ ಯೂ, ವಿಶ್ವೇಶ್ವರಕ್ಷೇತ್ರವಾದ ಕಾಶಿಯು, ಕಾಂಚೀ-ಕಾಮಾಕ್ಷೀ ಏ ಕಾಂಬರೇಶ್ವರರಿಂದ ಸಂಯುತವಾಗಿ ಮುಕ್ತಿಕ್ಷೇತ್ರವೆನಿಸುವ ಕಾಂಚೀ ಪುರವು, ಅವಂತಿಕಾ-ಭಕ್ತರಿಗೆ ಮುಕ್ತಿಯನ್ನು ಇತ್ತು ಸುಗತಿಯನ್ನು ತೋರಿಸುವದಾದ ಅವಂತಿಕಾಪುರವು, ದ್ವಾರಕಾ-ಸಮುದ್ರ ಮಧ್ಯದಲ್ಲಿ ದ್ವೀಪದಂತೆ ಇದ್ದುಕೊಂಡು ಇರುವದಾಗಿಯೂ, ಕೃಷ್ಣಾವತಾರದಲ್ಲಿ ಮಹಾವಿಷ್ಣುವೇ ವಾಸಮಾಡಿದ್ದದ್ದರಿಂದ ಮುಕ್ತಿದ್ವಾರವೆನಿಸುವ ದ್ವಾರ ಕಾಪುರವು, ಬೃಂದಾವನಂ-ಕೃಷ್ಣಮೂರ್ತಿಯು ಗೋಪಾಲಕನಾಗಿ, ಬೃಂದಾವನವೆಂಬ ಕ್ಷೇತ್ರದಲ್ಲಿ ಸಂಚಾರಮಾಡುತ್ತಿದ್ದವನಾದಕಾರಣ, ಬೃಂದಾವನವು ಕಾಶಿಯಂತೆಯೇ, ಪಶುಪಕ್ಷಿಮೃಗಾದಿಗಳಿಗೆ ಮರಣದಿಂ ದ ಮೋಕ್ಷವನ್ನು ಕೊಡುವದಾದ್ದರಿಂದ, ಬೃಂದಾವನ ಕ್ಷೇತ್ರವು, ಗನು

ಪಾಪಸಂಘಾತಕಾಃ ಚೇಗಮಾಸಾತ್ಪಾಪನಾಶಕಾಃ ||೧೬, ಅನ್ಯೇ
ಕ್ಷೇತ್ರೇ ಕೃತಂ ಪಾಪಂ ಪುಣ್ಯಕ್ಷೇತ್ರೇ ವಿನಸ್ಯತಿ । ಪುಣ್ಯಕ್ಷೇ
ತ್ರೇ ಕೃತಂ ಪಾಪಂ ಕುಂಭಕೋಣೇ ವಿನಸ್ಯತಿ ॥ ೧೭ ॥ ಕುಂಭ
ಕೋಣೇ ಕೃತಂ ಪಾಪಂ ಅಂತರ್ಗೇಹೇ ವಿನಸ್ಯತಿ । ಅಂತರ್ಗೇಹೇ
ಕೃತಂ ಪಾಪಂ ಕಾಶ್ಯಾಂ-ಬೃಂದಾವನೇ ತಥಾ ॥೧೮॥ ಕೃತಂ
ಬೃಂದಾವನೇ ಕಾಶ್ಯಾಂ ಮರಣಾತ್ತತ್ರ ನಶ್ಯತಿ॥ ವಿನಾನ್ಯತ್ರ

ನಾತ್-ಅಲ್ಲಿ ಯಾತ್ರಾರ್ಥವಾಗಿ ಹೋಗೋಣದ್ದರಿಂದ, ಪಾಪನಾಶ
ಕಾಃ-ದುರಿತಗಳನ್ನು ಹೋಗಮಾಡುವವು ॥ ॥೧೬॥

ಅನ್ಯಕ್ಷೇತ್ರೇ-ಪುಣ್ಯಕ್ಷೇತ್ರವಲ್ಲದ ಉದಾಸೀನಭೂಮಿಯಲ್ಲಿ, ಕೃತಂ-ಮಾಡಲ್ಪಟ್ಟ, ಪಾಪಂ-ಪಾತಕವು, ಪುಣ್ಯಕ್ಷೇತ್ರೇ-ಪುಣ್ಯಭೂಮಿಯಲ್ಲಿ, ವಿನಶ್ಯತಿ-ಹೋಗುವದು, ಪುಣ್ಯಕ್ಷೇತ್ರೇ-ಪುಣ್ಯಭೂಮಿಯಲ್ಲಿ, ಕೃತಂ-ಮಾಡಲ್ಪಟ್ಟ, ಪಾಪಂ-ಪಾತಕವು, ಕುಂಭಕೋಣೇ-ಕುಂಭಕೋಣವೆಂಬ ಕ್ಷೇತ್ರದಲ್ಲಿ, ವಿನಶ್ಯತಿ-ಹೋಗುವದು ॥ ॥೧೭॥

ಕುಂಭಕೋಣೇ-ಕುಂಭಕೋಣಕ್ಷೇತ್ರದಲ್ಲಿ, ಕೃತಂ-ಮಾಡಲ್ಪಟ್ಟ, ಪಾಪಂ-ಪಾತಕವು, ಅಂತರ್ಗೇಹೇ-ಅಂತರ್ಗೇಹವೆಂಬ ಕ್ಷೇತ್ರದಲ್ಲಿ, ವಿನಶ್ಯತಿ-ನಾಶವಾಗುವದು, ಅಂತರ್ಗೇಹೇ-ಅಂತರ್ಗೇಹಕ್ಷೇತ್ರದಲ್ಲಿ, ಕೃತಂ-ಮಾಡಲ್ಪಟ್ಟ, ಪಾಪಂ-ಪಾತಕವು, ಕಾಶ್ಯಾಂ-ಕಾಶಿಯಲ್ಲಿ, ತಥಾ-ಹಾಗೆ ಬೃಂದಾವನೇ-ಬೃಂದಾವನಕ್ಷೇತ್ರದಲ್ಲಿ, ವಿನಶ್ಯತಿ-ಹೋಗುತ್ತೆ. ॥ತಾ॥ ಇತರ ಪುಣ್ಯಕ್ಷೇತ್ರಗಳಲ್ಲಿ ಮಾಡಿದ ಸಮಸ್ತ ಪಾಪಗಳು ಕಾಶಿಯಲ್ಲಿ, ಬೃಂದಾವನದಲ್ಲಿ ಮರಣಕಾಲದಲ್ಲಿ ತಾರಕೋಪದೇಶವಾಗುವದ್ದರಿಂದ ಹೋಗುವವು ॥ ॥೧೮॥

ಬೃಂದಾವನೇ-ಬೃಂದಾವನಕ್ಷೇತ್ರದಲ್ಲಿ, ಕಾಶ್ಯಾಂ-ಕಾಶಿಯಲ್ಲಿ, ಕೃತಂ-ಮಾಡಲ್ಪಟ್ಟ, ಪಾಪಂ-ದುರಿತವು, ತತ್ರ-ಅಲ್ಲಿ, ಮರಣಾತ್-ಸಾಯುವದ್ದರಿಂದ, ನಶ್ಯತಿ-ಹೋಗುತ್ತೆ, ವಿನಾ-ಕಾಶೀಯಲ್ಲಿ, ಅಥವಾ ಬೃಂದಾವನದಲ್ಲಿ ಮೃತಿಯನ್ನು ಪಡೆಯದೆ, ಅನ್ಯತ್ರ-ಇತರ ಪುಣ್ಯಕ್ಷೇತ್ರಗಳಲ್ಲಿ, ಮೃತಿಂ-ಮರಣವನ್ನು, ಪ್ರಾಪ್ತಃ-ಹೊಂದಿದ ಪಾಪಿಯು, ನರಕಯಾತನಾಃ-ನರಕಬಾಧೆಗಳನ್ನು, ಲಭೇತ್-ಹೊಂದುವನು ॥ತಾ॥ ಕಾಶೀ ಬೃಂದಾವನ

ಪ್ರಾಪ್ತಿಂಪ್ರಾಪ್ತಾಃ ಲಭನ್ನರಕಯಾತನಾಃ ॥೧೯॥ ಅನುಭೂ
ಯಚಿರಂದುಃಖಂದುರ್ಯೋನೀಃಬಹುಧಾಗತಃ। ಅಶಕ್ಯಾನ್ಯ
ಪಿದುಃಖಾನಿಬಹುಕಾಲಂಸವಿಂದತಿ ॥೨೦॥ ಪುಣ್ಯಕ್ಷೇತ್ರಗ
ತೋಮರ್ತ್ಯೋನಕುರ್ಯಾತ್ಪಾಪಸಂಚಯಂ॥ ಗಂಗಾಚಯ
ಮುನಾಚೈವನರ್ಮದಾಚವೃಷದ್ವತೀ । ಗಂಡಕೀಗೌತಮೀ
ಸಿಂಧುಃಕೌಶಿಕೀಕೃಷ್ಣವೇಣಿಕಾ॥ ಕಾವೇರಿಕಪಿಲಾಹೇಮಾ

ಕ್ಷೇತ್ರಗಳಲ್ಲಿ ಸತ್ತವನು ಮಹಾಪಾಪಿಯಾದಾಗ್ಯೂ ಮುಕ್ತಿಯನ್ನು ಹೊಂದುವನು, ಹಾಗೆ ಅಲ್ಲದೆ ಪುಣ್ಯ ಕ್ಷೇತ್ರಗಳಲ್ಲಿ ಪಾಪವನ್ನು ಮಾತ್ರ ಮಾಡಿದವನು ಇತರ ಪುಣ್ಯಕ್ಷೇತ್ರಗಳಲ್ಲಿ ಸತ್ತಾಗ್ಯೂ ನರಕಬಾಧೆಗಳನ್ನೇ ಅನುಭವಿಸುತ್ತಾನೆ, ಮುಕ್ತನಾಗುವದಿಲ್ಲ ॥ ॥೧೯॥

ಚಿರಂ–ಬಹುಕಾಲದವರಿಗೂ,ದುಃಖಂ–ನರಕಯಾತನೆಯಿಂದ,ಉಂಟಾದ ಕಷ್ಟವನ್ನು, ಅನುಭೂಯ–ಅನುಭವಿಸಿ,ದುರ್ಯೋನೀಃ–ಕ್ರಿಮಿಕೀಟಾದಿ ಕೆಟ್ಟಜನ್ಮಗಳನ್ನು, ಬಹುಧಾ–ಅನೇಕಸಲ, ಗತಃ–ಪಡದವನಾಗಿ, ಅಶಕ್ಯಾನಿ–ಅನುಭವಿಸಲಸಾಧ್ಯಗಳಾದ,ದುಃಖಾನಿ–ಕಷ್ಟಗಳನ್ನು, ಬಹುಕಾಲಂ–ಅನೇಕಕಾಲದವರಿಗೂ, ಸಃ–ಮನುಜನು, ವಿದಂತಿ–ಆಯಾಯಿ ದುರ್ಯೋನಿಗಳಲ್ಲಿಯೇ ಅನುಭವಿಸುತ್ತಿರುವನು ॥ ॥೨೦॥

ಮರ್ತ್ಯಃ–ಮನುಷ್ಯನು, ಪುಣ್ಯಕ್ಷೇತ್ರಗತಃ–ಪುಣ್ಯಭೂಮಿಯಲ್ಲಿ ಇರುವವನಾಗಿ, ಪಾಪ–ದುರಿತಗಳ, ಸಂಚಯಂ–ಸಂಪಾದನೆಯನ್ನು, ಸಮೂಹವನ್ನು, ನಕುರ್ಯಾತ್–ಮಾಡಬಾರದು, ಗಂಗಾನದಿಯು, ಯಮುನಾನದಿಯು,ನರ್ಮದಾ–ರೇವಾನದಿಯು, ವೃಷದ್ವತೀನದಿಯು, ಗಂಡಕೀ–ಗಂಡಕೀನದಿಯು,ಗೌತಮೀ–ಗೋದಾವರಿಯುಸಿಂಧುನದಿಯು,ಕೌಶಿಕೀನದಿಯು,ಕೃಷ್ಣವೇಣಿಕೆಯು,ಕಾವೇರೀನದಿಯು,ಕಪಿಲಾನದಿಯು, ಹೇಮಾ–ಹೇಮಾವತಿಯು, ತುಂಗಭದ್ರಾನದಿಯು,ಸರಸ್ವತೀನದಿಯು, ಪಯೋಷ್ಣೀ–ನದಿಯು, ಫಲ್ಗುನೀನದಿಯು, ಶೋಣಾನದಿಯು, ತಥಾ–ಹಾಗೆ, ಭೀಮರಥೀನದಿಯು, ಸರಯೂನದಿಯು, ತಾರಕಾನದಿಯು,ಕೃಷ್ಣಾನದಿಯು,ಈನದಿಗಳು–ಸ್ನಾನಾತ್–ಅವಗಾಹನದಿಂದ,ಪಾಪಾಪನೋದಕಾಃ–ದುರಿತಗಳನ್ನು ಹೋಗಲಾಡಿಸುತ್ತವೆ ॥೨೩॥ ನ

ತುಂಗಭದ್ರಾ ಸರಸ್ವತೀ। ಪಯೋಷ್ಣೀ ಫಲ್ಗುನೀ ಶೋಣಾ ತಥಾಭೀಮರಥೀನದೀ ॥ ಸರಯೂತಾಮ್ರಕಾಕೃಷ್ಣಾ ಸ್ನಾನಾತ್ಪಾಪಾಪನೋದಕಾಃ ॥೧॥ ಸೇತುಸ್ನಾನಂಕಲೌಬ್ರಹ್ಮನ್ಮಹಾಪಾಪಾಪನೋದಕಂ ॥ ಕೋಟಿತೀರ್ಥಂರಾಮತೀರ್ಥಂಚಕ್ರತೀರ್ಥಂಚಪುಷ್ಕರಂ ॥ ಪಂಪಾಸರಃ-ಪದ್ಮಸರಃ ಪಾಪನಾಶಕರಂಸ್ಮೃತಂ ॥೨॥ ಸಕೃಜಪ್ತ್ವಾಸ್ಯವಾಮೀಯಂಶಿವಸಂಕಲ್ಪಮೇವವಾ । ಅಪಹೃತ್ಯಸುಪ

ರ್ಮದೆಯಲ್ಲಿ ಬಾಣಲಿಂಗಗಳು ಜನಿಸುತ್ತವೆ, ಶೋಣಾನದಿಯಲ್ಲಿ ಗಣಪತಿಗಳು ಉಂಟಾಗುವವು, ಗಂಡಕಿಯಲ್ಲಿ ಸಾಲಗ್ರಾಮಗಳುಂಟಾಗುವವು, ಗೋದಾವರೀನದಿಯೇ-ವೃದ್ಧಗಂಗೆಯೆನಿಸುವದು॥ ॥೧॥

ಬ್ರಹ್ಮನ್-ವೈಖಾನಸಮುನಿಯೇ, ಕಲೌ-ಕಲಿಯುಗದಲ್ಲಿ, ಸೇತುಸ್ನಾನಂ-ರಾಮಸೇತುವಿನ ಬಳಿಯ ಸಮುದ್ರೋದಕದಲ್ಲಿ ಸ್ನಾನವು, ಮಹಾಪಾಪ-ಬ್ರಹ್ಮಹತ್ಯಾದಿ ಮಹಾಪಾತಕಗಳನ್ನು, ಅಪನೋದಕಂ-ಹೋಗಲಾಡಿಸುವಂಥಾದ್ದು, ಕೋಟಿತೀರ್ಥಂ-ರಾಮೇಶ್ವರಕ್ಷೇತ್ರದಲ್ಲಿರುವ ಕೋಟಿತೀರ್ಥವೆಂಬ ಪರಿಶುದ್ಧೋದಕವು, ರಾಮತೀರ್ಥಂ-ರಾಮ ಮೂರ್ತಿಯಿಂದ ಮಾಡಲ್ಪಟ್ಟರಾಮತೀರ್ಥವು, ಚಕ್ರತೀರ್ಥಂ-ಸುದರ್ಶನದಿಂದ ಉಂಟಾದ ತೀರ್ಥವು, ಪುಷ್ಕರಂಚ-ಗಂಗೇಗೋದಾವರೀಕಾವೇರೀನರ್ಮದಾ ಮೊದಲಾದ ಮಹಾನದಿಗಳಲ್ಲಿ ಪುಷ್ಕರ ಪ್ರವೇಶವಾಗುವ ಕಾಲದ ತೀರ್ಥವು, ಅರ್ಕಪುಷ್ಕರ ಚಂದ್ರಪುಷ್ಕರ ಅಗ್ನಿಪುಷ್ಕರಾದಿ ಪುಷ್ಕರ ತೀರ್ಥವು, ಪಂಪಾಸರಃ-ಪಂಪಾಯೆಂಬಕೊಳವು, ಪದ್ಮಸರಃ-ಪದ್ಮಸರಸ್ಸು, ಪಾಪನಾಶಕಂ-ಪಾಪವನ್ನು ಹೋಗಲಾಡಿಸುವಂಥಾದ್ದು, ಎಂಬದಾಗಿ, ಸ್ಮೃತಂ-ಹೇಳಲ್ಪಡುವದು ॥ ॥೨॥

ಆಸ್ಯವಾಮೀಯಂ-ಆಸ್ಯವಾಮೀಯವೆಂಬರುಕ್ಕನ್ನು, ಶಿವಸಂಕಲ್ಪಮೇವವಾ- ಶಿವಸಂಕಲ್ಪವನ್ನು, ಸಕೃತ್-ಒಂದಾವರ್ತಿಯಾದರೂ, ಜಪ್ತ್ವಾ-ಪಾರಾಯಣಮಾಡಿ ಮಾನವಃ-ಮನುಷ್ಯನು, ಸುವರ್ಣಂ-ಭಂಗಾರವನ್ನು, ಅಪಹೃತ್ಯ-ಕದ್ದು, ಶುದ್ಧಃ-ಪರಿಶುದ್ಧನು, ಭವತಿ-ಆಗುತ್ತಾನೆ, ಅಂದರೆ-ಅಜ್ಞಾನದಿಂದ ಮಾಡಿದ ಸುವರ್ಣಸ್ತೇಯ ಪಾಪ

ರ್ಣಂವಾ ಶುದ್ಧೋಭವತಿಸೂನವಃ ॥೨೩॥ ಬ್ರಾಹ್ಮಣ
ಸ್ವರ್ಣಹಾರೀಚರುದ್ರಜಾಪ್ಯಾದ್ವಿಮುಚ್ಯತೇ ॥ ಸಹಸ್ರ
ಶೀರ್ಷಜಾಪೀತುಗುರುತಲ್ಪಾದ್ವಿಮುಚ್ಯತೆ॥೨೪॥ಸುರಾಪಾ
ನಾದ್ವಿಮುಚ್ಯೇತ ಅಘಮರ್ಷಣಪಾಠತಃ ॥ ಪ್ರಾಣಾಯಾ
ಮಾನುಸಾರೇಣಕೃತೆಶುಧ್ಧೋಭವಿಷ್ಯತಿ ॥ ಪ್ರಾಣಾಯಾಮ
ವಿಹೀನಸ್ಯನತಥಾಶುದ್ಧಿರಿಷ್ಯತೆ॥೨೫॥ದಶಪ್ರಣವಸಂಯು
ಕ್ತೈಃಪ್ರಾಣಾಯಾಮೈಶ್ಚತುಶ್ಚತೈಃ।ಬ್ರಹ್ಮಹತ್ಯಾಪಿಮು

ಪ್ರ ಹೋಗುವದೆಂಬ ಭಾವವು ॥ ॥೨೩॥

ಬ್ರಾಹ್ಮಣ–ಬ್ರಾಹ್ಮಣನ, ಸ್ವರ್ಣ–ಭಂಗಾರವನ್ನು, ಹಾರೀ–ಕದ್ದವನು, ರುದ್ರಜಾಪ್ಯಾತ್–ರುದ್ರಾಧ್ಯಾಯವನ್ನು ಪಠಿಸುವದರಿಂದ,ವಿಮುಚ್ಯತೆ-ಆಪಾಪದಿಂದ ಮುಕ್ತನಾಗುತ್ತಾನೆ, ಸಹಸ್ರಶೀರ್ಷಜಾಪಿ–ಸಹಸ್ರಶೀರ್ಷವೆಂಬುವದನ್ನು ಪಠಿಸುವವನು, ಗುರುತಲ್ಪಾತ್–ಅಜ್ಞಾನದಿಂದಮಾಡಿದ ಗುರುಪತ್ನೀಗಮನಾದಿ ಪಾಪದಿಂದ, ವಿಮುಚ್ಯತೆ–ಮುಕ್ತನಾಗುತ್ತಾನೆ ॥ ॥೨೪॥

ಅಘಮರ್ಷಣ–ಅಘಮರ್ಷಣ ಸೂಕ್ತದ, ಪಾಠತಃ–ಪಾರಾಯಣದಿಂದ, ಸುರಾಪಾನಾತ್–ಹೆಂಡವನ್ನು ಕುಡಿದದೋಷದಿಂದ, ವಿಮುಚ್ಯೇತ ಮುಕ್ತನಾಗುತ್ತಾನೆ, ಪ್ರಾಣಾಯಾಮಾನುಸಾರೇಣ–ಕುಂಭಕವನ್ನು ಅನುಸರಿಸುವದರಿಂದ, ಕೃತೆ–ಅಘಮರ್ಷಣಮಂತ್ರಗಳನ್ನು ಪಠಿಸಿದರೆ, ಶುದ್ಧಃ ಪರಿಶುದ್ಧನು, ಭವಿಷ್ಯತಿ–ಆಗುತ್ತಾನೆ, ಪ್ರಾಣಾಯಾಮ–ವಾಯುಧಾರಣೆಯಿಂದ, ವಿಹೀನಸ್ಯ–ರಹಿತನಾದವನಿಗೆ, ತಥಾ–ಹಾಗೆ, ಶುದ್ಧಿಃ–ಪರಿಶುದ್ಧತೆಯು, ನೇಷ್ಯತೆ–ಆಗುವದಿಲ್ಲ॥ ॥೨೫॥

ದಶಪ್ರಣವ–ಹತ್ತುಪ್ರಣವಗಳಿಂದ, ಸಂಯುಕ್ತೈಃ–ಕೂಡಿರುವ, ಚತುಶ್ಚತೈಃ–ನಾಲ್ಕುನೂರಾದ ಪ್ರಾಣಾಯಾಮೈಃ–ಪ್ರಾಣಾಯಾಮಗಳಿಂದ, ಬ್ರಹ್ಮಹತ್ಯಾಪಿ–ಬ್ರಾಹ್ಮಣನನ್ನು ಕೊಂದದ್ದರಿಂದ ವುಂಟಾದ ಪಾಪವು, ಮುಚ್ಯೇತ–ಬಿಡುಗಡೆಯಾದೀತು, ಅನ್ಯಪಾತಕೈಃ–ಇತರ ಪಾತಕಗಳಿಂದ, ಕಿಂಪುನಃ-ಹೇಳತಕ್ಕದ್ದೇನಿರುತ್ತೆ, ಅಂದರೆ ಇತರ ಪಾ

ಹ್ಯೇತಕಿಂಪ್ರಸಕ್ತಸ್ಯಪಾತಕಸ್ಯ ॥೨೬॥ ಏಕಭುಕ್ತೇನನಕ್ತೇ
ನತಥೈವಾಯಾಚಿತೇನಚ। ಉಪವಾಸೇನಸಹಿತಃನಿಯಮಶ್ಶು
ದ್ಧಿಸಾಧಕಃ ॥೨೭॥ ಬ್ರಹ್ಮಚರ್ಯಂದಯಾಕ್ಷಾಂತಿರ್ದಾನಂಸ
ತ್ಯಮಕಲ್ಕತಾ । ಅಹಿಂಸಾಸ್ತೇಯಮಾಧುರ್ಯೇಧರ್ಮಾಶ್ಚೈ
ವಾನ್ಸಮಾಚರೇತ್ ॥ ೨೮ ॥ ಸ್ನಾನಮೌನೋಪವಾಸೇಜ್ಯಾ
ಸ್ವಾಧ್ಯಾಯೋಪಸ್ಥನಿಗ್ರಹಃ । ನಿಯಮಾಗುರುಶುಶ್ರೂಷಾ
ಶೌಚಾಕ್ರೋಧಾಪ್ರಮಾದತಾಃ ॥೨೯॥ ಪಾಪಾಪನೋದ

ಪಗಳು ಹೋಗಲು ಸಂದೇಹವಿಲ್ಲವು ॥ ॥೨೬॥

ಏಕಭುಕ್ತೇನ-ಒಂದು ವೇಳೆಯೇ ಭೋಜನ ಮಾಡುವದ್ದರಿಂದ, ನಕ್ತೇನ-ಸಾಯಂಕಾಲವಾದಬಳಿಕ ಭೋಜನವನ್ನು ಮಾಡುವದ್ದರಿಂದ, ತಥೈವ-ಹಾಗೆಯೇ, ಅಯಾಚಿತೇನಚ-ಯಾಚಿಸದೇ ಅಕಸ್ಮಾತ್ ಲಭ್ಯವಾದದ್ದನ್ನು ಆಹಾರವನ್ನು ಮಾಡುವದ್ದರಿಂದಲೂ,ಉಪವಾಸೇನ-ನಿರಶನದಿಂದ,ಸಹಿತಃ-ಕೂಡಿದ, ನಿಯಮಃ-ವ್ರತವು,ಶುದ್ಧಿ-ಪರಿಶುದ್ಧತೆಯನ್ನು ಪಡೆಯಲು, ಸಾಧಕಃ-ಸಹಾಯಕರವಾಗಿರುವದು ॥ ॥೨೭॥

ಬ್ರಹ್ಮಚರ್ಯಂ-ಸ್ರಕ್ಚಂದನವನಿತಾದಿ ಭೋಗಗಳಿಲ್ಲದೇ ಇರೋಣವು, ದಯಾ-ಭೂತಗಳಮೇಲೆ ಕೃಪೆಯು, ದಾನಂ-ಕೊಡೋಣವು, ಸತ್ಯಂ-ಯಥಾರ್ಥವು, ಅಕಲ್ಕತಾ-ಪಾಪಕೆಲಸಗಳನ್ನು ಮಾಡದೇ ಇರುವಿಕೆಯು,ಅಹಿಂಸಾ-ಕೊಲೆಯನ್ನು ಮಾಡದೇ ಇರುವಿಕೆಯು,ಅಸ್ತೇಯಮಾಧುರ್ಯೇ-ಕದಿಯದೇ ಇರುವಿಕೆ,ಇಂಪಾಗಿ ಮಾತನಾಡುವಿಕೆ,ಧರ್ಮಾಃ-ಧರ್ಮವು, ಇವಾನ್-ಇವುಗಳನ್ನು, ಸಮಾಚರೇತ್-ನಡಿಸಬೇಕು ॥ ॥೨೮॥

ಸ್ನಾನ-ಮೀಯುವದು ಮೌನ-ಮಾತನಾಡದೇ ಇರೋಣವು, ಉಪವಾಸ-ನಿರಶನವ್ರತವು, ಇಜ್ಯಾ-ಯಜ್ಞವು, ಸ್ವಾಧ್ಯಾಯ-ವೇದವನ್ನು ಹೇಳುತ್ತಿರೋಣವು, ಉಪಸ್ಥನಿಗ್ರಹಃ-ಕಾಮವನ್ನು ನಿಗ್ರಹಿಸಿರುವಿಕೆಯು, ಗುರುಶುಶ್ರೂಷಾ-ಗುರುಸೇವೆಯು, ಶೌಚಾಕ್ರೋಧಾಪ್ರಮಾದತಾಃ-ಪಾರಿಶುದ್ಧ್ಯಕ್ರೋಧಾಪ್ರಮಾದಗಳು, ನಿಯಮಾಃ-ನಿಯಮಗಳಾಗಿರುವವು ॥ ॥೨೯॥

ಪಾಪ-ಪಾತಕಗಳ, ಅಪನೋದನಾರ್ಥಂತು-ಹೋಗಲಾಡಿಸುವದ

ನಾರ್ಥಂತು ಗಾಯತ್ರೀಂ ಸರ್ವದಾ ಜಪೇತ್ । ನಗಾಯ
ತ್ರ್ಯಾಃಪರೋಮಂತ್ರಃಸರ್ವ ಪಾಪಾಪನೋದಕಃ ॥೩೦॥ಗಾ
ಯಂತಂತ್ರಾಯತೆಯಸ್ಮಾದ್ಗಾಯತ್ರೀತೇನವೈಸ್ಮೃತಾ॥
ಬ್ರಹ್ಮತೇಜೋವೃದ್ಧಿರೂಪಾಬ್ರಹ್ಮತೇಜೋವಿವರ್ಧಿನೀ ॥೩೧॥
ಸರ್ವಂಗುರುಮುಖಾತ್ಜ್ಞಾತ್ವಾಕರ್ತವ್ಯಂಬ್ರಾಹ್ಮಣೇನ
ತು । ಇತರೈಃಬ್ರಾಹ್ಮಣಾತ್ಸಮ್ಯಕ್-ಕರಣೀಯಃಸುಸಿ
ದ್ಧಿದಃ॥೩೨॥ ಅಜ್ಞಾನಾದಭಿಮಾನಾದ್ವಾಬ್ರಾಹ್ಮ್ಯಂಕರ್ಮ

ಕ್ಯೋಸ್ಕರವಾಗಿ, ಸರ್ವದಾ-ಯಾವಾಗಲೂ, ಗಾಯತ್ರೀಂ-ವೇದಮಾತೆಯನ್ನು,ಜಪೇತ್-ಪಠಿಸಬೇಕು,ಗಾಯತ್ರ್ಯಾಃ-ವೇದಮಾತೆಗಿಂತ,ಪರಃ-ಉತ್ತಮವಾದ,ಸರ್ವ-ಸಕಲವಾದ,ಪಾಪ-ಪಾತಕವನ್ನು,ಅಪನೋದಕಃ-ಹೋಗಮಾಡುವದಾದ,ಮಂತ್ರಃ-ಮಂತ್ರವು,ನ-ಇಲ್ಲವು॥ ॥೩೦॥

ಗಾಯಂತಂ-ತನ್ನನ್ನು ಸ್ಮರಿಸುವವನನ್ನು, ಅಥವಾ ಜಪಿಸುತ್ತಿರುವವನನ್ನು, ಯಸ್ಮಾತ್-ಯಾವ ಕಾರಣದಿಂದ, ತ್ರಾಯತೆ-ಕಾಪಾಡುತ್ತದೆಯೋ, ತೇನ-ಆ ಕಾರಣದಿಂದ, ಗಾಯತ್ರೀ-ಗಾಯತ್ರೀಯೆಂಬದಾಗಿ, ಸ್ಮೃತಾ-ಹೇಳಲ್ಪಡುತ್ತಾಳೆ, ಬ್ರಹ್ಮತೇಜೋವೃದ್ಧಿರೂಪಾ-ಬ್ರಾಹ್ಮಣತೇಜೋಭಿವೃದ್ಧಿಯ ರೂಪವಾಗುಳ್ಳವಳಾಗಿಯೂ, ಬ್ರಹ್ಮತೇಜೋವಿವರ್ಧಿನಿ-ಬ್ರಾಹ್ಮಣರಿಗೆ ಜಪದಿಂದ ಕಾಂತಿಯನ್ನು ಹೆಚ್ಚುಮಾಡುವಳಾಗಿಯೂ, (ಇರುವಳು) ॥ ॥೩೧॥

ಸರ್ವಂ-ಸಮಸ್ತವನ್ನು, ಗುರುಮುಖಾತ್-ಆಚಾರ್ಯನ ಮೂಲಕದಿಂದ, ಜ್ಞಾತ್ವಾ-ತಿಳಿದು, ಬ್ರಾಹ್ಮಣೇನ-ಬ್ರಾಹ್ಮಣನಿಂದ, ಕರ್ತವ್ಯಂ-ಮಾಡತಕ್ಕದ್ದು, ಇತರೈಃ-ಕ್ಷತ್ರಿಯ, ವೈಶ್ಯ, ಶೂದ್ರರಿಂದ, ಸಮ್ಯಕ್--ಚನ್ನಾಗಿ, ಬ್ರಾಹ್ಮಣಾತ್-ಬ್ರಾಹ್ಮಣನ ದೆಸೆಯಿಂದ, ಕರಣೀಯಃ--ಮಾಡಿಸಲ್ಪಡತಕ್ಕದ್ದು, ಸಿದ್ಧಿದಃ-ಕಾರ್ಯಸಿದ್ಧಿಕರವಾಗುವದು ॥ ॥೩೨॥

(ಯಃ-ಯಾವ ಶೂದ್ರನು,) ಅಜ್ಞಾನಾತ್-ತಿಳಿಯದೇ ಇರುವದ್ದರಿಂದಲೂ, ಅಭಿಮಾನಾದ್ವಾ-ಗರ್ವದಿಂದಲೂ, ಬ್ರಾಹ್ಮ್ಯಂಕರ್ಮ-ಬ್ರಾಹ್ಮಣರು ಮಾಡುವ ವೇದೋಕ್ತಕರ್ಮವನ್ನು, ಸಮಾಚರೇದ್ಯದಿ-ನಡಿಸು

ನಸಮಾಚರೇತ್ । ಸಶೂದ್ರೋವ್ಯಾಧಿಭಿರ್ಯುಕ್ತೋಽಂತೇ-
ನರಕಂವ್ರಜೇತ್ ॥೩೩॥ ದರಿದ್ರಸ್ತುತಪಃಕುರ್ಯಾತ್ ಧನವಾ-
ದಾನಮಾಚರೇತ್ । ಅಧಿಕಾರೀಪ್ರಪನ್ನಸ್ತು ಉಭಯಂಸಮ್ಯ-
ಗಾಚರೇತ್ ॥೩೪॥ ಬ್ರಾಹ್ಮಣಸ್ತಪಸಾಸರ್ವಂಪ್ರಾಪ್ನೋ-
ತಿಫಲಮುತ್ತಮಂ । ಶೂದ್ರೋಬ್ರಾಹ್ಮಣಭಕ್ತ್ಯಾಚಸೇವ-
ಯಾತತ್ಸಮಶ್ನುತೇ ॥೩೫॥ ಸ್ವೀಯೇಕರ್ಮಣಿಸಂಸಕ್ತಃಸಂಸಿ-
ದ್ಧಿಂಪರಮಾಂವ್ರಜೇತ್ । ತಸ್ಮಾತ್ಸ್ವಕರ್ಮನಿರತಃಮನು-

ತ್ತಾ ಬಂದವನಾದರೆ, ಸಶೂದ್ರಃ-ಆ ಶೂದ್ರನು, ವ್ಯಾಧಿಭಿಃ-ಬೇನೆಗಳಿಂದ, ಯುಕ್ತಃ-ಕೂಡಿದವನಾಗುವನು, ಅಂತೇ-ದೇಹಾವಸಾನದಲ್ಲಿ, ನರಕಂ-ನಿರಯವನ್ನು, ವ್ರಜೇತ್-ಹೊಂದುವನು ॥ ॥೩೩॥

ದರಿದ್ರಃ-ಬಡವನು, ತಪಃ-ತಪಸ್ಸನ್ನು, ಕುರ್ಯಾತ್-ಮಾಡಬೇಕು, ಧನವಾನ್-ಹಣವುಳ್ಳವನು, ದಾನಂ-ದಾನವನ್ನು, ಆಚರೇತ್-ಮಾಡಬೇಕು, ಅಧಿಕಾರೀ-ಕೊಡುವದಕ್ಕೂ, ತಪಸ್ಸನ್ನು ಮಾಡುವದಕ್ಕೂ ಅರ್ಹನಾದ, ಪ್ರಪನ್ನಸ್ತು-ಭಕ್ತನಾದರೇನೋ, ಸಮ್ಯಕ್-ಚನ್ನಾಗಿ, ಉಭಯಂ-ದಾನತಪಸ್ಸುಗಳನ್ನು, ಆಚರೇತ್-ನಡಿಸಬೇಕು ॥ ॥೩೪॥

ಬ್ರಾಹ್ಮಣಃ-ಬ್ರಾಹ್ಮಣನು, ತಪಸಾ-ತಪಸ್ಸಿನಿಂದ,ಉತ್ತಮಂ-ಶ್ರೇಷ್ಠವಾದ,ಸರ್ವಂ-ಸಮಸ್ತವಾದ, ಫಲಂ-ಯಾವ ಪ್ರಯೋಜನವನ್ನು,ಪ್ರಾಪ್ನೋತಿ-ಪಡೆಯುತ್ತಾನೆಯೋ, ಶೂದ್ರಃ-ಒಕ್ಕಲಿಗನು, ಬ್ರಾಹ್ಮಣಭಕ್ತ್ಯಾ-ಬ್ರಾಹ್ಮಣರಮೇಲೆ ವಿಶ್ವಾಸದಿಂದ, ಸೇವಯಾ-ಬ್ರಾಹ್ಮಣರ ಸೇವಕಾವೃತ್ತಿಯಿಂದ, ತತ್-ಆ ಫಲವನ್ನು,ಸಮಶ್ನುತೇ-ಹೊಂದುತ್ತಾನೆ ॥ ॥೩೫॥

ಸ್ವೀಯೇ-ತನ್ನ ವರ್ಣಾಶ್ರಮೋಚಿತವಾದ, ಕರ್ಮಣಿ-ಕೃತ್ಯದಲ್ಲಿ, ಸಂಸಕ್ತಃ-ನಿರತನಾದವನು,ಪರಮಾಂ-ಉತ್ತಮವಾದ, ಸಂಸಿದ್ಧಿಂ-ಕರ್ಮಾನುಗುಣವಾದ ಫಲಸಿದ್ಧಿಯನ್ನು, ವ್ರಜೇತ್-ಪಡೆವನು, ತಸ್ಮಾತ್-ಆದ್ದರಿಂದ, ಸ್ವಕರ್ಮ-ತನ್ನ ವರ್ಣೋಚಿತಕರ್ಮದಲ್ಲಿ, ನಿರತಃ-ಆಸಕ್ತನಾದ, ಮಾನುಜಃ-ಮನುಷ್ಯನು, ಸುಗತಿಂ-ಸದ್ಗತಿಯನ್ನು, ಪ್ರಜೇತ್-ಪಡೆಯುತ್ತಾನೆ. ॥ತಾ॥ ತನ್ನ ಜಾತಿಗೆ ಯುಕ್ತವಾದ ಕರ್ಮವನ್ನು ಮಾಡಿಕೊಂಡಿರುವ ಮನುಷ್ಯನು ಉತ್ತಮವಾದ ಫಲಸಿದ್ಧಿಯ

ಜೋಸುಗತಿಂವ್ರಜೇತ್॥೨೬॥ಇಂದ್ರತ್ವಂಚಾಪಿವಿಷ್ಣುತ್ವಂರು
ದ್ರತ್ವಂಕರ್ಮಣಾಲಭೇತ್। ತಸ್ಮಾತ್ಸತ್ಕರ್ಮಕುರ್ವೀತಅನ್ಯಥಾ
ದುರ್ಗತಿಂವ್ರಜೇತ್॥೨೭॥ ಪುಣ್ಯೇನಪುಣ್ಯಲೋಕಂಚಪಾಪೇನ
ನರಕಂವ್ರಜೇತ್।ಪುರುಷೋಭೂಮಿಮಾಪ್ನೋತಿತಾಭ್ಯಾಂವಿ
ಶ್ರೇಣಕರ್ಮಣಾ ॥ ೨೮ ॥ ಕರ್ಮಭೂಮಿರಿಯಂಪ್ರೋಕ್ತಾಪುಣ್ಯ

ನ್ನು, ಸದ್ಗತಿಯನ್ನು ಪಡೆಯುವನು ॥ ॥೨೬॥

ಕರ್ಮಣಾ–ಪುಣ್ಯಕರ್ಮದಿಂದ, ಇಂದ್ರತ್ವಂ–ಇಂದ್ರಪದವಿಯನ್ನಾಗಲಿ, ವಿಷ್ಣುತ್ವಂ–ವಿಷ್ಣುಪದವಿಯನ್ನಾಗಲಿ, ರುದ್ರತ್ವಂ–ರುದ್ರಪದವಿಯನ್ನಾಗಲಿ, ಲಭೇತ್–ಪಡೆಯುತ್ತಾನೆ, ತಸ್ಮಾತ್–ಆದ್ದರಿಂದ, ಸತ್ಕರ್ಮ–ಒಳ್ಳೇ ಕೆಲಸವನ್ನು, ಕುರ್ವೀತ–ಮಾಡಬೇಕು, ಅನ್ಯಥಾ–ಹಾಗೆ, ಇಲ್ಲದೇ ಹೋದರೆ, ದುರ್ಗತಿಂ–ಕೆಟ್ಟ ಗತಿಯನ್ನು, ವ್ರಜೇತ್–ಪಡದಾನು, ತಾ॥ ಸತ್ಕರ್ಮದಿಂದ, ಇಂದ್ರಾದಿ ದೇವತಾಪದವಿಯನ್ನಾಗಲಿ, ಅಥವಾ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಾದಿ ಮುಕ್ತಿಯನ್ನಾಗಲಿ, ಆಯಾಯ ಕರ್ಮಾನುಗುಣವಾಗಿ ಪಡೆಯುತ್ತಾನೆ, ಆದ್ದರಿಂದ ಸುಕರ್ಮವನ್ನು ಮಾಡಬೇಕು, ಹಾಗೆ ಮಾಡದೇ ಹೋದರೆ ನರಕಗತಿಯುಂಟಾಗುವದು ॥ ॥೨೭॥

ಪುಣ್ಯೇನ–ಪುಣ್ಯಕರ್ಮದಿಂದ, ಪುಣ್ಯಲೋಕಂ–ಇಂದ್ರಾದಿ ಲೋಕವನ್ನು, ಪಾಪೇನ–ಪಾತಕದಿಂದ, ನರಕಂ–ನರಕಗತಿಯನ್ನು, ವ್ರಜೇತ್–ಹೊಂದುವನು, ತಾಭ್ಯಾಂ–ಪುಣ್ಯಪಾಪಗಳಿಂದ, ಮಿಶ್ರೇಣ–ಕೂಡಿದ, ಕರ್ಮಣಾ–ಕೆಲಸದಿಂದ, ಪುರುಷಃ–ಮನುಷ್ಯನು, ಭೂಮಿಂ–ಭೂಲೋಕವನ್ನು, ಆಪ್ನೋತಿ–ಹೊಂದುತ್ತಾನೆ. ॥ತಾ॥ ಪುಣ್ಯವನ್ನು ಮಾಡಿದವನು, ಸ್ವರ್ಗಾದಿಲೋಕವನ್ನು ಪಡೆಯುತ್ತಾನೆ. ಪಾಪವನ್ನು ಮಾಡಿದವನು ನರಕಗಳನ್ನು ಪಡೆಯುವನು. ಪುಣ್ಯಪಾಪಗಳನ್ನು ಮಿಶ್ರವಾಗಿ ಮಾಡಿದವನು, ಭೂಲೋಕದಲ್ಲಿ ಜನಿಸುವನು ॥ ॥೨೮॥

ಪುಣ್ಯಪಾಪಫಲಪ್ರದಾ–ಪುಣ್ಯಪಾಪಗಳ ಫಲವನ್ನು ಕೊಡುವದಾದ, ಇಯಂ–ಈ, ಭೂಮಿಃ–ಭೂಲೋಕವು, ಪುಣ್ಯಭೂಮಿಃ–ಪುಣ್ಯವನ್ನು ಮಾಡಲು ಅರ್ಹವಾದ ಭೂಮಿಯೆಂಬದಾಗಿ, ಪ್ರೋಕ್ತಾ–ಹೇಳಲ್ಪಟ್ಟ

ಪಾಪಫಲಪ್ರದಾ। ದೇವಾಜನಿಮಪೇಕ್ಷಂತೇ ಭಾರತೇಪುಣ್ಯವಾಂ
ಛಯಾ ॥ ೩೯ ॥ ತಸ್ಮಾತ್ತ್ವಮಪಿ ತಪಸ್ಯಸ್ವ ವೇಂಕಟೇಪರ್ವತೋ
ತ್ತಮೇ । ಅಂತೇವೈಖಾನಸಮುನೇ ವೈಕುಂಠಂ ಸಮವಾ
ಪ್ಸ್ಯಸಿ ॥ ॥೪೦॥

ಇತಿ ಶ್ರೀ ಭವಿಷ್ಯೋತ್ತರಪುರಾಣೇ ವೇಂಕಟೇಶಮಾ
ಹಾತ್ಮ್ಯೇ ಉತ್ತರಭಾಗೇ ಪುಣ್ಯಕರ್ಮಣಾಪಾಪ
ನಾಶಕಥನಂನಾಮಅಷ್ಟಮೋಧ್ಯಾಯಃ॥

---

ತು, ದೇವಾಃ-ದೇವತೆಗಳು, ಭಾರತೇ-ಭರತಖಂಡಪ್ರದೇಶದಲ್ಲಿ, ಪುಣ್ಯ
ವಾಂಛಯಾ-ಪುಣ್ಯವನ್ನು ಸಂಪಾದಿಸಬೇಕೆಂಬ ಕೋರಿಕೆಯಿಂದ, ಜ
ನಿಂ-ಉತ್ಪತ್ತಿಯನ್ನು, ಅಪೇಕ್ಷಂತೇ-ಬಯಸುತ್ತಾರೆ. ॥ತಾ॥ ಪುಣ್ಯಸಂ
ಪಾದಕಭೂಮಿಯಾದ ಭರತಖಂಡದಲ್ಲಿ ದೇವತೆಗಳುಕೂಡ ಪುಣ್ಯಾಪೇಕ್ಷೆ
ಯಿಂದ ಹುಟ್ಟಬೇಕೆಂದು ಕೋರುತ್ತಿರುವರು ॥ ॥೩೯॥

ವೈಖಾನಸಮುನೇ-ವೈಖಾನಸರುಷಿಯೇ, ತಸ್ಮಾತ್-ಆದ್ದರಿಂದ, ತ್ವ
ಮಪಿ-ನೀನು, ಪರ್ವತೋತ್ತಮೇ-ಉತ್ತಮಾದ್ರಿಯಾದ, ವೇಂಕಟೇ-ವೇಂ
ಕಟಗಿರಿಯಲ್ಲಿ, ತಪಸ್ಯಸ್ವ-ತಪಸ್ಸನ್ನು ಮಾಡುವವನಾಗು, ಅಂತೇ-ದೇಹಾ
ವಸಾನದಲ್ಲಿ, ವೈಕುಂಠಂ-ವೈಕುಂಠಲೋಕವನ್ನು, ಸಮವಾಪ್ಸ್ಯಸಿ-ಹ
ಡೆಯುತ್ತೀ. ॥ತಾ॥ ವೈಖಾನಸಮುನಿಯೇ ಆದ್ದರಿಂದ, ನೀನು ವೆಂಕ
ಟಾಚಲಬೆಟ್ಟದಲ್ಲಿ ತಪಸ್ಸನ್ನು ಮಾಡು, ದೇಹಾವಸಾನದಲ್ಲಿ ವೈಕುಂಠ
ವನ್ನು ಹೊಂದುತ್ತೀ ॥ ॥೪೦॥

ಇಂತು ಭವಿಷ್ಯೋತ್ತರಪುರಾಣದೊಳು ವೆಂಕಟೇಶ
ಮಹಾತ್ಮ್ಯೆಯ ವುತ್ತರಭಾಗದಲ್ಲಿ ಪುಣ್ಯಕರ್ಮ
ದಿಂದ ಪಾಪನಾಶ ಕಥನವೆಂಬ ಎಂಟನೇ
ಅಧ್ಯಾಯವು.

---

ವೈಖಾನಸಃ॥ದಾನಾನಾಂಲಕ್ಷಣಂಸಮ್ಯಗ್ವಿಸ್ತರಾದ್ಬ್ರೂಹಿ
ಮಾಧವ। ಯಥಾನರಸ್ಯದಾನೇನಪಾಪರಾಶಿರ್ವಿನಶ್ಯತಿ ॥೧।
ಶ್ರೀನಿವಾಸಃ ॥ ದಾನಾನಾಂಲಕ್ಷಣಂವಕ್ಷ್ಯೇವೈಖಾನಸಮುನೇ
ಶೃಣು ॥ ತುಲಾಪುರುಷದಾನಂ ಚಸ್ವರ್ಣಗರ್ಭಾಭಿಧಂತ
ಥಾ ॥ ೨ ॥ ತಿಲಪರ್ವತದಾನಂಚಸ್ವರ್ಣಮೇದಿನಿಸಂಜ್ಞಿಕಂ

ವೈಖಾನಸಃ-ವೈಖಾನಸಮುನಿಯು ಕೇಳುತ್ತಲಿದ್ದಾನೆ ॥ ಮಾಧವ-ಲಕ್ಷ್ಮೀಪತಿಯಾದ ಶ್ರೀನಿವಾಸನೇ, ದಾನಾನಾಂ-ದಾನಗಳ, ಲಕ್ಷಣಂ-ಸ್ವರೂಪವನ್ನು, ಸಮ್ಯಕ್-ಚನ್ನಾಗಿ, ವಿಸ್ತರಾತ್-ವಿವರವಾಗಿ, ಬ್ರೂಹಿ-ಹೇಳು, ನರಸ್ಯ-ಮನುಷ್ಯನಿಗೆ ದಾನೇನ-ದಾನದಿಂಡ, ಪಾಪರಾಶಿಃ-ಪಾತಕ ಸಮುದಾಯವು, ಯಥಾ-ಹೇಗೆ,ವಿನಶ್ಯತಿ-ಹೋಗುತ್ತೆ ॥ತಾ॥ ಯಾವದಾನಗಳನ್ನು ಮಾಡಿದರೆ ಪಾಪಗಳು ಹೋಗುವವೂ ಅಂಥಾ ದಾನಗಳನ್ನು ವಿವರವಾಗಿ ಹೇಳುವವನಾಗು ॥ ॥೧॥

ಶ್ರೀನಿವಾಸಃ-ಶ್ರೀನಿವಾಸ ಮೂರ್ತಿಯುಹೇಳುತ್ತಲಿದ್ದಾನೆ ॥ ವೈಖಾನಸಮುನೇ-ವೈಖಾನಋಷಿಯೇ, ದಾನಾನಾಂ-ದಾನಗಳ, ಲಕ್ಷಣಂ-ಸ್ವರೂಪವನ್ನು, ವಕ್ಷ್ಯೇ-ಹೇಳುತ್ತೇನೆ, ಶೃಣು-ಕೇಳು, ತುಲಾಪುರುಷದಾನಂಚ-ತಕ್ಕಡಿಯಲ್ಲಿ ತಾನು ಕೂತು-ಮತ್ತೊಂದು ಕಡೆಯಲ್ಲಿ ತೂಕಕ್ಕೆಸರಿಯಾಗಿ ಬೆಳ್ಳಿಭಂಗಾರ ರತ್ನಗಳನ್ನು ಇರಿಸಿತೂಗಿದಾನಮಾಡುವದೇ-ತುಲಾ ಪುರುಷದಾನವು, ತಥಾ-ಹಾಗೆ, ಸ್ವರ್ಣಗರ್ಭಾಭಿದಂ-ಸಾವಿರ ವರಹಗಳತೂಕದಭಂಗಾರದಿಂದ,ವಂದುಪಾತ್ರೆಯನ್ನು ಮಾಡಿಸಿ ಅದಕ್ಕೆ ಮೇಲ್ಭಾಗದಮುಚ್ಚಳವನ್ನು ಅದೇತೂಕವುಳ್ಳ ಭಂಗಾರದಿಂದಮಾಡಿಸಿ, ಶಾಸ್ತ್ರವಿಧಿಯಿಂದ ಅವಾಹನಾದಿ ಪೂಜೆಗಳನ್ನು ಮಾಡಿ ಅದನ್ನು ದಾನಮಾಡುವ ಹಿರಣ್ಯಗರ್ಭದಾನವು, ಪಾಪಹರವು ॥ ॥೨॥

ತಿಲಪರ್ವತದಾನಂಚ-ಹತ್ತುತಾಳೇಮರಗಳ ಉದ್ದವಾಗಿ ಕಟ್ಟಿಗೆಯನ್ನು, ನೆಟ್ಟು, ಅದಕ್ಕೆ ಸರಿಯಾಗಿ, ಎಳ್ಳನ್ನು ರಾಶಿಯಾಗಿ ಮಾಡಿ ಅದರಲ್ಲಿ ಭಂಗಾರರತ್ನಗಳನ್ನು, ಗರ್ಭೀಕರಿಸಿ, ಯೋಗ್ಯವಾದ ದಕ್ಷಿಣೆಯನ್ನು ಕೊಡುವ ತಿಲಪರ್ವತದಾನವು,ಸ್ವರ್ಣ-ಮೇದಿನಿಸಂಜ್ಞಿಕಂ-ಭಂಗಾರದಿಂದ ಭೂಮಿಯ ಗೋಳವನ್ನುಮಾಡಿ ಅದರಲ್ಲಿ ಧನವನ್ನು ತುಂಬಿ

ಕಂ ಕಲ್ಪಪಾದಪದಾನಂಚ ದಾನಂ ಗಣಪತೇಸ್ತಥಾ ॥ ೩ ॥
ಹೇಮಧೇನುಪ್ರದಾನಂಚ ಗೋಸಹಸ್ರಪ್ರದಾನಕಂ । ಹಿರ
ಣ್ಯಾಶ್ವಪ್ರದಾನಂಚ ಕನ್ಯಾದಾನಂ ಯಶಸ್ಕರಂ ॥೪॥ ಸ್ವರ್ಣ
ವೃಷಭದಾನಂ ಚ ಗಜದಾನಂ ಮಹಾಫಲಂ । ಲೋಕಪಾಲಾ

ಕೊಡಬೇಕಾದ, ಸುವರ್ಣ-ಮೇದಿನೀದಾನವು, ಕಲ್ಪಪಾದಪದಾನಂಚ-ಕಲ್ಪ ವೃಕ್ಷದಂತೆ ಭಂಗಾರದಿಂದಲೂ ನವರತ್ನಗಳಿಂದಲೂ ಮರವನ್ನು ಮಾಡಿಸಿ, ಕೊಡಬೇಕಾದ ಕಲ್ಪವೃಕ್ಷದಾನವು, ಗಣಪತೇಃ-ಹತ್ತುಮೊಹರಿಗಳ ಭಂಗಾರದಿಂದ ದಿಕ್ಪಾಲಸಹಿತನಾದ ವಿಘ್ನೇಶ್ವರನನ್ನು ಮಾಡಿಕೊಡುವದಾದ ಗಣಪತಿದಾನವು, ಪಾಪನಾಶಕವಾಗಿರುವದು ॥ ॥೩॥

ಹೇಮಧೇನುಪ್ರದಾನಂಚ-ಸಾವಿರವರಹಗಳಿಂದಲಾಗಲಿ, ಅದರಲ್ಲಿ ಅರ್ಧ-ದಿಂದಲಾಗಲಿ, ಭಂಗಾರದಿಂದ ಆಕಳನ್ನು ಮಾಡಿಸಿಕೊಡುವದಾದ ಸ್ವರ್ಣಧೇನುದಾನವು, ಗೋಸಹಸ್ರಪ್ರದಾನಕಂ-ಕರುವುಗಳಿಂದ ಕೂಡಿರುವ ಸಾವಿರಹಸುಗಳನ್ನು ಯಥೋಕ್ತ ದಕ್ಷಿಣಾಸಹಿತವಾಗಿ ಕೊಡಬೇಕಾದಗೋಸಹಸ್ರದಾನವು, ಹಿರಣ್ಯಾಶ್ವ ಪ್ರದಾನಂಚ-ನೂರ ಎಂಟು ವರಹಗಳಿಂದ, ಅಥವಾ ಸಾವಿರದ ಇಪ್ಪತ್ತುನಾಲ್ಕು ವರಹಗಳಿಂದಲಾಗಲಿ, ಲಕ್ಷಣವಾದ ಕುದುರೆಯನ್ನು ಮಾಡಿಸಿ ಸದಕ್ಷಿಣವಾಗಿ ಕೊಡಬೇಕಾದ ಅಶ್ವಮೇಧಯಾಗಕ್ಕಿಂತ ಶ್ರೇಷ್ಠವಾದ ಹಿರಣ್ಯಾಶ್ವದಾನವು ಯಶಸ್ಕರಂ-ಕೀರ್ತಿಕರವಾದ, ಕನ್ಯಾದಾನಂ-ಸರ್ವಲಕ್ಷಣಯುಕ್ತಳಾದ ಕನ್ಯೆಯನ್ನು-ಆಕೆಯತಂದೆ ತಾಯಿಗಳಿಗೆ ಧನವನ್ನು ಕೊಟ್ಟು ಪಡೆದು ಮಗಳನ್ನಾಗಿ ಮಾಡಿಕೊಂಡು, ವೇದಜ್ಞನಾಗಿಯೂ ತಪಸ್ವಿಯಾಗಿಯೂ ಇರುವ ಬ್ರಾಹ್ಮನಿಗೆ ದಾಸೀದಾಸ ವಸ್ತ್ರಾಭರಣ ಕ್ಷೇತ್ರಗೃಹಾರಾಮ ವಸ್ತ್ರಾದಿಗಳ ಸಹಿತವಾಗಿ ದಾನಮಾಡಬೇಕಾದ ಕನ್ಯಾದಾನವು, ಪಾಪನಾಶಕವಾಗಿರುವದು ॥ ॥೪॥

ಸ್ವರ್ಣವೃಷಭದಾನಂಚ-ಸಾವಿರವರಹಗಳಿಂದ ಅಥವಾ ನೂರುವರಹಗಳಿಂದಲಾಗಲಿ ಇನ್ನೂರೈವತ್ತು ವರಹಗಳಿಂದಲಾಗಲಿ ಭಂಗಾರದ ಹೋರಿಯನ್ನು ಮಾಡಿಸಿ, ಯಥೋಕ್ತ ದಕ್ಷಿಣಾಸಹಿತವಾಗಿ ಕೊಡಬೇಕಾದ, ಸ್ವರ್ಣವೃಷಭದಾನವು, ಮಹಾಫಲಂ-ಅತಿಪುಣ್ಯಫಲಪ್ರದವಾದ, ಗಜ

ಭಿಧಂದಾನಂ ಪಾಸಂಭಾಗಾದಿಪ್ರಾಣಿನಾಂ ॥ ೫ ॥ ಅನ್ನ
ದಾನಂಚಭೂದಾನಂವಸ್ತ್ರದಾನಂತಿಲಾಭಿಧಂ ॥ ಗೋದಾ
ನಂಸ್ವರ್ಣದಾನಂಚ ಆಜ್ಯದಾನಂಗುಡಾಭಿಧಂ ॥ ೬ ॥ ರೌ
ಪ್ಯಂಚಲವಣಂ-ಪುಷ್ಪಫಲದಾನಂಚಧಾನ್ಯಕಂ।ಸ್ಸೃಷ್ಟಾನಿ

ಪಾನಂ-ಸಾವಿರವರಹಗಳಿಂದಲಾಗಲಿ ಅಯಿದು ನೂರುವರಹಗಳಿಂದಲಾಗಲಿ, ಭಂಗಾರದ ಗಜವನ್ನು ಮಾಡಿಸಿ, ಅಥವಾ ಬೆಳ್ಳಿಯಿಂದಲಾಗಲಿ ಗಜವನ್ನು ಮಾಡಿಸಿ ಯಥೋಕ್ತದಕ್ಷಿಣೆಯಿಂದಕೊಡಬೇಕಾದಗಜದಾನವು, ಲೋಕಪಾಲಾಭಿಧಂದಾನಂ-ಹತ್ತುವರಹಗಳಿಂದ ಸಾಂಬ ಮೂರ್ತಿಯನ್ನು ಮಾಡಿಸಿ, ಎಂಟು ದಿಕ್ಕುಗಳಲ್ಲಿಯೂ ಹತ್ತುವರಹಗಳಿಂದ ದಿಕ್ಪಾಲಕರನ್ನು ಮಾಡಿಸಿ ಕ್ರಮವಾಗಿ ಯಥೋಕ್ತ ದಕ್ಷಿಣೆಯಿಂದ ಪೂಜಿಸಿ ಕೊಡಬೇಕಾದ ಲೋಕಪಾಲಕರದಾನವು, ಭಾಗಾದಿ ಪ್ರಾಣಿನಾಂ-ಆದುಮುಂತಾದ ಜೀವಿಗಳ, ದಾನಂ-ಕೊಡುವಿಕೆಯು, ಪಾಪಹರವು ॥೫॥

ಅನ್ನದಾನಂ-ಹಸಿವಿಯುಳ್ಳವರಿಗೆ ಅನ್ನವನ್ನು ಕೊಡುವಿಕೆಯು, ಸಹಸ್ರಬ್ರಾಹ್ಮಣ-ಲಕ್ಷಬ್ರಾಹ್ಮಣ ಸಮಾರಾಧನರೂಪವಾದ ಅನ್ನದಾನವು, ಭೂದಾನಂ-ಮನೆ, ತೋಟ, ಗದ್ದೆ. ಹೊಲ, ಕೈತೋಟ ಮುಂತಾದ ಭೂಮಿಗಳನ್ನು ದಾನಮಾಡುವಿಕೆಯು, ಗ್ರಾಮ-ಪುರ, ಪಟ್ಟಣ, ದೇಶ, ದ್ವೀಪ ಮುಂತಾದವುಗಳನ್ನು ಕೊಡುವದಾದ ಭೂದಾನವು, ವಸ್ತ್ರದಾನಂ-ಶಾಲು, ಸಕಲಾತಿ, ಪಟ್ಟೆಮಡಿಧೋತ್ರ, ಶೀರೆ, ಕುಪ್ಪಸ ಮುಂತಾದವುಗಳನ್ನು ಕೊಡುವ ರೂಪವಾದ ವಸ್ತ್ರದಾನವು, ತಿಲಾಬಿಧಂ-ಸ್ವಲ್ಪಸ್ವಲ್ಪವಾಗಿ ಕೊಡುವದಾದ ಎಳ್ಳಿನ ದಾನವು, ಗೋದಾನಂ-ಕರುವು ಸಹಿತವಾದ ಆಕಳನ್ನು ಸದಕ್ಷಿಣವಾಗಿ ಕೊಡಬೇಕಾದ, ಅಥವಾ ಕರುವನ್ನು ಹಾಕುತ್ತಿರುವಾಗ ಕೊಡಬೇಕಾದ ಉಭಯತೋಮುಖಿಗೋದಾನವು, ಸ್ವರ್ಣದಾನಂ-ಹಾಗನೀಸ ಮುಂತಾದ ತೂಕವುಳ್ಳ ಭಂಗಾರದ ದಾನವು, ಆಜ್ಯದಾನಂ-ತುಪ್ಪವನ್ನು ಕೊಡುವಿಕೆಯು, ಗುಡಾಭಿಧಂ-ಬೆಲ್ಲದ ದಾನವು, ಪಾಪನಾಶಕವು ॥ ॥೬॥

ರೌಪ್ಯಂ-ಬೆಳ್ಳಿಯ ದಾನವು, ಲವಣಂ-ಉಪ್ಪನ್ನು ಕೊಡುವಿಕೆಯು, ಪುಷ್ಪಫಲದಾನಂ-ಹುವ್ವು ಹಣ್ಣುಗಳನ್ನು ಕೊಡುವಿಕೆಯು

ಬ್ರಾಹ್ಮಣಾಸರ್ವವಸ್ತೂನಿಮನುಜಸ್ಯಚ । ಹಿತಕಾರೀಣಿ ಯುಕ್ತಾನಿದತ್ವಾಪುಣ್ಯಂಸಮಶ್ನುತೆ ॥ ಮಹಾದಾನೈಃಪಾಪನಾಶಃಪುಣ್ಯಲೋಕಗತಿಃಪರಾ ॥ ಭವಿಷ್ಯತಿನಸಂದೇಹಃತತ್ಫಲಂಚನಿಶಾಮಯ ॥೭॥ ಅನ್ನದಾನಂಯಃಕರೋತಿಕರ್ಮಭೂಮೌವಿಶೇಷತಃ । ಅನ್ನಪ್ರಮಾಣಪರ್ಯಂತಂ ಕೈಲಾಸೆವರ್ತತೆನರಃ ॥ ೮ ॥ ಅನ್ನದಾನಾತ್ಪರಂದಾನಂನಾಸ್ತಿಬ್ರಹ್ಮನ್ವಿಶೇಷತಃ । ಅನ್ನಸ್ಯಕ್ಷುಧಿತಂ ಪಾತ್ರಂವಿಚಾರೊ

ಧಾನ್ಯಕಂ-ಭತ್ತ ಮುಂತಾದ ನವಧಾನ್ಯಗಳ ದಾನವು, ಬ್ರಹ್ಮಣಾ-ಚತುರ್ಮುಖನಿಂದ, ಸೃಷ್ಟಾನಿ-ಸೃಜಿಸಲ್ಪಟ್ಟವುಗಳಾದ,ಸರ್ವ-ಸಮಸ್ತಗಳಾದ, ವಸ್ತೂನಿ-ಪದಾರ್ಥಗಳನ್ನು, ಮನುಜಸ್ಯ-ಮನುಷ್ಯನಿಗೆ ಹಿತಕಾರೀಣಿ--ಕ್ಷೇಮಕರಗಳಾದವುಗಳನ್ನು. ಯುಕ್ತಾನಿ-ಯೋಗ್ಯವಾದ ವಸ್ತುಗಳನ್ನು ದತ್ವಾ-ಕೊಟ್ಟರೆ, ಪುಣ್ಯಂ-ಸುಕೃತವನ್ನು, ಸಮಶ್ನುತೆ-ಪಡೆಯುತ್ತಾನೆ, ಅಂದರೆ ಪಾಪಪರಿಹಾರವಾಗುವುದು, ಮಹಾದಾನೈಃ-ದೊಡ್ಡದಾದ ತುಲಾಪುರುಷಾದಿ ದಾನಗಳಿಂದ, ಪಾಪನಾಶಃ-ಪಾಪಪರಿಹಾರವು, ಪರಾ-ಉತ್ತಮವಾದ, ಪುಣ್ಯಲೋಕಗತಿಃ-ಪುಣ್ಯಲೋಕಪ್ರಾಪ್ತಿಯು, ಭವಿಷ್ಯತಿ-ಆಗುತ್ತೆ, ತತ್ಫಲಂಚ-ಆ ದಾನದಿಂದುಂಟಾಗುವ ಪ್ರಯೋಜನವನ್ನು, ನಿಶಾಮಯ-ಕೇಳು ॥ ॥೭॥

ಯಃ-ಯಾವ ಮನುಷ್ಯನು, ಕರ್ಮಭೂಮೌ-ಭರತಖಂಡದಲ್ಲಿ, ವಿಶೇಷತಃ-ಅತಿಶಯವಾಗಿ, ಅನ್ನದಾನಂ-ಅನ್ನ ಪ್ರದಾನವನ್ನು, ಕರೋತಿ-ಮಾಡುತ್ತಾನೋ, ನರಃ-ಆ ಮನುಷ್ಯನು, ಅನ್ನಪ್ರಮಾಣಪರ್ಯಂತಂ-ಅಗುಳುಗಳ ಸಂಖ್ಯೆಯ ವರ್ಷಗಳವರಿಗೂ, ಕೈಲಾಸೆ-ಶಿವಲೋಕದಲ್ಲಿ, ವರ್ತತೆ-ಇರುತ್ತಾನೆ ॥ ॥೮॥

ಬ್ರಹ್ಮನ್-ವೈಖಾನಸಮುನಿಯೇ, ಅನ್ನದಾನಾತ್-ಅನ್ನದಾನಕ್ಕಿಂತ, ಪರಂ-ಉತ್ತಮವಾದ, ದಾನಂ-ದಾನವು, ವಿಶೇಷತಃ-ಅತಿಶಯವಾಗಿ, ನಾಸ್ತಿ--ಇಲ್ಲ, ಅನ್ನಸ್ಯ-ತಿನ್ನುವ ಆಹಾರಕ್ಕೆ, ಕ್ಷುಧಿತಂ-ಹಸಿವಿಯುಂಟಾಗಿರುವ ಪ್ರಾಣಿಯೇ, ಪಾತ್ರಂ-ಅರ್ಹವಾದದ್ದು, ಅತ್ರ-ಶಾಸ್ತ್ರವನ್ನು ವಿನಾಯಿಸಿ ಅನ್ನದಾನವಿಷಯದಲ್ಲಿ,ವಿಚಾರಃ-ವಿಮರ್ಶೆಯು,

ತ್ರನಯೊಜ್ಯತೆ ॥೯॥ ದೇವಾನಾಂ-ಬ್ರಾಹ್ಮಣಾನಾಂಚ ಆಸ
ನಂ ಪ್ರದದಾತಿಯಃ । ವರ್ಷಾಣಾ ಮಯುತಂಸೋಪಿವಿ
ಷ್ಣುಲೊಕೆಮಹೀಯ್ಯತೆ ॥೧೦॥ ಪಯಸ್ವಿನೀಂಬ್ರಾಹ್ಮಣಾ
ಯಧೇನುಂದದ್ಯಾತ್ಸದಕ್ಷಿಣಾಂ। ತಲ್ಲೊಮಮಾನವರ್ಷಾ
ಣಿವಿಷ್ಣು ಲೊಕಮವಾಪ್ನು ಯಾತ್ ॥ ೧೧ ॥ ಚತುರ್ಗು
ಣಂಪುಣ್ಯದಿನೆಶತಂಪುಣ್ಯತಿಥೌಫಲಂ ॥ ದಾನಂದಾಮೊದ
ರಕ್ಷೆತ್ರೆ ಫಲಂ ಕೊಟಿ ಗುಣಂ ಭವೆತ್ ॥೧೨॥ ದದಾತಿಯೊ

ಯೋಗ್ಯತಾ-ಯೋಗ್ಯತೆಯು, ನಯೊಜ್ಯತೆ-ಯುಕ್ತವಲ್ಲ ॥ ॥೯॥

ಯಃ-ಯಾವ ಮನುಷ್ಯನು, ದೇವಾನಾಂ-ದೇವತೆಗಳಿಗೆ ಬ್ರಾಹ್ಮಣಾನಾಂಚ-ಬ್ರಾಹ್ಮಣರಿಗೆ, ಆಸನಂ-ಪೀಠವನ್ನು, ಪ್ರದದಾತಿ-ಕೊಡುವನೋ, ಸೋಪಿ-ಅವನು, ವರ್ಷಾಣಾಂ-ಸಂವತ್ಸರಗಳ, ಅಯುತಂ-ಹತ್ತುಸಾವಿರ ಪರ್ಯಂತವೂ, ವಿಷ್ಣುಲೋಕೆ-ವೈಕುಂಠದಲ್ಲಿ, ಮಹೀಯ್ಯತೆ-ಪ್ರಕಾಶಿಸುತ್ತಿರುವನು ॥ ॥೧೦॥

ಬ್ರಾಹ್ಮಣಾಯ-ದ್ವಿಜನಿಗೆ, ಪಯಸ್ವಿನೀಂ-ಹಾಲನ್ನು ಕರೆಯುತ್ತಿರುವ, ಸದಕ್ಷಿಣಾಂ-ದಕ್ಷಿಣಾ ಸಹಿತವಾದ, ಧೇನುಂ-ಹಸುವನ್ನು, ದದ್ಯಾತ್-ಕೊಟ್ಟವನಾದರೆ, ತಲ್ಲೋಮಮಾನವರ್ಷಾಣಿ-ಹಸುವಿನ ದೇಹದಲ್ಲಿರುವ ಕೂದಲು ಸಂಖ್ಯೆಯ ಪ್ರಮಾಣವುಳ್ಳ ಸಂವತ್ಸರಗಳವರಿಗೂ, ವಿಷ್ಣುಲೋಕಂ-ವೈಕುಂಠವನ್ನು, ಅವಾಪ್ನುಯಾತ್-ಪಡೆಯುತ್ತಾನೆ॥೧೧॥

ಪುಣ್ಯದಿನೆ-ಅಷ್ಟಮಿ, ಚತುರ್ದಶಿ, ಏಕಾದಶಿ ಮುಂತಾದ ದಿನಗಳಲ್ಲಿ, ಚತುರ್ಗುಣಂಫಲಂ-ನಾಲ್ಕು ಪಾಲು ಅಧಿಕವಾದ ಪುಣ್ಯವು ಉಂಟಾಗುವದು, ಪುಣ್ಯತಿಥೌ-ಶ್ರೀರಾಮ ನವಮಿ, ಗೋಕುಲಾಷ್ಟಮಿ ಮುಂತಾದ ಪುಣ್ಯತಿಥಿಯಲ್ಲಿ, ಶತಂಫಲಂ-ನೂರುಪಾಲು ಹೆಚ್ಚಾದ ಫಲವು, ಭವೇತ್-ಆಗುವುದು, ದಾಮೋದರ-ವಿಷ್ಣುವಿನ, ಕ್ಷೇತ್ರೆ-ತಿರುಪತಿ, ಅಹೋಬಲ, ಕಾಶೀ ಮುಂತಾದ ಕ್ಷೇತ್ರಗಳಲ್ಲಿ, ದಾನಂ-ಕೊಡುವಿಕೆಯು, ಕೋಟಿಗುಣಂಫಲಂ-ಕೋಟಿ ಪಾಲು ಫಲವುಳ್ಳದ್ದು, ಭವೇತ್-ಆಗುವದು ॥ ॥೧೨॥

ಯಃ-ಯಾವ ಮನುಷ್ಯನು, ವಿಪ್ರಾಯ-ಬ್ರಾಹ್ಮಣನಿಗೆ, ಸದಕ್ಷಿ

ಗಾಂವಿಪ್ರಾಯ ಭಕ್ತಿಯುಕ್ತಃ ಸದಕ್ಷಿಣಾಂ । ತಲ್ಲೋಮ
ಮಾನವರ್ಷಾಣಿವೈಕುಂಠೆಸಮಹೀಯತೇ ‖೧೩‖ ಶೀತವಾ
ತೈಃಪೀಡಿತಾಯವಸ್ತ್ರಂ ವಿಪ್ರಾಯನೂತನಂ । ದದಾತಿ
ಯೋಭುವಿನರಃವಾಯುಲೋಕ ಮವಾಪ್ನುಯಾತ್ ‖ ೧೪ ‖
ಸಾಲಗ್ರಾಮಂ ಬ್ರಾಹ್ಮಣಾಯದತ್ವಾ ವೈಕುಂಠವಾಪ್ನು
ಯಾತ್ ।ತತ್ರೈವವರ್ತತೆಸೋಪಿಯಾವಚ್ಚಂದ್ರದಿವಾಕ
ರೌ ‖ ೧೫ ‖ ಮನೋಹರಾಂವರಾಂ ಶಯ್ಯಾಂದತ್ವಾವಿಪ್ರಾ

ಣಾಂ-ದಕ್ಷಿಣಾ ಸಹಿತವಾದ, ಗಾಂ-ಹಸುವನ್ನು, ಭಕ್ತಿಯುಕ್ತಸ್ಸ-ಭ
ಕ್ತಿಯುಳ್ಳವನಾಗಿ, ದದಾತಿ-ಕೊಡುತ್ತಾನೋ, ತಲ್ಲೋಮಮಾನವ
ರ್ಷಾಣಿ-ಹಸುವಿನ ರೋಮಗಳ ಸಂಖ್ಯೆಯ ಕಾಲದವರಿಗೂ, ವೈಕುಂ
ಠೆ-ವಿಷ್ಣುಲೋಕದಲ್ಲಿ, ಸಃ-ಅವನು, ಮಹೀಯತೆ-ಪ್ರಕಾಶಿಸುತ್ತಿರು
ವನು ‖ ‖೧೩‖

ಯಃ-ನರಃ-ಯಾವ ಮನುಷ್ಯನು, ಭುವಿ-ಭೂಮಿಯಲ್ಲಿ, ಶೀತವಾ
ತೈಃ-ಶೀತಳದಿಂದಲೂ, ವಾಯುವಿನಿಂದಲೂ, ಪೀಡಿತಾಯ-ಬಾಧೆಪ
ಡುತ್ತಿರುವವನಾದ, ವಿಪ್ರಾಯ-ಬ್ರಾಹ್ಮಣನಿಗೆ, ನೂತನಂ-ಹೊಸದಾ
ದ, ವಸ್ತ್ರಂ-ಬಟ್ಟೆಯನ್ನು, ದದಾತಿ-ಕೊಡುತ್ತಾನೋ, (ಅವನು,)
ವಾಯುಲೋಕಂ-ವಾಯುದೇವರ ಲೋಕವನ್ನು, ಅವಾಪ್ನುಯಾತ್-
ಪಡೆಯುವನು ‖ ‖೧೪‖

ಬ್ರಾಹ್ಮಣಾಯ-ದ್ವಿಜನಿಗೆ, ಸಾಲಗ್ರಾಮಂ-ಸಾಲಗ್ರಾಮಮೂರ್ತಿ
ಯನ್ನು, ದತ್ವಾ-ಕೊಟ್ಟು, ವೈಕುಂಠಂ-ವಿಷ್ಣುಲೋಕವನ್ನು, ಆ
ಪ್ನುಯಾತ್-ಹೊಂದುತ್ತಾನೆ, ಯಾವತ್-ಯದುವರಿಗೆ, ಚಂದ್ರದಿವಾಕ
ರೌ-ಸೂರ್ಯಚಂದ್ರರು ಇರುತ್ತಾರೋ, ತಾವತ್-ಅದುವರಿಗೆ, ತತ್ರೈ
ವ-ವೈಕುಂಠದಲ್ಲಿಯೇ, ವರ್ತತೆ-ಇರುತ್ತಾನೆ ‖ ‖೧೫‖

ಮನೋಹರಾಂ-ಮನಸ್ಸಿಗೆ ತೃಪ್ತಿಕರವಾದ, ವರಾಂ-ಶ್ರೇಷ್ಠವಾ
ದ, ಶಯ್ಯಾಂ-ಹಾಸಿಗೆಯನ್ನು, ನರಃ-ಮನುಷ್ಯನು, ವಿಪ್ರಾಯ-ಬ್ರಾ
ಹ್ಮಣನಿಗೆ, ದತ್ವಾ-ಕೊಟ್ಟು, ಯಾವತ್-ಯದುವರಿಗೆ, ಚಂದ್ರದಿವಾಕ
ರೌ-ಚಂದ್ರಸೂರ್ಯರು, (ಇರುವರೋ,) ತಾವತ್-ಅದುವರಿಗೆ, ಚಂದ್ರ

ಯುವೈನರಃ । ಮಹೀಯ್ಯತೆಇಂದ್ರಲೋಕೆಯಾವಚ್ಚಂದ್ರ
ದಿವಾಕರೌ ॥೧೬॥ ದೆವೆಭ್ಯೋಬ್ರಾಹ್ಮಣಸ್ಯಾಪಿದೀಪದಾ
ನಂದದಾತಿಯಃ । ಮನ್ವಂ ತರಂ-ಪಾವಕಸ್ಯಲೊಕೆವಸತಿ
ಭೂರಿಶಃ ॥೧೭॥ ಗಜಂದತ್ವಾಶಕ್ರಲೋಕೆತಸ್ಯಾರ್ಧಾಸ
ನಮಾಪ್ನುತ್ । ಅಶ್ವಂದತ್ವಾಬ್ರಾಹ್ಮಣಾಯವಾರುಣಂ
ಲೊಕಮಾಶ್ರಿತಃ । ನಿವಸೆತ್ಸುಖತಃಬ್ರಹ್ಮನ್ಯಾವದಿಂ
ದ್ರಾಶ್ಚತುರ್ದಶ ॥೧೮॥ ವಿಪ್ರಾಯಶಿಬಿಕಾಂದತ್ವಾಯಾವ
ದಿಂದ್ರಾಶ್ಚತುರ್ದಶ । ವಾರುಣಂಲೊಕಮಾಸಾದ್ಯಸಸು

ಲೋಕೆ-ಚಂದ್ರನ ಲೋಕದಲ್ಲಿ, ಮಹೀಯ್ಯತೆ--ಪ್ರಕಾಶಿಸುತ್ತಿರುತ್ತಾನೆ ॥ ॥೧೬॥

ದೇವೇಭ್ಯಃ-ದೇವತೆಗಳಿಗೆ,ಬ್ರಾಹ್ಮಣಸ್ಯಾಪಿ-ಬ್ರಾಹ್ಮಣನಿಗೂ, ದೀಪದಾನಂ-ದೀವಿಗೆಯ ದಾನವನ್ನು, ಯಃ-ಯಾವ ಮನುಷ್ಯನು, ದದಾತಿ-ಕೊಡುತ್ತಾನೋ, ಪಾವಕಸ್ಯ-ಅಗ್ನಿಯ, ಲೋಕೆ-ಲೋಕದಲ್ಲಿ, ಮನ್ವಂತರಂ-ಮನ್ವಂತರ ಕಾಲದವರಿಗೂ, ಭೂರಿಶಃ-ಅಧಿಕವಾಗಿ, ವಸತಿ-ಇರುತ್ತಾನೆ ॥ ॥೧೭॥

ಗಜಂ-ಆನೆಯನ್ನು,ದತ್ವಾ-ದಾನಮಾಡಿ,ಶಕ್ರಲೋಕೆ-ಇಂದ್ರಸ್ವರ್ಗದಲ್ಲಿ, ತಸ್ಯ-ಆ ಇಂದ್ರನ, ಅರ್ಧಾಸನಂ-ಅರ್ಧ ಪೀಠವನ್ನು, ಆಪ್ನುಯಾತ್-ಹೊಂದುತ್ತಾನೆ,ಬ್ರಾಹ್ಮಣಾಯ-ದ್ವಿಜನಿಗೆ,ಅಶ್ವಂ- ಕುದುರೆಯನ್ನು, ದತ್ವಾ-ಕೊಟ್ಟು,ವಾರುಣಂ-ವರುಣಸ್ವರ್ಗವನ್ನು,ಆಶ್ರಿತಃ-ಹೊಂದಿದವನಾಗಿ,ಬ್ರಹ್ಮನ್-ವೈಖಾನಸಮುನಿಯೇ (ತತ್ರ-ಅಲ್ಲಿ,)ಸುಖತಃ-ಸುಖದಿಂದ,ಯಾವತ್-ಯದುವರಿಗೆ, ಚತುರ್ದಶಇಂದ್ರಾಃ-ಹದಿನಾಲ್ಕು ಇಂದ್ರಪಟ್ಟಗಳಾಗುವವರಿಗೂ, ನಿವಸೇತ್-ಇರುವವನಾದಾನು ॥ ॥೧೮॥

ವಿಪ್ರಾಯ-ಬ್ರಾಹ್ಮಣನಿಗೆ, ಶಿಬಿಕಾಂ-ಮೇನವನ್ನು, ದತ್ವಾ-ಕೊಟ್ಟು, ಯಾವತ್-ಯದುವರಿಗೆ, ಚತುರ್ದಶಇಂದ್ರಾಃ-ಹದಿನಾಲ್ಕು ಇಂದ್ರಪಟ್ಟಗಳು, ಮುಗಿಯುವವೋ, (ತಾವತ್-ಅದುವರಿಗೆ,)ವಾರುಣಂ-ಲೋಕಂ-ವರುಣಸ್ವರ್ಗವನ್ನು, ಆಸಾದ್ಯ-ಹೊಂದುವವನಾಗಿ ಸಃ-ಅವನು, ಸುಖೀ-ಭೋಗವುಳ್ಳವನು, ಭವತಿ-ಆಗುತ್ತಾನೆ, ಧ್ರುವಂ-ನಿಶ್ಚ

ವೀ ಭವತಿ ಧ್ರುವಂ ॥೧೯॥ ಚಾಮರಂ ವ್ಯಜನಂ ಶ್ವೇತಂ ದತ್ವಾ
ಮರ್ತ್ಯಸ್ತು ವಾರುಣೇ। ವರ್ಷಾಣಾಮಯುತಂ ತತ್ರ ಸ್ಥಿತ್ವಾ
ಸುಖಮವಾಪ್ನುಯಾತ್ ॥೨೦॥ ವಾಟಿಕಾಮುತ್ತಮಾಂ ದ
ತ್ವಾ ನರೋ ಮನ್ವಂತರಾವಧಿ । ವಾಯುಲೋಕಮವಾಪ್ನೋ
ತಿ ಬ್ರಾಹ್ಮಣಾಯ ವಿಶೇಷತಃ ॥೨೧॥ ಧಾನ್ಯರತ್ನ ಪ್ರದಾನೇನ
ಚಿರಜೀವೀ ಭವೇನ್ನರಃ । ದಾತಾ ಪರಿಗೃಹೀತಾ ಚ ಉಭೌ
ವೈಕುಂಠಗಾಮಿನೌ ॥೨೨॥ ಸದಾ ಶ್ರೀಹರಿನಾಮಾನಿ ಯೋಜ

ಯೇವು ॥ ॥೧೯॥

ಶ್ವೇತಂ-ಬಿಳುಪಾದ, ಚಾಮರಂ-ಚಮರೀಮೃಗದ ಕೂದಲಿನಿಂದ ಮಾಡಲ್ಪಟ್ಟ ಚಾಮರವನ್ನು, ವ್ಯಜನಂ-ಬೀಸಣಿಗೆಯನ್ನು, ಮರ್ತ್ಯಃ-ಮನುಷ್ಯನು, ದತ್ವಾ-ದಾನವಾಗಿ ಕೊಟ್ಟು, ವಾರುಣೇ-ವರುಣಸ್ವರ್ಗದಲ್ಲಿ, ವರ್ಷಾಣಾಂ-ಸಂವತ್ಸರಗಳ, ಅಯುತಂ-ಹತ್ತು ಸಹಸ್ರಪರಿಯಂತರವೂ, ತತ್ರ-ಅಲ್ಲಿ, ಸ್ಥಿತ್ವಾ-ಇದ್ದು, ಸುಖಂ-ಭೋಗವನ್ನು, ಅವಾಪ್ನುಯಾತ್-ಪಡೆಯುತ್ತಾನೆ ॥ ॥೨೦॥

ನರಃ-ಮನುಷ್ಯನು, ಉತ್ತಮಾಂ-ಶ್ರೇಷ್ಠವಾದ, ವಾಟಿಕಾಂ-ಸಾಲುತೋಪನ್ನು, ಗುಂಪುತೋಪನ್ನು, ಫಲವೃಕ್ಷಸಮೂಹದಿಂದ ಕೂಡಿದ ವೃಕ್ಷಸಮೂಹವನ್ನು, ಬ್ರಾಹ್ಮಣಾಯ-ದ್ವಿಜನಿಗೆ, ದತ್ವಾ-ಇತ್ತು, ಮನ್ವಂತರಾವಧಿ-ಒಂದು ಮನ್ವಂತರದ ಕಾಲದವರಿಗೂ, ವಿಶೇಷತಃ-ಅತಿಶಯವಾಗಿ, ವಾಯುಲೋಕಂ-ವಾಯುಸ್ವರ್ಗವನ್ನು, ಅವಾಪ್ನೋತಿ-ಪಡೆಯುತ್ತಾನೆ ॥ ॥೨೧॥

ಧಾನ್ಯ-ಗೋಧೀ ಭತ್ತ ಮುಂತಾದ ಕಾಳುಗಳ, ರತ್ನ-ವಜ್ರ ವೈಡೂರ್ಯ ಗೋಮೇಧಿಕ ಪುಷ್ಯರಾಗ ನೀಲ ಕೆಂಪು ಪಚ್ಚೆ ಮುಂತಾದವುಗಳ, ಪ್ರದಾನೇನ-ಕೊಡೋಣದ್ದರಿಂದ, ನರಃ-ಮನುಷ್ಯನು, ಚಿರಜೀವೀ-ಬಹುಕಾಲದವರಿಗೂ ಆಯುಸ್ಸುಳ್ಳವನು, ಭವೇತ್-ಆಗುವನು ॥ ದಾತಾ-ಧಾನ್ಯರತ್ನಾದಿಗಳನ್ನು ದಾನಮಾಡಿದವನು, ಪರಿಗೃಹೀತಾ-ದಾನವನ್ನು ತೆಗದುಕೊಂಡವನು, ಉಭೌ-ಇವರಿಬ್ಬರೂ, ವೈಕುಂಠಗಾಮಿನೌ-ವಿಷ್ಣುಲೋಕವನ್ನು ಹೊಂದುವರು॥ ॥೨೨॥

ಯಃ-ಯಾವ, ಮಾನವಃ-ಮನುಷ್ಯನು, ಸದಾ-ಯಾವಾಗಲೂ, ಶ್ರೀ

ಪೇನ್ಭುವಿಪಾನವಃ|ದೃಷ್ಟ್ವಾತಂಬ್ರಾಹ್ಮಣಂಮೃತ್ಯುಶ್ಶೀ ಘ್ರಮೇವಪಲಾಯತೇ ||೨೩|| ಪೂರ್ಣಿಮಾಯಾಂನಿಶಾಶೇ ಷೇದೋಳನಂಕಾರಯೇನ್ನರಃ| ತೇನಪುಣ್ಯವಿಪಾಕೇನಜೀವನ್ಮು ಕ್ತೋಭವಿಷ್ಯತಿ||೨೪|| ತಿಲದಾನಂನರಃಕೃತ್ವಾಮೋದತೇಶಿವ ಮಂದಿರೇ| ತಿಲಪ್ರಮಾಣವರ್ಷಾಣಿಸತ್ಯಂಸತ್ಯಮಿದಂಮು ನೇ||೨೫|| ಉತ್ತಮಂಜನ್ಮಸಂಪ್ರಾಪ್ಯತತೋಭೋಗೀಧನೀನ ರಃ | ಚಿರಜೀವೀಸಭೂತ್ವಾತು ಉತ್ತಮಃಸ್ವಜನೇಭವೇ ತ್ ||೨೬|| ತಾಮ್ರಪಾತ್ರಪ್ರದಾನೇನಶಿವ ಲೋಕಂಸಮ

ಹರಿನಾಮಾನಿ-ವಿಷ್ಣುನಾಮಗಳನ್ನು, ಭುವಿ-ಭೂಲೋಕದಲ್ಲಿ, ಜಪೇತ್-ಹೇಳುತ್ತಿರುವನೋ, ತಂ-ಆ, ಬ್ರಾಹ್ಮಣಂ-ದ್ವಿಜನನ್ನು, ದೃಷ್ಟ್ವಾ-ನೋಡಿ, ಮೃತ್ಯುಃ-ಮೃತ್ಯುದೇವತೆಯು, ಶೀಘ್ರಮೇವ-ತ್ವರೆಯಾಗಿಯೇ, ಪಲಾಯತೇ-ಓಡಿಹೋಗುತ್ತದೆ || ||೨೩||

ಪೂರ್ಣಿಮಾಯಾಂ-ಹುಣ್ಣಿಮೆಯಲ್ಲಿ, ನಿಶಾಶೇಷೇ-ನಾಲ್ಕನೆಯಜಾಮದಲ್ಲಿ, ನರಃ-ಮನುಷ್ಯನು, ದೋಳನಂ-ಆಂದೋಳನೋತ್ಸವವನ್ನು, ಕಾರಯೇತ್-ಮಾಡಿಸಿದವನಾದರೆ, ತೇನ-ಆ, ಪುಣ್ಯವಿಪಾಕೇನ-ಪುಣ್ಯಪರಿಪಾಕದಿಂದ,ಜೀವನ್ಮುಕ್ತಃ-ಜೀವನ್ಮುಕ್ತನು,ಭವಿಷ್ಯತಿ-ಆಗುತ್ತಾನೆ||೨೪||

ನರಃ-ಮನುಷ್ಯನು, ತಿಲದಾನಂ-ಯಳ್ಳಿನದಾನವನ್ನು, ಕೃತ್ವಾ-ಮಾಡಿ, ಶಿವಮಂದಿರೇ-ಕೈಲಾಸದಲ್ಲಿ,ತಿಲಪ್ರಮಾಣವರ್ಷಾಣಿ-ಎಳ್ಳುಕಾಳುಗಳ ಸಂಖ್ಯೆಸಮಾನವಾದ ವರ್ಷಗಳವರಿಗೂ,ಮೋದತೇ-ಸುಖಿಯಾಗಿರುತ್ತಾನೆ, ಮುನೇ-ಪೈಖಾನಸಮುನಿಯೇ, ಇದಂ-ಈಗ ಹೇಳಿದ್ದು, ಸತ್ಯಂಸತ್ಯಂ-ದಿಟವುದಿಟವು || ||೨೫||

ಸಃ-ಅವನು, ತತಃ-ಶಿವಮಂದಿರವಲ್ಲಿ ಸುಖವನ್ನು ಅನುಭವಿಸಿದ ತರುವಾಯ, ಉತ್ತಮಂ-ಶ್ರೇಷ್ಠವಾದ, ಜನ್ಮ-ಬ್ರಾಹ್ಮಣ ಜನ್ಮವನ್ನು, ಸಂಪ್ರಾಪ್ಯ-ಪಡೆದು, ಭೋಗಿ-ಸುಖವುಳ್ಳವನು, ಧನೀ-ದ್ರವ್ಯವುಳ್ಳವನು ನರಃ-ಶ್ರೇಷ್ಠನು, ಸ್ವಜನೇ-ತನ್ನ ನೆಂಟರೊಳಗೆ, ಉತ್ತಮಃ-ಗಣ್ಯನಾದವನು, ಭೂತ್ವಾ-ಆಗಿ,ಚಿರಜೀವೀ-ಬಹುಕಾಲದವರಿಗೂ, ಬದುಕಿರುವವನು, ಭವೇತ್-ಆಗುವವನು || ||೨೬||

ತಾಮ್ರಪಾತ್ರ-ತಾಮ್ರಲೋಹದಿಂದ ಮಾಡಿರುವ,ಕಡಾಯಿ ಬಿಂದಿಗೆ

ಶ್ನುತೇ ॥ ತತಃಸುಯೋನಿಂಸಂಪ್ರಾಪ್ಯಚಿರಜೀವೀಭವಿಷ್ಯ
ತಿ ॥೨೩॥ ಸಾಲಂಕೃತಾಂಚಯೋಗ್ಯಾಂಚಸವಸ್ತ್ರಾಂಸುಂ
ದರೀಂವರಾಂ । ದತ್ವಾಮಹೀಯತೇಚಂದ್ರಲೋಕೇಇಂದ್ರಾ
ಶ್ಚತುರ್ದಶ ॥೨೪॥ ತಾವತತ್ರಸುಖಂಭುಕ್ತ್ವಾಅಪ್ಸರೋ
ಭಿರ್ದಿವಾನಿಶಂ । ವರ್ಷಾಣಾಮಯುತಂಗಂಧರ್ವಲೋಕೇ
ಸುಖಮವಾಪ್ನುಯಾತ್ ॥೨೫॥ ದಿವಾನಿಶಮಥೋರ್ವಶ್ಯಾ

ಪುಂತಾವ ಪಾತ್ರೆಯನ್ನು, ಪ್ರದಾನೇನ-ಕೊಡುವಿಕೆಯಿಂದ, ಶಿವಲೋ
ಕಂ-ಕೈಲಾಸವನ್ನು, ಸಮಶ್ನುತೇ-ಪಡೆಯುತ್ತಾನೆ, ತತಃ-ಕೈಲಾಸಸು
ಖಾನುಭವವಾದ ಬಳಿಕ, ಸುಯೋನಿಂ-ಉತ್ತಮವಾದಬ್ರಾಹ್ಮಣ ಜನ್ಮ
ವನ್ನು, ಸಂಪ್ರಾಪ್ಯ-ಪಡೆದು, ಚಿರಜೀವೀ-ಬಹುಕಾಲದವರಿಗೆ, ಬದುಕಿ
ರುವವನು, ಭವಿಷ್ಯತಿ-ಆಗುವನು॥ ॥೨೩॥

ಸಾಲಂಕೃತಾಂ-ಆಭರಣಾದ್ಯಲಂಕಾರದಿಂದಸಲ್ಪಟ್ಟವಳಾದ, ಸುಂದ
ರೀಂ-ಸ್ವಯಂಚಲುವಳಾಗಿರುವವಳಾದ, ವರಾಂ-ಶ್ರೇಷ್ಠಳಾದ, ಯೋ
ಗ್ಯಾಂ-ವಿವಾಹವಾಗುವದಕ್ಕೆ ಶಾಸ್ತ್ರೋಕ್ತ ವಯಸ್ಸಾಗಿರುವವಳಾದ,
ಅಂದರೆ ಹತ್ತುವರ್ಷದ, ಒಳಗಾಗಿವಯಸ್ಸುಳ್ಳವಳಾದ,ಸವಸ್ತ್ರಾಂ-ವ
ಸ್ತ್ರದಿಂದ ಕೂಡಿದವಳಾದ, ಅಂದರೆ ವಿವಾಹ ದೀಕ್ಷಾವಸ್ತ್ರಗಳಿಂದ
ಸಹಿತಳಾದ, (ಕನ್ಯೆಯನ್ನು) ದತ್ವಾ-ದಾನಮಾಡಿ, ಚತುರ್ದಶ-ಇಂ
ದ್ರಾಃ-ಹದಿನಾಲ್ಕು ಇಂದ್ರರು ಆಗುವಕಾಲದವರಿಗೆ, ಚಂದ್ರಲೋಕೇ-
ಚಂದ್ರಸ್ವರ್ಗದಲ್ಲಿ, ಮಹೀಯ್ಯತೇ-ಪ್ರಕಾಶಿಸುತ್ತಿರುವನು ॥ ॥೨೪॥

ತಾವತ್-ಹದಿನಾಲ್ಕು ಇಂದ್ರಪಟ್ಟಗಳ ಕಾಲದವರಿಗೂ, ತತ್ರ-ಚಂ
ದ್ರಸ್ವರ್ಗದಲ್ಲಿ, ಅಪ್ಸರೋಭಿಃ-ಅಪ್ಸರಸ್ತ್ರೀರೊಂದಿಗೆ, ದಿವಾನಿಶಂ-
ಹಗಲೂ ರಾತ್ರೀ ಕೂಡ, ಸುಖಂ-ಸೌಖ್ಯವನ್ನು, ಭುಕ್ತ್ವಾ-ಅನುಭ
ವಿಸಿ, ಗಂಧರ್ವಲೋಕೇ-ಗಂಧರ್ವರ ಲೋಕದಲ್ಲಿ, ವರ್ಷಾಣಾಮಯು
ತಂ-ಹತ್ತು ಸಾವಿರ ವರ್ಷಗಳವರಿಗೂ, ಸುಖಂ-ಭೋಗವನ್ನು, ಅವಾ
ಪ್ನುಯಾತ್-ಹೊಂದುವನು ॥ ॥೨೫॥

ಅಥ-ಅನಂತರದಲ್ಲಿ, ಊರ್ವಶ್ಯಾ-ಊರ್ವಶೀಯೆಂಬ ಅಪ್ಸರಸ್ಸಿನ
ಸಂಗಡ, ದಿವಾನಿಶಂ-ಹಗಲೂ ರಾತ್ರಿಯಲ್ಲಿಯೂ, ಕೌತುಕೇನ-ಕಾತೂ

ಕೌತುಕೇನ ಸಮೋದತೇ ॥ ತತೋಜನ್ಮ ಸಹಸ್ರೇಷುಲಭತೇ
ಸುಂದರೀಂಪ್ರಿಯಾಂ ॥೩೦॥ ಫಲಂಮನೋಹರಂಯೋಗ್ಯಂ
ಯೋದದಾತಿದ್ವಿಜನ್ಮನೇ । ಫಲಪ್ರಮಾಣವರ್ಷಾಣಿ ಇಂದ್ರ
ಲೋಕಂಸಮಶ್ನುತೇ ॥೩೧॥ ತತಃಸುಯೋನಿಂ ಸಂಪ್ರಾಪ್ಯ
ಲಭತೇತನಯಂವರಂ । ಕೇವಲಂಫಲದಾನೇನಸ್ವರ್ಗತಿಂಯಾ
ತಿಮಾನವಃ ॥೩೨॥ ನಾನಾದ್ರವ್ಯಸಮಾಯುಕ್ತಂಮಂದಿರಂ
ಚದ್ವಿಜನ್ಮನೇ । ಮನ್ವಂತರಶತಂದೇವಲೋಕೇಸೋಪಿಮ

ಹಲದಿಂದ, ಸಃ–ಅವನು, ಮೋದತೇ–ಸಂತೋಷ ಪಡುತ್ತಿರುವನು, ತತಃ–ಅಲ್ಲಿಂದಬಂದು ಭೂಲೋಕದಲ್ಲಿ ಹುಟ್ಟಿದಬಳಿಕ, ಜನ್ಮಸಹಸ್ರೇಷು–ಸಾವಿರ ಜನ್ಮಗಳಲ್ಲಿ, ಸುಂದರೀಂ–ಚೆಲುವೆಯಾದ, ಪ್ರಿಯಾಂ–ಹೆಂಡತಿಯನ್ನು, ಲಭತೇ–ಪಡೆಯುತ್ತಾನೆ ॥ ॥೩೦॥

ಯಃ–ಯಾವ ಮನುಷ್ಯನು, ಮನೋಹರಂ–ತೃಪ್ತಿಕರವಾದ, ಯೋಗ್ಯಂ–ಒಳ್ಳೇದಾದ, ಫಲಂ–ಹಣ್ಣನ್ನು, ದ್ವಿಜನ್ಮನೇ–ಬ್ರಾಹ್ಮಣನಿಗೆ, ದದಾತಿ–ಕೊಡುತ್ತಾನೋ, ಫಲಪ್ರಮಾಣವರ್ಷಾಣಿ–ಆ ಹಣ್ಣುಗಳ ಸಂಖ್ಯೆಗೆ ಸಮವಾದವರ್ಷಗಳವರಿಗೂ (ಅವನು,) ಇಂದ್ರಲೋಕಂ–ಇಂದ್ರಸ್ವರ್ಗವನ್ನು, ಸಮಶ್ನುತೇ–ಪಡೆಯುವನು ॥ ॥೩೧॥

ತತಃ–ಆಬಳಿಕ, ಸುಯೋನಿಂ–ಒಳ್ಳೇ ಜನ್ಮವನ್ನು, ಸಂಪ್ರಾಪ್ಯ–ಪಡೆದು, ವರಂ–ಶ್ರೇಷ್ಠನಾದ, ತನಯಂ–ಮಗನನ್ನು, ಲಭತೇ–ಪಡೆಯುವನು, ಕೇವಲಂ–ಮುಖ್ಯವಾಗಿ, ಫಲದಾನೇನ–ಹಣ್ಣುಗಳನ್ನು ದಾನ ಮಾಡುವದ್ದರಿಂದ, ಮಾನವಃ–ಮನುಷ್ಯನು, ಸ್ವರ್ಗತಿಂ–ಸ್ವರ್ಗಲೋಕವನ್ನು, ಯಾತಿ–ಹೊಂದುತ್ತಾನೆ ॥ ॥೩೨॥

ನಾನಾ–ಬಗೆಬಗೆಯಾದ,ದ್ರವ್ಯ–ಪದಾರ್ಥಗಳಿಂದ, ಸಮಾಯುಕ್ತಂ–ಕೂಡಿರುವದಾದ, ಮಂದಿರಂ–ಮನೆಯನ್ನು, ದ್ವಿಜನ್ಮನೇ–ಬ್ರಾಹ್ಮಣನಿಗೆ, ದದಾತಿ–ಕೊಡುತ್ತಾನೋ, ಸಃ–ಅವನು, ಮನ್ವಂತರಶತಂ–ನೂರು ಮನ್ವಂತರಗಳು ಆಗುವವರಿಗೂ, ದೇವಲೋಕೇ–ದೇವತಾಲೋಕದಲ್ಲಿ, ಮಹೀಯತೇ–ಪ್ರಕಾಶಿಸುತ್ತಿರುವನು, ತತಃ–ಆಬಳಿಕ,ಭುವಿ–ಭೂಲೋಕದಲ್ಲಿ, ಸುಯೋನಿಂ–ಒಳ್ಳೇ ಜನ್ಮವನ್ನು, ಸಂಪ್ರಾಪ್ಯ–ಹೊಂದಿ, ಧನ

ಹೀಯ್ಯತೇ । ತತಃಸ್ಸುಯೋನಿಂಸಂಪ್ರಾಪ್ಯಧನವಾನ್ ಜಾ
ಯತೇಭುವಿ॥೩೩॥ರುಚಿರಂಸಸ್ಯಸಂಯುಕ್ತಾಂಮೇದಿನೀಂಚ
ದ್ವಿಜಾತಯೇ । ವೈಕುಂಠೇಸುಚಿರಂಸ್ಥಿತ್ವಾಮನ್ವಂತರಶತಾ
ವಧಿ । ಪುನಃಸುಯೋನಿಂಸಂಪ್ರಾಪ್ಯಪ್ರಜಾನಾಮಧಿಪೋಭ
ವೇತ್।ಶತಜನ್ಮಾವಧಿಕ್ಷೋಣೀತಂನತ್ಯಜತಿಸರ್ವದಾ॥೩೪॥
ಪ್ರಕೃಷ್ಟಂಸಪ್ರಜಂ ಗ್ರಾಮಂಪಕ್ವಸಸ್ಯಾದಿ ಸಂಯು
ತಂ । ಫಲವೃಕ್ಷಸಮಾಯುಕ್ತಂಫಲಯುಕ್ತಲತಾಯುತಂ।

ವಾನ್—ದ್ರವ್ಯವಂತನು, ಜಾಯತೇ—ಆಗುತ್ತಾನೆ ॥ ॥೩೩॥
ದ್ವಿಜಾತಯೇ—ಬ್ರಾಹ್ಮಣನಿಗೆ, ರುಚಿರಂ—ಮನೋಹರವಾಗಿರುವಂತೆ,
ಸಸ್ಯ—ಬೆಳೆಯಿಂದ,ಸಂಯುಕ್ತಾಂ—ಕೂಡಿರುವ, ಮೇದಿನೀಂ—ಭೂಮಿಯ
ನ್ನು,ಅಂದರೆ ಚನ್ನಾಗಿ ಬೆಳೆಯಾಗುವ ಭೂಮಿಯನ್ನು,ದದಾತಿ—ಕೊಡು
ತ್ತಾನೋ ಅವನು,ವೈಕುಂಠೇ—ವಿಷ್ಣುಲೋಕದಲ್ಲಿ, ಸುಚಿರಂ—ಬಹುಕಾಲ
ದವರಿಗೂ, ಮನ್ವಂತರಶತಾವಧಿ—ನೂರು ಮನ್ವಂತರಗಳವರಿಗೂ, ಸ್ಥಿ
ತ್ವಾ—ಇದ್ದು,ಸುಯೋನಿಂ—ಒಳ್ಳೇ ಉತ್ತಮ ಜನ್ಮವನ್ನು,ಸಂಪ್ರಾಪ್ಯ—
ಪಡೆದು,ಪ್ರಜಾನಾಂ—ಪ್ರಜೆಗಳಿಗೆ, ಅಧಿಪಃ—ಸ್ವಾಮಿಯು,ಭವೇತ್—ಆಗುವ
ನು,ಶತಜನ್ಮಾವಧಿ—ನೂರು ಜನ್ಮಗಳವರಿಗೂ,ಕ್ಷೋಣೀ—ಭೂಮಿಯು,ಸ
ರ್ವದಾ—ಯಾವಾಗಲೂ, ತಂ—ಅವನನ್ನು, ನತ್ಯಜತಿ—ಬಿಡುವದಿಲ್ಲ ॥೩೪॥
ಪ್ರಕೃಷ್ಟಂ—ಉತ್ತಮವಾದ, ಸಪ್ರಜಂ—ಪ್ರಜೆಗಳಿಂದ ಕೂಡಿದ,
ಅಂದರೆ ರೈತರ ಪುಂಜಿಯುಳ್ಳದ್ದಾದ,ಪಕ್ವಸಸ್ಯಾದಿ—ಯಾವಾಗಲೂ ಪ
ಕ್ವಪೈರು ಮೊದಲಾದವುಗಳಿಂದ,ಸಂಯುತಂ—ಕೂಡಿರುವದಾದ, ಅಂದರೆ
ಕಬ್ಬು, ಭತ್ತದ ಗದ್ದೆ, ತೆಂಗು, ಅಡಿಕೆ ಮುಂತಾದ ಫಲಗಳು ಆಗುತ್ತಿ
ರುವದಾದ, ಫಲವೃಕ್ಷ—ಹಣ್ಣು ಬಿಡುತ್ತಿರುವ ಮರಗಳಿಂದ, ಸಮಾಯು
ಕ್ತಂ—ಕೂಡಿರುವದಾದ, ಫಲ—ಹಣ್ಣುಗಳಿಂದ, ಯುಕ್ತ—ಕೂಡಿರುವ, ಲ
ತಾ—ಬಳ್ಳಿಗಳಿಂದ, ಯುತಂ—ಕೂಡಿರುವದಾದ, ಗ್ರಾಮಂ—ಹಳ್ಳಿಯ
ನ್ನು, ದದಾತಿ—ಕೊಡುತ್ತಾನೋ, ಸಃ—ಅವನು, ದಶಲಕ್ಷೇಂದ್ರಮಾ
ನಂ—ಹತ್ತು ಲಕ್ಷ ಇಂದ್ರರ ಅಧಿಕಾರವಾಗುವ ಕಾಲದವರಿಗೂ, ಕೈಲಾ
ಸೇ-ಶಿವಲೋಕದಲ್ಲಿ, ಸುಖಂ—ಭೋಗವನ್ನು, ಅಶ್ನುತೇ—ಹೊಂದುವನು,

ದಶಲಕ್ಷೇಂದ್ರಮಾನಂಸಃಕೈಲಾಸೇಸುಖಮಶ್ನುತೇ ॥ ಪುನಃಸು
ಯೋನಿಂಸಂಪ್ರಾಪ್ಯರಾಜರಾಟ್ಸಭವಿಷ್ಯತಿ ॥೩೬॥ ನಗರಾ
ಣಾಂ ಶತಂ ದೇಶಂ ಯೋದದಾತಿ ದ್ವಿಜಾತಯೇ । ಕೋಟಿಮ
ನ್ವಂತರಂ ಸ್ಥಿತ್ವಾಜನಿಂ ಪ್ರಾಪ್ಯಧರಾತಲೇ । ಜಂಬೂ
ದ್ವೀಪಾಧಿಪೋಭೂತ್ವಾಪರಮೈಶ್ವರ್ಯಮಶ್ನುತೇ ॥೩೭॥ ದೇವೀ
ಮಂತ್ರಪರಾಯೇತು ಮಣಿದ್ವೀಪಂ ಸಮಾಶ್ರಿತಾಃ । ಲ
ಬ್ಧ್ವಾದೇವ್ಯಾಶ್ಚಸಾರೂಪ್ಯಂ ದೇವೀಸೇವಾಪರಾಸ್ಸದಾ ॥
ಲೋಕಸ್ಯಸಂಕ್ಷಯಂತೇತುಪಶ್ಯಂತಿವಿಮಲಾಶಯಾಃ ॥೩೮॥

ಪುನಃ-ಮತ್ತು, ಸುಯೋನಿಂ-ಉತ್ತಮ ಜನ್ಮವನ್ನು, ಸಂಪ್ರಾಪ್ಯ-ಹೊಂದಿ, ರಾಜರಾಟ್-ದೊರೆಗಳಿಗೆ ದೊರೆಯಾದವನು, ಭವಿಷ್ಯತಿ-ಆಗುತ್ತಾನೆ ॥ ॥೩೬॥

ನಗರಾಣಾಂಶತಂ-ನೂರು ಗ್ರಾಮಗಳನ್ನು, ದೇಶಂ-ಅನೇಕ ನಗರ, ಗ್ರಾಮಗಳಿಂದ ಕೂಡಿರುವ ರಾಷ್ಟ್ರವನ್ನು, ಯಃ-ಯಾವನು, ದ್ವಿಜಾತಯೇ-ಬ್ರಾಹ್ಮಣನಿಗೆ, ದದಾತಿ-ಕೊಡುತ್ತಾನೋ, ಕೋಟಿಮನ್ವಂತರಂ-ಕೋಟಿ ಮನುಗಳ ಅಧಿಕಾರವು ತೀರುವವರಿಗೂ, ಸ್ಥಿತ್ವಾ-ಪುಣ್ಯಲೋಕಗಳಲ್ಲಿದ್ದು, ಧರಾತಲೇ-ಭೂಮಿಯಲ್ಲಿ, ಜನಿಂ-ಉತ್ಪತ್ತಿಯನ್ನು, ಪ್ರಾಪ್ಯ-ಪಡೆದು,ಜಂಬೂದ್ವೀಪಾಧಿಪಃ-ಜಂಬೂ ದ್ವೀಪಕ್ಕೆ ದೊರೆಯು, ಭೂತ್ವಾ-ಆಗಿ, ಪರಮೈಶ್ವರ್ಯಂ-ಅತ್ಯುತ್ತಮವಾದ ಸಂಪತ್ತನ್ನು, ಅಶ್ನುತೇ-ಹೊಂದುತ್ತಾನೆ ॥ ॥೩೭॥

ಯೇತು-ಯಾರಾದರೇ, ದೇವಿಮಂತ್ರಪರಾಃ-ಶ್ರೀದೇವಿಯ ಮಂತ್ರ ಜಪನಿರತರಾಗಿರುತ್ತಾರೋ, (ತೇ-ಅವರು,) ಮಣಿದ್ವೀಪಂ-ಮಣಿಮಯವಾದ ದೇವೀಲೋಕವನ್ನು, ಸಮಾಶ್ರಿತಾಃ-ಸೇರಿದವರಾಗಿ, ದೇವ್ಯಾಃ-ಪರಾಶಕ್ತಿಯ, ಸಾರೂಪ್ಯಂ-ಸಮಾನ ರೂಪತ್ವವನ್ನು,ಲಬ್ಧ್ವಾ-ಹೊಂದಿ, ಸದಾ-ಯಾವಾಗಲೂ, ದೇವೀಸೇವಾಪರಾಃ-ದೇವಿಯ ಸೇವೆಯನ್ನು ಮಾಡುತ್ತಿರುವವರಾಗಿ, ವಿಮಲ-ನಿರ್ಮಲವಾದ, ಆಶಯಾಃ-ಅಭಿಪ್ರಾಯವುಳ್ಳವರಾಗಿ, ಲೋಕಸ್ಯ-ಪ್ರಪಂಚದ, ಸಂಕ್ಷಯಂ-ಲಯವನ್ನು, ಪಶ್ಯಂತಿ-ನೋಡುತ್ತಿರುವರು ॥ ॥೩೮॥

ನಿತ್ಯಸ್ನಾಯೀಚ ಗಂಗಾಯಾಂಸೂರ್ಯವತ್ಸಶುಚಿರ್ಭುವಿ ।
ಭಾರತೇಜಲದಾನೇನಶಿವಲೋಕೇಮಹೀಯ್ಯತೇ ॥ ೩೯ ॥ ಶಿವರಾ
ತ್ರೌಶಂಕರಾಯಬಿಲ್ವಪತ್ರಂ ಸಮರ್ಪ್ಯಚ । ಪತ್ರಮಾನ
ಯುಗಂಮರ್ತ್ಯಃಶಿವಲೋಕೇಮಹೀಯ್ಯತೇ ॥ ೪೦ ॥ ಶ್ರೀರಾ
ಮನವಮೀಂಯೋಹಿಕರೋತಿವಿಧಿಪೂರ್ವಕಂ । ಸಪ್ತಮ
ನ್ವಂತರಂಸೋಪಿಮೋದತೇವಿಷ್ಣುಮಂದಿರೇ ॥ ೪೧ ॥ ಶಾರದೀ
ಯಾಂಮಹಾಪೂಜಾಂ ದೇವ್ಯಾಃಯಸ್ತುಸಮಾಚರೇತ್ । ಶಿ

ಗಂಗಾಯಾಂ—ಗಂಗಾನದಿಯಲ್ಲಿ, ನಿತ್ಯಸ್ನಾಯೀ—ಪ್ರತಿ ದಿನದಲ್ಲಿಯೂ, ಸ್ನಾನಮಾಡುತ್ತಿರುವವನು, ಭುವಿ—ಭೂಮಿಯಲ್ಲಿ, ಸೂರ್ಯವತ್—ಸೂರ್ಯನಹಾಗೆ, ಸಃ—ಅವನು, ಶುಚಿಃ—ಪರಿಶುದ್ಧನು, (ಆಗುವನು,) ಭಾರತೇ—ಭರತಖಂಡದಲ್ಲಿ, ಜಲದಾನೇನ, ಶಿವಲೋಕೇ—ಕೈಲಾಸದಲ್ಲಿ, ಮಹೀಯ್ಯತೇ—ಪ್ರಕಾಶಮಾನನಾಗುತ್ತಿರುವನು ॥ ॥೩೯॥

ಶಿವರಾತ್ರೌ—ಶಿವರಾತ್ರಿಯ ದಿನದಲ್ಲಿ, ಶಂಕರಾಯ—ಈಶ್ವರನಿಗೆ, ಬಿಲ್ವಪತ್ರಂ—ಬಿಲ್ವದಳವನ್ನು, ಸಮರ್ಪ್ಯಚ—ಪೂಜಿಮಾಡಿ, ಪತ್ರಮಾನಯುಗಂ—ಬಿಲ್ವದಳಗಳ ಸಂಖ್ಯೆಗೆ ಸಮವಾದ ಯುಗಗಳವರಿಗೆ, ಮರ್ತ್ಯಃ—ಮನುಷ್ಯನು, ಶಿವಲೋಕೇ—ಕೈಲಾಸದಲ್ಲಿ,ಮಹೀಯ್ಯತೇ—ಪ್ರಕಾಶಿಸುತ್ತಿರುವನು ॥ ॥೪೦॥

ಯಃ—ಯಾವ ಮನುಷ್ಯನು, ಶ್ರೀರಾಮನವಮೀಂ—ವಿಷ್ಣುವು ರಾಮಾವತಾರವನ್ನು ಮಾಡಿದ ನವಮೀದಿನದ ಉತ್ಸವವನ್ನು, ವಿಧಿಪೂರ್ವಕಂ—ಶಾಸ್ತ್ರಾನುಸಾರವಾಗಿ, ಕರೋತಿ—ಮಾಡುತ್ತಾನೋ, ಸೋಪಿ—ಅವನು, ಸಪ್ತಮನ್ವಂತರಂ—ಏಳುಮನ್ವಂತರಗಳು ಕಳೆಯುವವರಿಗೂ, ವಿಷ್ಣುಮಂದಿರೇ—ವೈಕುಂಠದಲ್ಲಿ, ಮೋದತೇ—ಸಂತೋಷಿಸುತ್ತಿರುವನು ॥ ॥೪೧॥

ಯಸ್ತು—ಯಾವನಾದರೆ, ದೇವ್ಯಾಃ—ಪರಮೇಶ್ವರಿಯ, ಶಾರದೀಯಾಂ—ಶರತ್ಕಾಲ ಸಂಬಂಧವಾದ, ಮಹಾಪೂಜಾಂ—ಪೂರ್ಣಾರ್ಚನೆಯನ್ನು, ಸಮಾಚರೇತ್—ಮಾಡುತ್ತಾನೋ, ಸೋಪಿ—ಅವನು, ಶಿವಲೋಕೇ—ಕೈಲಾಸದಲ್ಲಿ, ಸಪ್ತಮನ್ವಂತರಾವಧಿ—ಏಳು ಮನ್ವಂತರ ಕಾಲದವರಿ

ವಲೋಕೇವಸೇತ್ಸೋಪಿಸಪ್ತಮನ್ವಂತರಾವಧಿ ॥೪೨॥ ಕಾರ್ತಿ
ಕ್ಯಾಂಪೂರ್ಣಿಮಾಯಾಂತು ರಾಧಾಂಕೃಷ್ಣಂ ಸಮರ್ಚ
ಯೇತ್ । ರಾಸಮಂ ಡಲಮಧ್ಯಸ್ಥಂ ಧ್ಯಾತ್ವಾಗೋಲೋಕ
ಗೋಭವೇತ್ ॥೪೩॥ ಶಿವಂಯಃಪೂಜಯೇನ್ನಿತ್ಯಂಕೃತ್ವಾಲಿಂ
ಗಂಚಪಾರ್ಥಿವಂ । ಯಾವಜ್ಜೀವನಪರ್ಯಂತಂಸಯಾತಿಶಿ
ವಮಂದಿರಂ ॥ಮೃದೋರೇಣುಪ್ರಮಾಣಾಬ್ದಂಶಿವಲೋಕೇನಿವ
ತ್ಸ್ಯತಿ ॥ ತತೋಭುವಿಜನಿಂಪ್ರಾಪ್ಯರಾಜೇಂದ್ರೋಸಭವಿಷ್ಯ
ತಿ ॥ ೪೪ ॥ ಪುಣ್ಯೇನಕರ್ಮಣಾಮರ್ತ್ಯಃಲೋಕಾನಾಪ್ನೋತಿ

ಗೊ, ವಸೇತ್–ಇರುವವನಾದಾನು ॥ ॥೪೨॥

ಕಾರ್ತಿಕ್ಯಾಂ–ಕಾರ್ತೀಕಮಾಸದಲ್ಲಿ, ಪೂರ್ಣಿಮಾಯಾಂ–ಹುಣ್ಣಿಮೆ ಯಲ್ಲಿ, ರಾಧಾಂ–ರಾಧೆಯನ್ನು, ರಾಸಮಂಡಲಮಧ್ಯಸ್ಥಂ–ಗೋಪಿಕಾ ಸ್ತ್ರೀರೊಂದಿಗೆ ರಾಸಮಂಡಲದಲ್ಲಿರುವವನಾದ, ಕೃಷ್ಣಂ–ಕೃಷ್ಣ ಮೂರ್ತಿಯನ್ನು, ಧ್ಯಾತ್ವಾ–ಧ್ಯಾನಮಾಡಿ, ಗೋಲೋಕಗಃ–ಗೋಲೋ ಕವನ್ನು ಹೊಂದುವವನು, ಭವೇತ್–ಆದಾನು ॥ ॥೪೩॥

ಯಃ–ಯಾವ ಮನುಷ್ಯನು, ಪಾರ್ಥಿವಂ–ಮಣ್ಣಿನ ಸಂಬಂಧವಾ ದ, ಲಿಂಗಂ–ಲಿಂಗಮೂರ್ತಿಯನ್ನು, ಯಾವಜ್ಜೀವನಪರ್ಯಂತಂ–ತಾನು ಬದುಕಿರುವವರಿಗೂ, ಕೃತ್ವಾ–ಮಾಡಿ, ನಿತ್ಯಂ–ಪ್ರತಿದಿನದಲ್ಲಿಯೂ, ಪೂ ಜಯೇತ್–ಅರ್ಚನೆ ಮಾಡುತ್ತಾನೋ, ಸಃ–ಅವನು, ಶಿವಮಂದಿರಂ– ಕೈಲಾಸವನ್ನು, ಕುರಿತು, ಯಾತಿ–ಹೋಗುತ್ತಲಿದ್ದಾನೆ, ಮೃದಃರೇ ಣುಪ್ರಮಾಣಾಬ್ದಂ–ಮಣ್ಣಿನ ರಜಗಳ ಸಂಖ್ಯೆಗೆ ಸಮವಾದ ವರ್ಷ ಗಳವರಿಗೂ, ಶಿವಲೋಕೇ–ಕೈಲಾಸದಲ್ಲಿ, ನಿವತ್ಸ್ಯತಿ–ಇರುತ್ತಾನೆ, ತ ತಃ–ಆಬಳಿಕ, ಭುವಿ–ಭೂಲೋಕದಲ್ಲಿ, ಸಃ–ಅವನು, ಜನಿಂ–ಜನ್ಮವ ನ್ನು, ಪ್ರಾಪ್ಯ–ಪಡದು, ರಾಜೇಂದ್ರಃ–ರಾಜಶ್ರೇಷ್ಠನು. ಭವಿಷ್ಯ ತಿ–ಆಗುತ್ತಾನೆ ॥ ॥೪೪॥

ಮರ್ತ್ಯಃ–ಮನುಷ್ಯನು, ಪುಣ್ಯೇನ–ಪುಣ್ಯಾಕರವಾದ, ಕರ್ಮಣಾ–ಕಾ ರ್ಯದಿಂದ, ಉತ್ತಮಾನ್–ಯೋಗ್ಯಗಳಾದ, ಲೋಕಾನ್–ಸ್ವರ್ಗಾದಿಲೋ ಕಗಳನ್ನು, ಆಪ್ನೋತಿ–ಪಡೆಯುತ್ತಾನೆ, ತಸ್ಮಾತ್–ಆದಕಾರಣದಿಂದ,

ಚೋತ್ತಮಾನ್ ॥ ತಸ್ಮಾಚ್ಛುಭಕರಂಕರ್ಮಕುರ್ಯಾನ್ನಿತ್ಯಮ
ತಂದ್ರಿತಃ । ಶಿಮನ್ಯದಿಚ್ಛಸಿಶ್ರೋತುಂತತ್ತೇವಕ್ಷ್ಯಾಮಿಸಾ
ದರಂ ॥ ॥೪೬॥

ಇತಿ ಶ್ರೀ ಭವಿಷ್ಯೋತ್ತರಪುರಾಣೇ ವೇಂಕಟೇಶಮಾ
ಹಾತ್ಮ್ಯೆ ಉತ್ತರಭಾಗೇಪುಣ್ಯಕರ್ಮಣಾಉತ್ತ
ಮ ಲೋಕಗಮನ ಕಥನಂ ನಾಮ
ನವಮೋಧ್ಯಾಯಃ ॥

---

ವೈಖಾನಸೋವಾಚ॥ ಧರ್ಮಾತ್ಮನಸ್ಸಮುತ್ಪತ್ತಿಂಸ್ವರ್ಗತಿಂ
ಚವದಾದ್ಯಮೆ । ಯಥಾವಿಚಾರಂಕ್ರಿಯತೆ ದೇಹೆಸ್ಮಿನ್ಸು

ಶುಭಕರಂ-ಪುಣ್ಯಕರವಾದ, ಕರ್ಮ-ಕಾರ್ಯವನ್ನು. ನಿತ್ಯಂ—ಪ್ರತಿದಿನದಲ್ಲಿ
ಯೂ, ಅತಂದ್ರಿತಃ-ಜಾಗರೂಕನಾಗಿ, ಕುರ್ಯಾತ್-ಮಾಡಬೇಕು, ಅ
ನ್ಯತ್-ಮತ್ತೆಯಾವದನ್ನು, ಶ್ರೋತುಂ-ಕೇಳುವದಕ್ಕೆ, ಇಚ್ಛಸಿ-ಬ
ಯಿಸುತ್ತೀ, ತತ್-ಅದನ್ನು, ತೆ-ನಿನಗೆ, ಸಾದರಂ-ಪ್ರೀತಿಪುರಸ್ಸರವಾ
ಗಿ, ವಕ್ಷ್ಯಾಮಿ-ಹೇಳುತ್ತೇನೆ ॥ ॥೪೬॥

ಇಂತು ಭವಿಷ್ಯೋತ್ತರಪುರಾಣದೊಳು ವೇಂಕಟೇಶ
ಮಹಾತ್ಮ್ಯೆಯ ವುತ್ತರಭಾಗದಲ್ಲಿ ಪುಣ್ಯ
ಪರಿಪಾಕಕಥನವೆಂಬ ಒಂಭತ್ತನೇ
ಅಧ್ಯಾಯವು.

---

ವೈಖಾನಸಮುನಿಯು ಹೇಳುತ್ತಲಿದ್ದಾನೆ ॥ ಧರ್ಮಾತ್ಮನಃ-ಧಾರ್ಮಿಕ
ನಾದವನ, ಸಮುತ್ಪತ್ತಿಂ-ಹುಟ್ಟುವಿಕೆಯನ್ನು, ಸ್ವರ್ಗತಿಂ-ಆತನಿಗೆ
ಆಗುವ ಸ್ವರ್ಗಾದಿಲೋಕಪ್ರಾಪ್ತಿಯನ್ನು,ಅದ್ಯ-ಈಗ,ಮೆ-ನನಗೆ,ವದ-
ಹೇಳು, ಸುಕೃತೀ-ಪುಣ್ಯವಂತನಾದ, ನರಃ-ಮನುಷ್ಯನು, ಅಸ್ಮಿನ್-
ಈ, ದೇಹೆ-ಶರೀರದಲ್ಲಿ, ಯಥಾ-ಹೇಗೆ, ವಿಚಾರಂ-ವಿಚಾರವನ್ನು, ಕ್ರಿ
ಯತೆ-ಮಾಡುತಾನೆ, ತತ್ಸರ್ವಂ-ಆವಿಚಾರ ವಿಷಯವನ್ನು, ಸರ್ವಶಾ
ಸ್ತ್ರಾರ್ಥನಿರ್ಣಯಂ-ಸಮಸ್ತ ಶಾಸ್ತ್ರಗಳಲ್ಲಿ ನಿಷ್ಕೃಷ್ಟಾಭಿ ಪ್ರಾ

ಕೃತೀನಿರಃ॥ತ್ಸತೆರ್ವಂಶ್ರೋತುಮಿಚ್ಛಸಿ ಮಿಸರ್ವಶಾಸ್ತ್ರಾ
ರ್ಥನಿರ್ಣಯಂ ॥ ೧ ॥ ಶ್ರೀನಿವಾಸೋವಾಚ ॥ ಪುರಾಕೃತೆ
ತುಗರುಡಃ ಪ್ರಶ್ನಮೇನಂಚಕಾರಹ। ತಾಂತೆಹಂ ಸಂಪ್ರ
ವಕ್ಷ್ಯಾಮಿಗೀತಾಂಗರುಡಬೋಧಿತಾಂ ॥ ೨ ॥ ಕಶ್ಯಪಸ್ಯಸು
ತೋಧೀಮಾನ್ವಿನತಾಯಾಸ್ತನೂಭವಃ।ಮದಾರಾಧನತೋ
ಭಕ್ತ್ಯಾಮಮವಾಹನತಾಂಗತಃ ॥ ಮಯಾತುಬೋಧಿತಃ

ಯುಪನ್ನು, ಶ್ರೋತುಂ-ಕೇಳುವದಕ್ಕೆ, ಇಚ್ಛಸಿ-ಬೈಯಿಸುತ್ತೀನೆ ॥ತಾ॥ ಧರ್ಮನಿರತನಾದವನು ಲೋಕದಲ್ಲಿ ಜನಿಸಿ ಯಾವರೀತಿಯಾಗಿ ವಿಚಾರಮಾಡುತ್ತಾನೆ, ಅವನು ಮಾಡುವ ನಿಷ್ಕೃಷ್ಟಾರ್ಥವನ್ನು ನನಿಗೆ ತಿಳಿಸುವವನಾಗು ॥ ॥೧॥

ಶ್ರೀನಿವಾಸೋವಾಚ-ಶ್ರೀನಿವಾಸ ಮೂರ್ತಿಯು ಹೇಳುತ್ತಲಿದ್ದಾನೆ, ಪುರಾ-ಹಿಂದಕ್ಕೆ, ಕೃತೆ-ಕೃಯುಗದಲ್ಲಿ, ಗರುಡಃ-ವೈನತೇಯನು, ಏನಂ-ಈ, ಪ್ರಶ್ನಂ-ಕೇಳುವಿಕೆಯನ್ನು,ಚಕಾರಹ-ಮಾಡಿದನು,ತಾಂ-ಆ ಗರುಡ-ಗರುಡನಿಗೆ-ಬೋಧಿತಾಂ-ಹೇಳಿದ ಗೀತಾಂ-ಗೀತೆಯನ್ನು ಅಹಂ-ನಾನು, ತೆ-ನಿನಗೆ, ಸಂಪ್ರವಕ್ಷ್ಯಾಮಿ-ಹೇಳುತ್ತೀನೆ, ॥ತಾ॥ ಕೃತಯುಗದಲ್ಲಿ ಗರುಡನು ಕೇಳಿದ್ದಕ್ಕೆ ಹೇಳಲ್ಪಟ್ಟ ಗರುಡಗೀತಾ ತಾತ್ಪರ್ಯವನ್ನು ನಿನಗೆ ಹೇಳುತ್ತೀನೆ ॥ ॥೨॥

ಕಶ್ಯಪಸ್ಯ-ಕಶ್ಯಪರುಷಿಗೆ, ಸುತಃ-ಮಗನಾದ, ವಿನತಾಯಾಃ-ವಿನತಾದೇವಿಗೆ, ತನೂಭವಃ-ಮಗನಾದ, ಧೀಮಾನ್-ಬುದ್ಧಿಶಾಲಿಯಾದ, ಗರುಡನು, ಭಕ್ತ್ಯಾ-ವಿಶ್ವಾಸದಿಂದ, ಮದಾರಾಧನತಃ-ನನ್ನನ್ನು ಸೇವಿಸಿದ್ದರಿಂದ, ಮಮ-ನನಿಗೆ, ವಾಹನತಾಂ-ವಾಹನಭಾವವನ್ನು,ಗತಃ-ಪಡದನು, ಮಯಾ-ನನ್ನಿಂದ,ಪ್ರೀತ್ಯಾ-ವಿಶ್ವಾಸದಿಂದ, ಭೋಧಿತಃ-ಬೋಧಿಸಲ್ಪಟ್ಟವನಾಗಿ, ಯೋಗಿಶ್ರೇಷ್ಠಃ-ಧ್ಯಾನಯೋಗಿಗಳಲ್ಲಿ ಶ್ರೇಷ್ಠನಾದವನು, ಬಭೂವಹ-ಆದನು॥ತಾ॥ಬುದ್ಧಿವಂತನಾಗಿಯೂ, ವಿನತಾಪುತ್ರನಾಗಿಯೂ ಕಶ್ಯಪತನುಜನಾಗಿಯೂ ಇರುವ ಗರುಡನು, ನನ್ನ ಭಕ್ತನಾಗಿರುವದ್ದರಿಂದ ನನ್ನಿಂದ ಬೋಧಿಸಲ್ಪಟ್ಟವನಾಗಿ, ಜ್ಞಾನಿ

ಪ್ರೀತ್ಯಾಯೊಗಿಶ್ರೆಷ್ಠೊಬಭೂವಹ ॥ ೩ ॥ ಮಾತುಃದುಃ
ಖಪ್ರದಾನ್ನಾಗಾನ್ಬಾಧಯಾಮಾಸಸರ್ವದಾ । ತದ್ಭ
ಯಾದುರಗಾಸ್ಸರ್ವೆಪಾತಾಳತಲಮಾಶ್ರಿತಾಃ ॥ ೪ ॥ ತಲ್ಪ
ಭೂತೊಮಹಾಶೆಷಃ ಮಮಸನ್ನಿಧಿಮಾಶ್ರಿತಃ । ಗರುಡ
ಸ್ಯಭಯಾದೆವವಿರೋಧಂಪರಮಂಗತಃ ॥೫॥ ಗರುಡಸ್ತು
ಪರಂಕ್ರೊಧಂ ತಸ್ಮಿನ್ಕುರ್ವನ್ಸಮಾಸ್ಥಿತಃ । ವಿರೊಧ

ಗಳೊಳಗೆ ಉತ್ತಮನಾಗಿರುತ್ತಿದ್ದನು ॥ ॥೩॥

ಮಾತುಃ-ತನ್ನ ತಾಯಿಯಾದವಿನತೆಗೆ, ದುಃಖಪ್ರದಾನ್-ಕ್ಲೇಶವ ನ್ನು ಉಂಟುಮಾಡುತ್ತಿದ್ದವರಾದ, ನಾಗಾನ್-ಸರ್ಪಗಳನ್ನು, ಸರ್ವದಾ-ಯಾವಾಗಲೂ, ಬಾಧಯಾಮಾಸ-ಪೀಡಿಸುತ್ತಿದ್ದನು, ತದ್ಭಯಾತ್-ಆಗರುಡನ ಭಯದಿಂದ, ಸರ್ವೆ-ಸಮಸ್ತಗಳಾದ, ಉರಗಾಃ-ಸರ್ಪಗಳು, ಪಾತಾಳತಲಂ-ಪಾತಾಳಲೋಕವನ್ನು,ಆಶ್ರಿತಾಃ-ಸೇರಿಕೊಂಡ ವರಾದರು ॥ತಾ॥ ಆಗರುಡನು ತಾಯಿಗೆ ದುಃಖವನ್ನುಂಟುಮಾಡಿದ ಸರ್ಪಗಳನ್ನು ಯಾವಾಗಲೂ ಬಾಧಿಸುತ್ತಿದ್ದನು, ಗರುಡನ ಬಾಧೆಗೆ ಸೆ ಹಿಸಲಾರದೆ ಸರ್ಪಗಳು ಪಾತಾಳ ಲೋಕವನ್ನು ಸೇರಿಕೊಂಡವು ॥೪॥

ಮಮ-ನನ್ನ, ಸನ್ನಿಧಿಂ-ಸಮೀಪವನ್ನು, ಆಶ್ರಿತಃ-ಸೇರಿದವನಾದನಾಗಿ, ಮಹಾಶೇಷಃ-ಆದಿಶೇಷನು, ಗರುಡಸ್ಯ-ಗರುಡನ, ಭಯಾದೇವ-ಅಂಜಿಕೆಯಿಂದಲೆ, ಪರಮಂ-ಅತಿಶಯವಾದ, ವಿರೋಧಂ-ವೈರವನ್ನು, ಗತಃ-ಪಡದವನಾಗಿ, ತಲ್ಪಭೂತಃ-ನನಿಗೆ ಹಾಸಿಯಾಗಿರುತ್ತಿದ್ದನು ॥ತಾ॥ ಆದಿಶೇಷನು-ಗರುಡನ ಭಯದಿಂದ ನನಿಗೆ ಹಾಸಿಗೆಯಾಗಿದ್ದು ಕೊಂಡು ಸೇವಿಸುತ್ತಿದ್ದನು ॥ ॥೫॥

ಗರುಡಸ್ತು--ವೈನತೇಯನಾದರೇನೋ, ಪರಂ--ಉತ್ತಮವಾದ, ಕ್ರೋಧಂ-ಕೋಪವನ್ನು, ತಸ್ಮಿನ್-ಆದಿಶೇಷನಮೇಲೆ, ಕುರ್ವನ್-ಮಾಡುತ್ತಿರುವವನಾಗಿ, ಸಮಾಸ್ಥಿತಃ-ಇರುತ್ತಿದ್ದನು, ಏವಂ-ಈ ರೀತಿಯಾಗಿ,ವಿರೋಧಯುಕ್ತಯೊಃ--ಕಲಹಮಾಡುತ್ತಿರುವವರಾದ, ವಿನತಾಸುತಶೇಷಯೊಃ--ಗರುಡಶೇಷರಿಗೆ, ಶಾಂತಿಃ-ಸಮಾಧಾನವು, ಪೂರ್ವಂ-ಹಿಂದಕ್ಕೆ, ನಾಭವತ್-ಆಗಲಿಲ್ಲ, ತದಾ-ಆಗ, ಗರುಡಂ-ವೈನತೇಯನ

ಯುಕ್ತ್ಯೋರೇವಂ ವಿನತಾಸುತಶೇಷಯೋಃ ॥ ನಶಾಂತಿರ
ಭವತ್ಸ್ವರ್ಗಂತದಾಗರುಡಮಬ್ರವಂ ॥೬॥ ಕಿಮರ್ಥಂಬಾಧ
ಯಸ್ಯೇಷಂಅಶಾಂತಃಪಕ್ಷಿರೂಪಧೃತ್॥ದೇಹಾತ್ಮಬುದ್ಧಿಂ
ಸಂತಜ್ಯ್ಯಭಾವಾಯಾತ್ಮಾನಮಾತ್ಮನಾ॥೭॥ ವೈನತೇಯಸ
ಮರ್ಥಸ್ತ್ವಂಯದ್ಯಪಿತ್ವಂಬಲಾಧಿಕಃ॥ ಮಯೈವಮುಕ್ತೋ

ನ್ನು ಕುರಿತು, ಅಹಂ–ನಾನು, ಅಬ್ರವಂ–ಹೇಳಿದೆನು. ॥ತಾ॥ ಈ ರೀ ತಿಯಾಗಿ ವಿರೋಧಮಾಡುತ್ತಿರುವ ಗರುಡಶೇಷರಿಗೆ ಸಮಾಧಾನವಾಗ ದೇ ಇರಲು, ಆಗ ನಾನು ಗರುಡನನ್ನು ಕುರಿತು ಹೇಳುವವನಾ ದೆನು ॥ ॥೬॥

ವೈನತೇಯ–ಎಲೈಗರುಡನೇ, ಪಕ್ಷಿರೂಪಧೃತ್–ಪಕ್ಷಿಯಜನ್ಮವುಳ್ಳವ ನಾಗಿದ್ದಾಗ್ಯೂ,ಅಶಾಂತಃ-ಸಮಾಧಾನವಿಲ್ಲದವನಾಗಿ,ಶೇಷಂ-ಆದಿಶೇಷನ ನ್ನು,ಬಾಧಯಸ್–ಬಾಧೆಪಡಿಸುತ್ತಿರುವವನಾಗಿಕಿಮರ್ಥಂ–ಯಾಕೆ,(ತಿಷ್ಠ ಸಿ–ಇರುತ್ತೀ,)ದೇಹಾತ್ಮಬುದ್ಧಿಂ–ದೇಹವೇ ಆತ್ಮವೆಂಬ ಜ್ಞಾನವನ್ನು, ಸಂತ್ಯಜ್ಯ–ಬಿಟ್ಟು,ಆತ್ಮಾನಂ–ಜೀವಾತ್ಮನನ್ನು, ಆತ್ಮನಾ–ಪರಮಾತ್ಮ ಭಾವದಿಂದ, ಭಾವಯ–ಧ್ಯಾನಿಸುವವನಾಗು.॥ತಾ॥ಎಲೈ ಗರುಡನೇ ! ಪ ಕ್ಷಿಜನ್ಮದಲ್ಲಿ ಇರುವವನಾಗಿದ್ದಾಗ್ಯೂ,ಶಾಂತನಾಗದೇ,ಆದಿಶೇಷನಸಂಗಡ ವಿರೋಧವನ್ನುಮಾಡುತ್ತೀ, ಹಾಗೆ ಮಾಡಬೇಡ,ದೇಹಾತ್ಮಭಾವವನ್ನು ಮಾಡದೆ ಜೀವಾತ್ಮನನ್ನು ಪರಮಾತ್ಮನನ್ನಾಗಿಭಾವಿಸುವವನಾಗು ॥೭॥

ವೈನತೇಯ–ಗರುಡನೇ, ತ್ವಂ–ನೀನು, ಸಮರ್ಥಃ–ಶಕ್ತನಾದವನು, ಯದ್ಯಪಿ–ಹೇಗಾದರೂ, ಬಲಾಧಿಕಃ–ಸಾಮರ್ಥ್ಯವುಳ್ಳವನು, ಮಯಾ– ನನ್ನಿಂದ, ಏವಂ–ಈ ರೀತಿಯಾಗಿ, ಉಕ್ತಃ–ಹೇಳಲ್ಪಟ್ಟವನಾದ, ಗರು ಡಃ–ವೈನತೆಯನು, ವಿನೀತವತ್–ವಿಧೇಯನಾಗಿರುವವನಂತೆ, ಮದನು ಗ್ರಹತಃ–ನನ್ನ ಅನುಗ್ರಹದಿಂದ, ತಾಮಸಭಾವತಾಂ–ತಮೋಗುಣ ಭಾವವನ್ನು, ಅತ್ಯಂತಂ–ಅತಿಶಯವಾಗಿ,ತ್ಯಕ್ತ್ವಾ–ಬಿಟ್ಟು, ಮಾಂ–ನ ನ್ನನ್ನು ಕುರಿತು, ಉವಾಚ–ಹೇಳಿದನು. ॥ತಾ॥ ಆಗ ಗರುಡನು ವಿಧೇ ಯನಾಗಿ ನನ್ನ ಅನುಗ್ರಹದಿಂದ ತಮೋವೃತ್ತಿಯನ್ನು ಬಿಟ್ಟು, ನನ್ನ

ಗರುಡೋವಾಚ ವಿನೀತವತ್ ॥ ಮದನುಗ್ರಹತೋ
ತ್ಯಂತಂತ್ಯಕ್ತ್ವಾತಾಮಸಭಾವತಾಂ ॥ ೯ ॥ ಗರುಡೋವಾ
ಚ ॥ ಪಕ್ಷಿಭಾವಃ ಕಥಂ ಭೂಯಾ ಸ್ಮನುಜತ್ವಂ ಯಥಾಭ
ವೇತ್ ॥ ದೇಹೇಸ್ಮಿನ್ಸುಕೃತೀಮರ್ತ್ಯಃ ವಿಚಾರನಿರತೋಭವೇ
ತ್॥೧೦॥ತಥಾವಿಧಸ್ಯದೇಹಸ್ಯಉತ್ಪತ್ತಿಂಯಾತನಾಮಪಿ।ಸು
ಖಂದುಃಖಂಬ್ರೂಹಿಲಾಭಂಜ್ಞಾನಸ್ಯಾಪಿಸುದುರ್ಲಭಂ॥೧೧॥
ಶ್ರೀನಿವಾಸಃ ॥ ಏವಂಪೃಷ್ಟಸ್ತುತಾರ್ಕ್ಷ್ಯೇಣಶೃಣುಷ್ವ

ನ್ನು ಕುರಿತು ಹೇಳಿದವನಾದನು ॥ ॥೯॥

ಗರುಡನು ಹೇಳುತ್ತಲಿದ್ದಾನೆ ॥ ಪಕ್ಷಿಭಾವಃ-ಪಕ್ಷಿಯ ತನವು, ಕ ಥಂ-ಹೇಗೆ, ಭೂಯಾತ್-ಉಂಟಾಗುವದು, ಮನುಜತ್ವಂ-ಮನುಷ್ಯ ತ್ವವು, ಯಥಾ-ಹೇಗೆ, ಭವೇತ್-ಉಂಟಾಗುವದು, ಅಸ್ಮಿನ್-ಈ,ದೇ ಹೇ-ಶರೀರದಲ್ಲಿ, ಮರ್ತ್ಯಃ-ಮನುಜನು, ಸುಕೃತೀ-ಪುಣ್ಯಶಾಲಿಯು, ವಿಚಾರನಿರತಃ-ಯುಕ್ತಾಯುಕ್ತ ವಿಚಾರವುಳ್ಳವನು, ಕಥಂಭವೇತ್-ಹೇಗೆ ಆದಾನು. ॥ತಾ॥ ಪಕ್ಷಿಜನ್ಮವು, ಮನುಷ್ಯಜನ್ಮವು ಹೇಗೆ ಉಂಟಾಗುತ್ತೆ, ಮನುಷ್ಯನು ಯಾತರಿಂದ ಸುಕೃತಿಯೂ, ವಿಚಾರಪರ ನೂ ಆಗುತ್ತಾನೆ ॥ ॥೧೦॥

ತಥಾವಿಧಸ್ಯ--ಅಂಥಾದ್ದದ, ದೇಹಸ್ಯ--ಶರೀರದ, ಉತ್ಪತ್ತಿಂ-ಜ ನ್ಮವನ್ನು, ಯಾತನಾಮಪಿ-ಬಾಧೆಯನ್ನು, ಸುಖಂ-ಸುಖವನ್ನು, ದುಃ ಖಂ-ಶೋಕವನ್ನು, ಜ್ಞಾನಸ್ಯ-ಜ್ಞಾನದ, ಸುದುರ್ಲಭಂ-ಲಭಿಸಲಸಾ ಧ್ಯವಾದ, ಲಾಭಂ-ಪ್ರಯೋಜನವನ್ನು, ಬ್ರೂಹಿ-ಹೇಳು. ॥ತಾ॥ ಅಂ ಥಾ ಶರೀರದ ಉತ್ಪತ್ತಿಯನ್ನು, ದೇಹಕ್ಕೆ ಉಂಟಾಗುವ ಯಾತನೆಯ ನ್ನು, ಸುಖವನ್ನು, ದುಃಖವನ್ನು, ಬಾಧೆಯನ್ನು, ವಿಚಾರದಿಂದ ಉಂ ಟಾಗುವ ಜ್ಞಾನದಿಂದ ಹೊಂದುವ ಪ್ರಯೋಜನವನ್ನು ಹೇಳುವವ ನಾಗು ॥ ॥೧೧॥

ಶ್ರೀನಿವಾಸಃ-ಶ್ರೀನಿವಾಸನು ಹೇಳುತ್ತಲಿದ್ದಾನೆ॥ ತಾರ್ಕ್ಷ್ಯೇಣ-ಗ ರುಡನಿಂದ, ಏವಂ-ಈ ರೀತಿಯಾಗಿ, ಪೃಷ್ಟಃ-ಕೇಳಲ್ಪಟ್ಟವನಾದ ನಾ ನು, ಶೃಣುಷ್ವ-ಕೇಳು, ಇತಿ-ಹೀಗೆಂದು, ತಂ-ಆ ಗರುಡನನ್ನು ಕುರಿ

ತಿತಮಬ್ರುವಂ ॥ ೧೨ ॥ ಬ್ರಹ್ಮಾಂಡಗುಣಸಂಯುಕ್ತಂ
ಯೋಗಿನಾಂ ಧಾರಣಾಸ್ಪದಂ ॥ ದೇಹಸ್ವರೂಪಂ ವಕ್ಷ್ಯಾಮಿ
ಯೋಗಿನಾಂಧಾರಣಾಸ್ಪದಂ ॥ ೧೩ ॥ ಷಟ್ಚಕ್ರಚಿಂತನಂಯ
ಸ್ಮಿನ್ಯಥಾಕುರ್ವಂತಿಯೋಗಿನಃ ॥ ಬ್ರಹ್ಮರಂಧ್ರೇಚಿದಾನಂ
ದರೂಪಧ್ಯಾನಾದಿಕಂಶೃಣು ॥೧೪॥ ಶುಚೀನಾಂಶ್ರೀಮತಾಂ

ತಂ, ಅಬ್ರುವಂ-ಹೇಳಿದವನಾದೆನು. ॥ತಾ॥ ಗರುಡನಿಂದ ಕೇಳಲ್ಪಟ್ಟವ ನಾದ ನಾನು ಗರುಡನನ್ನು ಕುರಿತು ಹೇಳಿದವನಾದೆನು ॥ ॥೧೨॥

ಬ್ರಹ್ಮಾಂಡಗುಣಸಂಯುಕ್ತಂ--ಬ್ರಹ್ಮಾಂಡದಲ್ಲಿ ಉಂಟಾಗಿರುವ ಗುಣಗಳಿಂದ ಕೂಡಿರುವದಾದ, ಯೋಗಿನಾಂ-ಧ್ಯಾನಯೋಗಿಗಳಿಗೆ, ಧಾ ರಣಾಸ್ಪದಂ-ಸಂಪ್ರಜ್ಞಾತಾಸಂಪ್ರಜ್ಞಾತ ಸಮಾಧಿಗಳಿಗೆ ಆಧಾರವಾಗಿ ರುವದಾದ, ಯೋಗಿನಾಂ-ಯೋಗನಿಷ್ಠರಾದವರಿಗೆ,ಧಾರಣಾಸ್ಪದಂ-ಜೀ ವನು ದೇಹವನ್ನು ಬಿಟ್ಟು ಹೋಗದಂತೆ ಧರಿಸುವದಕ್ಕೆ ಆಧಾರವಾಗಿ ರುವ,ದೇಹಸ್ವರೂಪಂ-ಶರೀರಸ್ವರೂಪವನ್ನು,ವಕ್ಷ್ಯಾಮಿ-ಹೇಳುತ್ತೇನೆ. ತಾ॥ ಪೃಥಿವ್ಯಪ್ತೇಜೋವಾಯ್ವಾಕಾಶಾದಿ ಭೂತಪರಿಣಾಮಾತ್ಮಕವಾ ದ, ಧ್ಯಾನಧಾರಣೆಗೆ ಯೋಗ್ಯವಾದ, ಜೀವಾತ್ಮನು ದೇಹವನ್ನು ಬಿಟ್ಟು ಹೋಗದಂತೆ ಧರಿಸಲು ಆಕರವಾದ, ದೇಹಸ್ವರೂಪವನ್ನು ಹೇಳು ತ್ತೇನೆ ॥ ॥೧೩॥

ಯೋಗಿನಃ-ಯೋಗನಿಷ್ಠರಾದವರು, ಯಸ್ಮಿನ್-ಯಾವ ದೇಹದಲ್ಲಿ, ಷಟ್ಚಕ್ರಚಿಂತನಂ-ಮೂಲಾಧಾರಸ್ವಾಧಿಷ್ಠಾನ, ಮಣಿಪೂರ, ಅನಾಹ ತ, ಆಜ್ಞಾ, ಸಹಸ್ರಾರ ಚಕ್ರಗಳಲ್ಲಿ ಮೂರ್ತಿಧ್ಯಾನವನ್ನು, ಯಥಾ- ಹೇಗೆ, ಕುರ್ವಂತಿ-ಮಾಡುತ್ತಾರೋ, (ಅದನ್ನು ಹೇಳುತ್ತೇನೆ,) ಬ್ರಹ್ಮ ರಂಧ್ರೇ-ಸಹಸ್ರಾರಚಕ್ರದಲ್ಲಿ, ಚಿದಾನಂದರೂಪ-ಜ್ಞಾನಸ್ವರೂಪನಾದ, ಆತ್ಮನ, ಧ್ಯಾನ-ಧ್ಯಾನದ, ವಿಧಿಂ-ವಿಧಾನವನ್ನು, ಶೃಣು-ಕೇಳು. ॥ತಾ॥ ಯೋಗಿಗಳು ಮೂಲಾಧಾರಾದಿ ಚಕ್ರಗಳಲ್ಲಿ ದೇವತಾಮೂರ್ತಿಧ್ಯಾನವ ನ್ನು ಹೇಗೆ ಮಾಡುತ್ತಾರೋ,ಅಂಥಾದ್ದನ್ನು ಸಹಸ್ರಾರದಲ್ಲಿ ಪರಮಾ ತ್ಮಧ್ಯಾನವಿಧಾನವನ್ನು, ಹೇಳುತ್ತೇನೆ ಕೇಳು ॥ ॥೧೪॥

ಶುಚೀನಾಂ-ಪರಿಶುದ್ಧರಾದ, ಶ್ರೀಮತಾಂ-ಸಂಪದ್ಯುಕ್ತರಾದವರ

ಗೇಹೇಸುಕೃತೀಜಾಯೇತೆಯಥಾ ॥ ತಥಾವಿಧಸ್ಯಚೋತ್ಪತ್ತೌ ತತ್ಪಿತೋರ್ನಿಯಮಂವರಂ। ಯಥಾವಿಧಿಪ್ರವಕ್ಷ್ಯಾಮಿಸಾವಧಾನಮನಾಶೃಣು ॥ ೧೫ ॥ ತಚ್ಛೃತ್ವಾಪ್ರಾಣಿನಾಂಹಿಂಸಾಂನಕರಿಷ್ಯಸಿಭೂತಲೆ। ರುತುಕಾಲೆತುನಾರೀಣಾಂತ್ಯಜೇದ್ದಿನಚತುಷ್ಟಯಂ ॥೧೬॥ ಪ್ರಥಮೇಹನಿಚಾಂಡಾಲೀದ್ವಿತೀಯೆ ಬ್ರಹ್ಮಘಾತಕೀ । ತೃತೀಯೆರಜಕೀಪ್ರೋಕ್ತಾ ಚತು

ಗೇಹೆ–ಮನೆಯಲ್ಲಿ, ಸುಕೃತೀ–ಪುಣ್ಯಶಾಲಿಯು, ಯಥಾ–ಹೇಗೆ, ಜಾಯೆತೆ–ಹುಟ್ಟುತ್ತಾನೋ, ತಥಾವಿಧಸ್ಯ–ಅಂಥಾವನಾದ ಮನುಷ್ಯನ, ಉತ್ಪತ್ತೌ–ಹುಟ್ಟಬೇಕಾದ ವಿಷಯದಲ್ಲಿ, ತತ್ಪಿತ್ರೋಃ–ಅಂಥಾ ಪುರುಷನು ಹುಟ್ಟಬೇಕಾದವನ ತಂದೆ ತಾಯಿಗಳ, ವರಂ–ಉತ್ತಮವಾದ, ನಿಯಮಂ–ವ್ರತವನ್ನು, ಯಥಾವಿಧಿ–ಶಾಸ್ತ್ರವಿಧಿಯನುಸಾರವಾಗಿ, ಪ್ರವಕ್ಷ್ಯಾಮಿ–ಹೇಳುತ್ತೇನೆ, ಸಾವಧಾನಮನಾಃ–ಸ್ಥಿರಚಿತ್ತವುಳ್ಳವನಾಗಿ, ಶೃಣು–ಕೇಳು. ।ತಾ॥ ಪುಣ್ಯಶಾಲಿಯಾದವನು ಪರಿಶುದ್ಧನಾಗಿಯೂ, ಶ್ರೀಮಂತನಾಗಿಯೂ ಇರುವವನ ಮನೆಯಲ್ಲಿ, ಹೇಗೆ ಹುಟ್ಟುತ್ತಾನೋ, ಆ ರೀತಿಯನ್ನು, ಅಂಥಾವನು ಜನಿಸಬೇಕಾದವನ ತಂದೆತಾಯಿಗಳು ನಡಿಸಬೇಕಾದ ನಿಯಮವನ್ನು ಹೇಳುತ್ತೇನೆ, ಏಕಾಗ್ರಚಿತ್ತನಾಗಿ ಕೇಳುವವನಾಗು ಹೇಳುತ್ತೇನೆ ॥ ॥೧೫॥

ತಚ್ಛೃತ್ವಾ–ಅದನ್ನು ಕೇಳಿದಬಳಿಕ, ಪ್ರಾಣಿನಾಂ–ಜೀವಿಗಳಿಗೆ, ಹಿಂಸಾಂ–ಬಾಧೆಯನ್ನು, ಭೂತಲೆ–ನೆಲದಲ್ಲಿ, ನಕರಿಷ್ಯಸಿ–ಮಾಡುವವನಾಗುವದಿಲ್ಲ, ರುತುಕಾಲೆತು–ರಜಸ್ವಲೆಯಾದ ಸಮಯದಲ್ಲಿ, ದಿನಚತುಷ್ಟಯಂ–ನಾಲ್ಕು ದಿನಗಳನ್ನು, ತ್ಯಜೇತ್–ಬಿಡಬೇಕು. ॥ತಾ॥ ಅದನ್ನು ನೀನು ಕೇಳಿದವನಾದರೆ ಪ್ರಾಣಿಗಳಿಗೆ ಬಾಧೆಯನ್ನು ಮಾಡುವವನಾಗುವದಿಲ್ಲ, ತನ್ನ ಸತಿಯು ರುತುವಾದ ದಿನ ಮೊದಲಾಗಿ, ನಾಲ್ಕು ದಿನಗಳವರಿಗೂ, ಆವಳ ಸಂಗಡ ಸ್ಪರ್ಶನವಾಸಾದಿಗಳನ್ನು ಬಿಡಬೇಕು ॥ ॥೧೬॥

ಪ್ರಥಮೇಹನಿ–ರುತುವಾದ ಮೊದಲನೇ ದಿನದಲ್ಲಿ, ಚಾಂಡಾಲೀ–ಚಂಡಾಲಸ್ತ್ರೀಯಂತೆ ಇರುವಳು, ದ್ವಿತೀಯೆ–ಎರಡನೇ ದಿನದಲ್ಲಿ, ಬ್ರ

ರ್ಥೇಹನಿಶುಧ್ಯತಿ ॥ ೧೭ ॥ ತಾವನ್ನಾಲೋಕಯೇತ್ಪತ್ನೀಂತ
ಸ್ಯಪಾಪಂಪ್ರಜಾಯತೇ । ಸಪ್ತಾಹಮಧ್ಯೇಯೋಗಚ್ಛೇತ್ಸ
ಭವೇನ್ಮಲಿನಾಶಯಃ ॥೧೮॥ ಅಷ್ಟಾಹಮಧ್ಯತಃಪುತ್ರಾಃಸಂ
ಭವತಿನಸಂಶಯಃ । ಯುಗ್ಮಾಸುಪುತ್ರಾಜಾಯಂತೇ ಸ್ತ್ರಿ

ಹ್ಮಘಾತಕೀ–ಬ್ರಹ್ಮಹತ್ಯಾ ಪಾಪವನ್ನು ಮಾಡಿದವಳಂತೆ ಇರುವಳು, ತೃತೀಯೇ–ಮೂರನೇ ದಿನದಲ್ಲಿ, ರಜಕೀ–ಮಡಿವಾಳಿಯ ಹೆಂಗಸಿನಂತೆ ಇರುವಳು, (ಎಂಬದಾಗಿ,) ಪ್ರೋಕ್ತಾ–ಹೇಳಲ್ಪಡುವಳು, ಚತುರ್ಥೇಹನಿ–ನಾಲ್ಕನೇ ದಿನದಲ್ಲಿ, ಶುಧ್ಯತಿ–ಮನೆಯಲ್ಲಿರಲು ಪರಿಶುದ್ಧಳಾಗುವಳು. ॥ತಾ॥ ಇಂದ್ರನು ವೃತ್ರನೆಂಬ ಬ್ರಹ್ಮರಾಕ್ಷಸನನ್ನು ಕೊಂದದ್ದರಿಂದ ಬ್ರಹ್ಮಹತ್ಯೆಯು ಇಂದ್ರನನ್ನು ಬಾಧಿಸುತ್ತಿರಲು, ದೇವತೆಗಳು ಅದನ್ನು ವೃಕ್ಷಗಳಿಗೂ, ಭೂಮಿಗೂ, ನೀರಿಗೂ, ಸ್ತ್ರೀರಿಗೂ ಹಂಚಿಕೊಟ್ಟರು. ಆದ್ದರಿಂದ ಸ್ತ್ರೀರು ಹೊಲೆಯಾದ ಮೂರು ದಿನಗಳವರಿಗೂ, ಕ್ರಮವಾಗಿ ಚಂಡಾಲ, ಬ್ರಹ್ಮಹತ್ಯ, ಮಡಿವಾಳಿಗಳ ಸ್ವರೂಪವಾಗಿರುತ್ತಾರೆ, ನಾಲ್ಕನೇ ದಿನದಲ್ಲಿ ಶುದ್ಧರಾಗುವರು ॥ ॥೧೭॥

ತಾವತ್–ಮೂರು ದಿನಗಳು ಕಳೆಯುವವರಿಗೂ, ಪತ್ನೀಂ–ಹೆಂಡತಿಯನ್ನು, ನಾಲೋಕಯೇತ್–ನೋಡಕೂಡದು, ತಸ್ಯ–ಹಾಗೆ ನಡೆಯದವನಿಗೆ, ಪಾಪಂ–ಪಾತಕವು, ಪ್ರಜಾಯತೇ–ಉಂಟಾಗುವದು, ಸಪ್ತಾಹಮಧ್ಯೇ–ಏಳು ದಿನಗಳು ಕಳೆಯುವಷ್ಟರೊಳಗಾಗಿ, ಯಃ–ಯಾವ ಮನುಷ್ಯನು, ಗಚ್ಛೇತ್–ಸಂಗಮಮಾಡುತ್ತಾನೋ, ಸಃ–ಅವನು, ಮಲಿನಾಶಯಃ–ಪಾಪಕರವಾದ ಮನೋಭಿಪ್ರಾಯವುಳ್ಳವನಾಗುವನು. ತಾ॥ ರುತುವಾದ ಏಳು ದಿನಗಳು ಕಳೆಯುವದರೊಳಗಾಗಿ, ಸಂಗಮಮಾಡಿದವನು ಪಾಪಿಯಾಗುತ್ತಾನೆ. ಆದ್ದರಿಂದ ಏಳು ದಿನಗಳು ಕಳೆಯುವದರೊಳಗಾಗಿ ಸಂಗಮಿಸಿಕೂಡದು ॥ ॥೧೮॥

ಅಷ್ಟಾಹಮಧ್ಯತಃ–ಏಳು ದಿನಗಳು ಕಳೆದದ್ದು ಮೊದಲಾಗಿ ಎಂಟುದಿನಗಳೊಳಗೆ, ಪುತ್ರಾಃ–ಗಂಡುಮಕ್ಕಳು, ಸಂಭಂವತಿ–ಹುಟ್ಟುತ್ತಾರೆ, ನಸಂಶಯಃ–ಸಂದೇಹವಿಲ್ಲ, ಯುಗ್ಮಾಸು–ರಾತ್ರಿಷು–೮–೧೦–೧೨–೧೪–೧೬ನೇ ದಿನಗಳಲ್ಲಿ, ಪುತ್ರಾಃ–ಗಂಡುಮಕ್ಕಳು, ಜಾಯಂ

ಯೇಯುಗ್ಮಾಸುರಾತ್ರಿಷು॥೧೯॥ ಪೂರ್ವಸಪ್ತಕಮುತ್ಸೃ
ಜ್ಯತಸ್ಮಾದ್ಯುಗ್ಮೇ ಸುಸಂವಿಶೇತ್ ॥ ನಿಶಾಃಷೋಡಶ ಸಂ
ಖ್ಯಾಕಾಃ ಸಾಮಾನ್ಯಾಸ್ಸಮುದಾಹೃತಾಃ ॥೨೦॥ ಚತುರ್ದ
ಶೀತಿಥೌರಾತ್ರೌ ಗರ್ಭಸ್ತಿಷ್ಠತಿಕರ್ಮತಃ॥ ಗುಣಭಾಗ್ಯನಿ
ಧಿಃಶ್ರೀಮಾನ್ಧಾರ್ಮಿಕಸ್ತನಯೋಭವೇತ್॥೨೧॥ಸಾನಿಶಾಪ್ರಾ
ಕೃತೈರಲ್ಪೈರ್ಜೀವೈರ್ನಪ್ರಾಪ್ಯತೇಕದಾ॥ ಮಹಾಸುಕೃತಿ

ತೇ-ಹುಟ್ಟುತ್ತಾರೆ, ಅಯುಗ್ಮಾಸು ರಾತ್ರಿಷು-೯-೧೧-೧೩-೧೫ನೇ ದಿನಗಳಲ್ಲಿ, ಸ್ತ್ರಿಯಃ-ಹೆಣ್ಣುಮಕ್ಕಳು, ಜಾಯಂತೆ-ಹುಟ್ಟುತ್ತಾರೆ. ॥ತಾ॥ ಋತುವಾದ ಏಳನೇ ದಿನದಿಂದ ಆಚೆಗೆ, ಪುತ್ರರು ಹುಟ್ಟುತ್ತಾರೆ, ಸಮದಿನಗಳಲ್ಲಿ ಗಂಡುಮಕ್ಕಳುವಿಷಮದಿನಗಳಲ್ಲಿಹೆಣ್ಣುಮಕ್ಕಳು, ಹುಟ್ಟುವರು ॥ ॥೧೯॥

ಪೂರ್ವಸಪ್ತಕಂ-ಋತುವಾದ ಮೊದಲ್ಗೊಂಡು ಏಳು ದಿನಗಳನ್ನು, ಉತ್ಸೃಜ್ಯ-ಬಿಟ್ಟು, ತಸ್ಮಾತ್-ಆ ಕಾರಣದಿಂದ, ಯುಗ್ಮಾಸು-ಸಮ ವಿಷಮಗಳೆಂಬ ಯುಗ್ಮತಿಥಿಗಳಲ್ಲಿ, ಸಂವಿಶೇತ್-ಸಂಗಮಮಾಡಬೇಕು, ಷೋಡಶಸಂಖ್ಯಾಕಾಃ-ಹದಿನಾರು ಸಂಖ್ಯೆಯುಳ್ಳ, ನಿಶಾಃ-ರಾತ್ರಿಗಳು, ಸಾಮಾನ್ಯಾಃ-ಸಾಮಾನ್ಯಗಳೆಂಬದಾಗಿ, ಸಮುದಾಹೃತಾಃ-ಹೇಳಲ್ಪಡುತ್ತವೆ. ॥ತಾ॥ ಋತುವಾದ ಏಳು ದಿನಗಳನ್ನು ಬಿಟ್ಟು, ಯುಗ್ಮತಿಥಿಗಳಲ್ಲಿ ಅಂದರೆ ಸಮವಿಷಮದಿನಗಳಲ್ಲಿ ಪುಂಸ್ತ್ರೀಸಂತಾನಾರ್ಥಿಯಾದವನು ಸ್ತ್ರೀಸಂಗಮವನ್ನು ರಾತ್ರಿಯಲ್ಲಿ ಮಾಡಬೇಕು ॥ ॥೨೦॥

ಚತುರ್ದಶೀತಿಥೌ-ಹದಿನಾಲ್ಕನೇ ದಿನದಲ್ಲಿ,ರಾತ್ರೌ-ನಿಶೆಯಲ್ಲಿ,ಕರ್ಮತಃ-ಕರ್ಮಬಲದಿಂದ, ಗರ್ಭಃ-ಗರ್ಭವು, ತಿಷ್ಠತಿ-ನಿಲ್ಲುವುದು, ಗುಣಭಾಗ್ಯನಿಧಿಃ-ಸದ್ಗುಣಗಳಿಗೂ, ಸಂಪತ್ತಿಗೂ, ಆಕರನಾಗಿರುವ, ಧಾರ್ಮಿಕಃ-ಧರ್ಮಿಷ್ಠನಾದ, ಶ್ರೀಮಾನ್-ಕಾಂತಿಯುಳ್ಳವನಾದ, ತನಯಃ-ಮಗನು, ಭವೇತ್-ಆಗುವನು. ॥ತಾ॥ ಋತುವಾದ ಹದಿನಾಲ್ಕನೇ ದಿನದ ರಾತ್ರಿಯಲ್ಲಿ ಗರ್ಭವು ನಿಲ್ಲುವುದು, ಹಾಗಾದರೆ ಭಾಗ್ಯವಂತನಾಗಿಯೂ, ಗುಣಶಾಲಿಯಾಗಿರುವ ಮಗನು ಜನಿಸುತ್ತಾನೆ ॥ ॥೨೧॥

ಸಾನಿಶಾ-ಅಂಥಾ ರಾತ್ರಿಯು, ಪ್ರಾಕೃತೈಃ-ಸಾಧಾರಣವಾಗಿರುವ,

ಭಿಸ್ತಸ್ಯಾಂಜನಿರ್ಭ-ಪತಿವ್ರೈಸಮುನೆ ॥೨೨॥ ಪಂಚಮೆಹನಿನಾ
ರೀಣಾಂಕಾರ್ಯಂ ಮಧುರಭೋಜನಂ । ಕಟುಭಾರಂ ಚತೀ
ಕ್ಷ್ಣಂಚತ್ಯಾಜ್ಯಮುಷ್ಣಂಚದೂರತಃ ॥ ೨೩ ॥ ತತ್‌ಕ್ಷೇ
ತ್ರಮೌಷಧೀಪಾತ್ರಂಬೀಜಂಚಾಪ್ಯಮೃತಾಯಿತಂ । ತ

ಅಲ್ಪೈಃ-ಸ್ವಲ್ಪರಾಗಿರುವ, ಜನ್ಯೈಃ-ಜನಗಳಿಂದ, ಕದಾ-ಯಾವಾಗಲೂ, ನಪ್ರಾಪ್ಯತೆ-ಹೊಂದಲ್ಪಡುವದಿಲ್ಲ, ಮುನೆ-ಮನನಶೀಲನಾದ ವೈಖಾನ ಸಮುನಿಯೇ, ತಸ್ಯಾಂ-ಅಂಥಾ ಹದಿನಾಲ್ಕನೇ ದಿನದ ರಾತ್ರಿಯಲ್ಲಿ, ಜನಿಃ-ಉತ್ಪತ್ತಿಯು, ಮಹಾಸುಕೃತಿಭಿಃ-ಅತಿಪುಣ್ಯಶಾಲಿಗಳಿಂದ, ಭವತಿ-ಆಗುವದು. ॥ತಾ॥ ಸುಕೃತಿಗಳಲ್ಲದ ಜನರಿಗೆ ಅಂಥಾ ರಾತ್ರಿಯು, ಗರ್ಭಕ್ಕೆ ಅನುಕೂಲವಾಗುವದಿಲ್ಲ. ಪುಣ್ಯಶಾಲಿಗಳಾದ ಜನರು ಉತ್ಪತ್ತಿಯಾಗುವಾಗ ಅಂಥಾ ದಿನವು ಲಭಿಸುವುದು॥ ॥೨೨॥

ನಾರೀಣಾಂ-ಹೆಂಗಸರಿಗೆ, ಪಂಚಮೆಹನಿ-ಅಯಿದನೇ ದಿನದಲ್ಲಿ, ಮಧುರಭೋಜನಂ-ಹಾಲುಗೋಧಿ ಸಕ್ಕರೆ ಮುಂತಾದ ಮಧುರಾಹಾರದ ಊಟವು, ಕಾರ್ಯಂ-ಮಾಡಲ್ಪಡತಕ್ಕದ್ದು, ಕಟು-ಖಾರವನ್ನು, ಭಾರ-ಭಾರವಾದ್ದನ್ನು ಹೊರುವುದನ್ನು, ತೀಕ್ಷ್ಣಂ-ಕ್ರೂರವಾದದ್ದನ್ನು, ಉಷ್ಣಂ-ಅತಿಬಿಶಿಯಾದದ್ದನ್ನು, ದೂರತಃ-ದೂರದಲ್ಲಿ, ತ್ಯಾಜ್ಯಂ-ಬಿಡತಕ್ಕದ್ದು ॥ತಾ॥ ಸ್ತ್ರೀರು ರುತುವಾದ ಅಯಿದನೇ ದಿನದಲ್ಲಿ ಆಕೆಳೆ ಹಾಲು ಗೋಧಿವೆ ಮುಂತಾದ ಮನೋಹರವಾದ ಆಹಾರಗಳನ್ನು ಮಾಡುತ್ತಾ ಅತಿಖಾರಮುಂತಾದ ಉಷ್ಣಪದಾರ್ಥಗಳನ್ನು ತಿನ್ನದೇ ಇರಬೇಕು ॥ ॥೨೩॥

ತತ್‌ಕ್ಷೇತ್ರಂ-ಹಾಗೆ ಇರತಕ್ಕ ಹೆಂಗಸಿನ ಕ್ಷೇತ್ರವು, ಓಷಧೀಪಾತ್ರಂ-ಓಷಧಿಗೆ ಸಮವಾದ ಸ್ಥಳವಾಗಿರುತ್ತೆ, ಬೀಜಂಚಾಪಿ-ಅಂಥಾಕ್ಷೇತ್ರದಲ್ಲಿ ಬೀಳುವ ಪುರುಷನ ಬೀಜವು, ಅಮೃತಾಯಿತಂ-ಅಮೃತತುಲ್ಯವಾಗಿರುವದು, ಪತಿಃ-ಗಂಡನಾದವನು, ಬೀಜಂ-ಬೀಜವನ್ನು, ತಸ್ಮಿನ್-ಅಂಥಾಕ್ಷೇತ್ರದಲ್ಲಿ, ಉಪ್ತ್ವಾ-ಇರಿಸಿ, ಉತ್ತಮಂ-ಶ್ರೇಷ್ಠವಾದ, ಫಲಂ-ಪ್ರಯೋಜನವನ್ನು, ಆಪ್ನುಯಾತ್-ಪಡೆಯುವನು. ॥ತಾ॥ ಹಾಗೆ ಪರಿಶುದ್ಧವಾಗಿರುವ ಕ್ಷೇತ್ರದಲ್ಲಿ ಬೀಜನ್ನು ಇಟ್ಟು ಉತ್ತಮ

ಸ್ತ್ರೀಣಾಂ ಪ್ರತಿಪತ್ತಿರ್ಬೀಜಂಫಲಮುತ್ತಮಮವಾಪ್ನುಯಾ
ತ್ ॥೨೮॥ ತಾಂಬೂಲಪುಷ್ಪಶ್ರೀಗಂಧೈಃಸಂಯುಕ್ತಶ್ಶು
ಚಿವಸ್ತ್ರಧೃತ್ । ಧರ್ಮಮಾದಾಯ ಮನಸಿಪ್ರವಿಶೇತ್ತಲ್ಪ
ಮುತ್ತಮಂ ॥೨೯॥ ನಿಷೇಕಸಮಯೇ ಮರ್ತ್ಯೋ ಯಾದೃಕ್ಚಿ
ತ್ತವಿಶೇಷಕಃ। ತಾದೃಕ್ಸ್ವಭಾವ ಸಂಯುಕ್ತೋಜಂತುರ್ವಿ
ಶತಿಚೋದರಂ ॥ ೩೦ ॥ ಬೀಜಭೂತಂಸುಚೈತನ್ಯಂಶುಕ್ರೇ
ಸಮ್ಯಗ್ವ್ಯವಸ್ಥಿತಂ । ಕಾಮಶ್ಚಿತ್ತಂಚಶುಕ್ರಂಚಯದಾ
ಏಕತ್ವಮಾಪ್ನುಯಾತ್ ॥ ತದಾದ್ರಾವಮವಾಪ್ನೋತಿಯೋ

ವಾದ ಪ್ರಯೋಜನವನ್ನು ಪಡೆಯುತ್ತಾನೆ ॥ ॥೨೮॥

ತಾಂಬೂಲ ಪುಷ್ಪ ಶ್ರೀಗಂಧೈಃ-ಎಲೆ ಅಡಿಕೆ ಹೂವ್ವುಗಂಧಗಳಿಂದ, ಸಂಯುಕ್ತಃ-ಕೂಡಿದವನಾಗಿ, ಶುಚಿವಸ್ತ್ರಧೃತ್-ನಿರ್ಮಲವಸ್ತ್ರಗಳ ನ್ನು ಧರಿಸಿದವನಾಗಿ, ಮನಸಿ-ಚಿತ್ತದಲ್ಲಿ, ಧರ್ಮಂ-ಧರ್ಮದೇವತೆಯನ್ನು, ಆದಾಯ-ಧ್ಯಾನಿಸಿ, ಉತ್ತಮಂ-ಶ್ರೇಷ್ಠವಾದ, ತಲ್ಪಂ-ಹಾಸಿಗೆಯನ್ನು ಪ್ರವಿಶೇತ್-ಸೇರಬೇಕು ॥ ॥೨೯॥

ನಿಷೇಕಸಮಯೇ-ರೇತಃಪತನಕಾಲದಲ್ಲಿ, ಮರ್ತ್ಯಃ-ಮನುಷ್ಯನು, ಯಾದೃಕ್ಚಿತ್ತ ವಿಶೇಷಕಃ-ಯಾವರೀತಿಯಾದ ಮನೋವೃತ್ತಿಯುಳ್ಳವ ನಾಗಿರುತ್ತಾನೋ, ಜಂತುಃ-ಪ್ರಾಣಿಯು, ತಾದೃಕ್-ಅಂಥಾ,ಸ್ವಭಾವ ಸಂಯುಕ್ತಃ-ಶೀಲದಿಂದ ಕೂಡಿರುವದಾಗಿ, ಉದರಂ-ಗರ್ಭಾಶಯವ ನ್ನು, ವಿಶತಿ ಪ್ರವೇಶಿಸುತ್ತದೆ. ॥ತಾ॥ ನಿಷೇಕಸಮಯದಲ್ಲಿ ಮನ ಸ್ಸು ಯಾವರೀತಿಯಾಗಿ ಮಾತಾಪಿತೃಗಳಿಗೆ ಉಂಟಾಗಿರುತ್ತೊ ಅಂಥಾ ಸ್ವಭಾವವುಳ್ಳದ್ದಾಗಿ ಆಪ್ರಾಣಿಯುಗರ್ಭದಲ್ಲಿ ಪ್ರವೇಶಿಸುವುದು॥ ॥೩೦॥

ಬೀಜಭೂತಂ-ಪಿಂಡೋತ್ಪತ್ತಿಗೆ ಹೇತುವಾದ, ಸುಚೈತನ್ಯಂ-ಚೇ ತನತೆಯು, ಶುಕ್ರೇ-ವೀರ್ಯದಲ್ಲಿ, ಸಮ್ಯಕ್-ಚನ್ನಾಗಿ, ವ್ಯವಸ್ಥಿತಂ-ಇ ರುವದು, ಕಾಮಃ-ಕಾಮವು, ಚಿತ್ತಂ-ಮನಸ್ಸು,ಶುಕ್ರಂಚ-ವೀರ್ಯವು, ಯದಾ-ಯಾವಾಗ, ಏಕತ್ವಂ-ಏಕೀಭಾವವನ್ನು, ಆಪ್ನುಯಾತ್-ಪಡೆ ಯುವದೊ, ಪೂರುಷ-ಪುರುಷನು, ತದಾ-ಆಗ, ಯೋಷಿದ್ಗರ್ಭಾಶ ಯೇ-ಹೆಂಗಸಿನ, ಗರ್ಭಕೋಶದಲ್ಲಿ ದ್ರವೀಭಾವವನ್ನು, ಅವಾಪ್ನೋತಿ-

ಷಿದ್ಗರ್ಭಂ ಶಯೊಪುಮಾನ್ ॥ ೨೩ ॥ ಶುಕ್ರಶೋಣಿತಸಂ
ಯೋಗಾತ್ಪಿಂಡೋತ್ಪತ್ತಿಃ ಪ್ರಜಾಯತೆ । ಪರಮಾನಂದದಃ
ಪುತ್ರೋಭವೇದ್ಗರ್ಭಗತಃಕೃತೀ ॥ ೨೪ ॥ ಭವಂತಿತಸ್ಯಸ
ಕಲಾಃ ಕ್ರಿಯಾಃಪುಂಸವನಾದಿಕಾಃ । ಜನ್ಮ ಪ್ರಾಪ್ನೋ
ತಿಸುಕೃತೀಗ್ರಹೇಷೂಚ್ಚಗತೇಷುಚ ॥ ೨೫ ॥ ತಜ್ಜನ್ಮಸಮ
ಯೇವಿಪ್ರಾಃಪ್ರಾಪ್ನುವಂತಿಧನಂಬಹು। ವಿದ್ಯಾವಿನಯಸಂ

ಪಡೆಯುವನು. ॥ತಾ॥ ಕಾಮಚಿತ್ತವೀರ್ಯಗಳು ಯಾವಾಗ ಏಕೀಭಾ
ವವನ್ನು ಹೊಂದುವವೋ, ಆಗ ಹೆಂಗಸಿನ ಗರ್ಭಕೋಶದಲ್ಲಿ, ದ್ರವಿ
ಸಲ್ಪಡುತ್ತದೆ ॥ ॥೨೩॥

ಶುಕ್ರಶೋಣಿತಸಂಯೋಗಾತ್-ಪುರುಷನ ವೀರ್ಯದ, ಹೆಂಗಸಿನ
ಶೋಣಿತದ ಸಂಬಂಧವುಂಟಾಗುವದ್ದರಿಂದ,ಪಿಂಡೋತ್ಪತ್ತಿಃ-ಗರ್ಭೋ
ತ್ಪತ್ತಿಯು,ಪ್ರಜಾಯತೆ-ಉಂಟಾಗುವದು, ಕೃತೀ-ಪುಣ್ಯಶಾಲಿಯಾದವ
ನು, ಗರ್ಭಗತಃ-ಗರ್ಭವನ್ನು ಹೊಂದಿದವನಾದರೆ, ಪರಮಾನಂದದಃ-
ಮಾತಾಪಿತೃಗಳಿಗೆ ಇಹಪರಗಳಲ್ಲಿ ಸಂತೋಷವನ್ನುಂಟುಮಾಡುವವನಾ
ದ,ಪುತ್ರಃ-ಮಗನು.ಭವೇತ್-ಆದಾನು. ॥ತಾ॥ ಶುಕ್ರಶೋಣಿತ ಸಂ
ಯೋಗದಿಂದ, ಪಿಂಡೋತ್ಪತ್ತಿಯಾಗುವದು, ಪುಣ್ಯಶಾಲಿಯಾದವನು ಗ
ರ್ಭಗತನಾದರೆ ತಂದೆತಾಯಿಗಳಿಗೆ ಇಹಪರಗಳಲ್ಲಿಯೂ ಆನಂದವನ್ನು
ಮಾಡುವ ಮಗನಾಗುತ್ತಾನೆ॥ ॥೨೪॥

ತಸ್ಯ-ಸುಕೃತಿಯಾದವನಿಗೆ, ಸಕಲಾಃ-ಸಮಸ್ತಗಳಾದ, ಪುಂಸವ
ನಾದಿಕಾಃ-ಪುಂಸವನವೇ ಮೊದಲಾದ, ಕ್ರಿಯಾಃ-ಕರ್ಮಗಳು, ಭವಂತಿ-
ಆಗುವವು, ಸುಕೃತೀ-ಪುಣ್ಯಶಾಲಿಯಾದವನು, ಗ್ರಹೇಷು-ಆದಿತ್ಯಾದಿ
ಗ್ರಹಗಳು, ಉಚ್ಚಗತೇಷು--ಉಚ್ಚಸ್ಥಿತಿಯನ್ನು ಹೊಂದಿರಲೂ, ಜ
ನ್ಮ-ಜನನವನ್ನು, ಪ್ರಾಪ್ನೋತಿ-ಹೊಂದುವನು. ॥ತಾ॥ ಸುಕೃತಿಯಾ
ದವನಿಗೆ ಪುಂಸವನಾದಿ ಸಮಸ್ತ ಕರ್ಮಗಳು ನಡೆಯುವವು, ಮತ್ತು ಗ್ರ
ಹಗಳು ಉಚ್ಚಗಳಾಗಿರಲು ಜನಿಸುವನು ॥ ॥೨೫॥

ತಜ್ಜನ್ಮಸಮಯೆ-ಆ ಸುಕೃತಿಯಾದವನು, ಜನಿಸುವಾಗ್ಯೆ, ವಿ
ಪ್ರಾಃ-ಬ್ರಾಹ್ಮಣರು, ಬಹು-ಅಧಿಕವಾದ, ಧನಂ-ಹಣವನ್ನು, ಪ್ರಾ

ಪನ್ನೋವರ್ಧಿತೋ ಪಿತೃವೇಶ್ಮನಿ । ಸತಾಂಸಂಗೇನಸಭವೇತ್ಸ
ರ್ವಾಗಮವಿಶಾರದಃ ॥೩೦॥ ದಿವ್ಯಾಂಗನಾದಿಭೋಕ್ತಾಸ್ಯಾ
ತ್ತಾರುಣ್ಯೇದಾನವಾನ್ಧನೀ।ಪೂರ್ವಂಕೃತತಪಸ್ತೀರ್ಥಸಮ
ಹಾಪುಣ್ಯ ಫಲೋದಯಾತ್॥೩೧॥ತತಶ್ಚಯತತೋನಿತ್ಯಮಾ
ತ್ಮಾನಾತ್ಮ ವಿಚಾರಣೇ। ಅಧ್ಯಾರೋಪಾಪವಾದಾಭ್ಯಾಂಕ್ರಿ)

ಪ್ನುವಂತಿ--ಪಡೆಯುತ್ತಾರೆ, ವಿದ್ಯಾವಿನಯೆ--ವಿದ್ಯೆಯಿಂದಲೂ ನೀತಿ ಯಿಂದಲೂ, ಸಂಪನ್ನಃ-ಕೂಡಿದವನಾಗಿ, ಪಿತೃವೇಶ್ಮನಿ-ತಂದೆಯ ಮನೆ ಯಲ್ಲಿ, ವರ್ಧಿತಃ-ಬೆಳೆದವನಾಗಿ, ಸತಾಂ-ಸತ್ಪುರುಷರ, ಸಂಗೇನ-ಸಂ ಬಂಧದಿಂದ, ಸಃ-ಆ ಬಾಲಕನು, ಸರ್ವಾಗಮವಿಶಾರದಃ-ಸಮಸ್ತ ವೇ ದಾಗಮಗಳನ್ನು, ತಿಳಿದವನು. ಭವೇತ್-ಆಗುವನು. ॥ತಾ॥ ಸುಕೃತಿ ಯು ಹುಟ್ಟುವ ಸಮಯದಲ್ಲಿ ಬ್ರಾಹ್ಮಣರು ಬಹಳ ಹಣವನ್ನು ಪಡೆ ಯುವರು, ಸತ್ಪುರುಷರ ಸಹವಾಸದಿಂದ ಆ ಬಾಲಕನು, ಸಮಸ್ತ ವೇ ದಾಗಮಗಳನ್ನು ತಿಳಿದವನಾಗುವನು ॥ ॥೩೦॥

ಪೂರ್ವಂ-ಹಿಂದಿನ ಜನ್ಮದಲ್ಲಿ, ಕೃತ-ಮಾಡಲ್ಪಟ್ಟ, ತಪಃ-ಮತ್ರಜ ಪದ, ಕೃಛ್ರಚಾಂದ್ರಾಯಣಾದಿ ರೂಪವಾದ ತಪಸ್ಸಿನ,ತೀರ್ಥ-ಗಂಗಾ ದಿ ಪುಣ್ಯೋದಕಸ್ನಾನದ, ಮಹಾಪುಣ್ಯ-ಅಧಿಕ ಸುಕೃತದ, ಫಲೋದ ಯಾತ್-ಫಲಾವಿರ್ಭಾವದಿಂದ,ತಾರುಣ್ಯೇ-ಯೌವನದಲ್ಲಿ, ದಿವ್ಯಾಂಗನಾ ದಿಭೋಕ್ತಾ-ದಿವ್ಯಸುಂದರ ಸ್ತ್ರೀ ಮೊದಲಾದವರ ಸಂಗಡ ಭೋಗವು ಳ್ಳವನು, ಧನಿ-ದ್ರವ್ಯವಂತನು, ದಾನವಾನ್-ದಾತೃತ್ವವುಳ್ಳವನು, ಸ್ಯಾ ತ್-ಆಗುವನು ॥ ॥೩೧॥

ತತಃ-ಆಬಳಿಕ, ನಿತ್ಯಂ-ಅನವರತವೂ, ಆತ್ಮಾನಾತ್ಮವಿಚಾಣೆ-ಇ ದು ಆತ್ಮವು, ಇದು ಆತ್ಮವಲ್ಲ ಎಂಬದಾಗಿ, ಯತತಃ-ಪ್ರಯತ್ನಪಡು ತ್ತಿರುವವನಿಂದ, ಅಧ್ಯಾರೋಪಾಪವಾದಾಭ್ಯಾಂ--ಅಧ್ಯಾರೋಪದಿಂದ ಲೂ, ಅಪವಾದದಿಂದಲೂ, ಬ್ರಹ್ಮಚಿಂತನಂ-ಬ್ರಹ್ಮವಿಚಾರವು, ಕ್ರಿ ಯತೆ-ಮಾಡಲ್ಪಡುತ್ತೆ. ॥ತಾ॥ ಆಬಳಿಕ ಯಾವಾಗಲೂ, ಇದು ಜಡ ವಾದ ದೇಹವು. ಇದು ಆತ್ಮವು ಎಂಬದಾಗಿ ವಿಚಾರಪರನಾದವನು, ಮಿ ಥ್ಯಾಭೂತವಾದ ಜಗತ್ತಿನಲ್ಲಿ ಸತ್ಯತ್ವಾರೋಪಣೆಯಿಂದಲೂ, ಜಡತ್ವಾ ದಿ ಅಪವಾದ ಧರ್ಮಗಳಿಂದಲೂ, ದೇಹಾತ್ಮಬುದ್ಧಿಯನ್ನು ಬಿಟ್ಟು, ವಾ

ಯತೆಬ್ರಹ್ಮಚಿಂತನಂ ॥೩೦॥ ಅಸ್ಯಾಸಂಗಾವಬೋಧಾಯ
ಬ್ರಹ್ಮಣೋನ್ವಯಕಾರಿಣಃ । ಕ್ಷಿತ್ಯಾದ್ಯ ನಾತ್ಮವರ್ಗಸ್ಯ
ಗುಣಾನ್ತೇ ಕಥಯಾಮ್ಯಹಂ ॥೩೩॥ ಕ್ಷಿತಿರ್ವಾರಿ ಹವಿರ್ಭೋ
ಕ್ತಾ ವಾಯುರಾಕಾಶಯೇವಚ । ಸ್ಥೂಲಾಭೂತಾ ಇಮೇ
ಪ್ರೋಕ್ತಾಃ ಪಿಂಡೋಯಂಪಾಂಚಭೌತಿಕಃ ॥೩೪॥ ತ್ವಗಸ್ಥಿ
ನಾಡಯೋರೋಮಮಾಂಸಂ ಚಾಪಿಮುನೀಶ್ವರ ॥ ಏತೆಪಂ

ಸ್ತವವಾದ ಬ್ರಹ್ಮಸ್ವರೂಪವನ್ನು ವಿಚಾರಮಾಡುತ್ತಿರುವನು ॥ ॥೩೦॥

ಬ್ರಹ್ಮಣಃ–ಬ್ರಹ್ಮನ, ಅನ್ವಯ–ವೇದಾಂತವಾಕ್ಯ ಸಮನ್ವಯವ ನ್ನು, ಕಾರಿಣಃ—ಮಾಡುತ್ತಿರುವವನಾದ, ಅಸ್ಯ–ಈ ಮನುಜನಿಗೆ, ಅ ಸಂಗಾವಬೋಧಾಯ–ದೇಹಾದಿವ್ಯತಿರಿಕ್ತವಾದ ಬ್ರಹ್ಮಜ್ಞಾನವುಂಟಾ ಗುವದಕ್ಕಾಗಿ, ಕ್ಷಿತ್ಯಾದ್ಯನಾತ್ಮವರ್ಗಸ್ಯ–ಕ್ಷಿತಿ–ಭೂಮಿಯೇ, ಆದಿ ಅಂ ದರೆ ನೀರು, ಬೆಂಕಿ, ವಾಯು, ಆಕಾಶಗಳೆಂಬ, ಅನಾತ್ಮವರ್ಗಸ್ಯ–ಜಡವ ಸ್ತುಸಮೂಹಗಳ, ಗುಣಾನ್–ಗುಣಗಳನ್ನು, ಅಹಂ–ನಾನು, ತೇ–ನಿನ ಗೆ, ಕಥಯಾಮಿ–ಹೇಳುತ್ತೇನೆ. ॥ತಾ॥ ಬ್ರಹ್ಮವಿಷಯಕವಾದ ವೇ ದಾಂತವಾಕ್ಯ ಸಮನ್ವಯವನ್ನು ಮಾಡಿಕೊಳ್ಳುತ್ತಿರುವವನಾದವನಿಗೆ, ಜಡವಸ್ತುಸಂಬಂಧವಿಲ್ಲದ ಆತ್ಮಸ್ವರೂಪಜ್ಞಾನವುಂಟಾಗುವದಕ್ಕಾಗಿ, ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳೆಂಬ ಜಡವಸ್ತುಗಳ ಗುಣ ಗಳನ್ನು ತಿಳಿಸುತ್ತೇನೆ ॥ ॥೩೩॥

ಕ್ಷಿತಿ–ಬೂಮಿಯು, ವಾರಿ–ಜಲವು, ಹವಿರ್ಭೋಕ್ತಾ–ಅಗ್ನಿಯು, ವಾ ಯುಃ–ಗಾಳಿಯು,ಆಕಾಶಯೇವಚ–ಗಗನವೂ,ಇಮೇ–ಇವುಗಳು ಐದು, ಸ್ಥೂಲಭೂತಾಃ–ಸ್ಥೂಲಭೂತಗಳೆನ್ನುವದಾಗಿ, ಪ್ರೋಕ್ತಾಃ–ಹೇಳಲ್ಪ ಟ್ಟಿರುವವು, ಅಯಂಪಿಂಡಃ—ಈ ಶರೀರವು, ಪಾಂಚಭೌತಿಕಃ—ಪಂ ಚಭೂತಗಳಿಂದ ಉಂಟಾಗಿರುವದು. ॥ತಾ॥ ಪೃಥಿವ್ಯಪ್ತೇಜೋವಾ ಯ್ವಾಕಾಶಾದಿ ಪಂಚಭೂತಗಳಿಂದ ಆಗಿರುವದ್ದರಿಂದ, ಈ ಶರೀರವು ಪಾಂಚಭೂತಿಕ ಶರೀರವೆನಿಸುವದು ॥ ॥೩೪॥

ಮುನೀಶ್ವರ–ಋಷಿಶ್ರೇಷ್ಠನಾದ, ವೈಖಾನಸಮುನಿಯೇ, ತ್ವಕ್–ಚ ರ್ಮವು, ಅಸ್ಥಿ–ಎಲುವುಗಳು, ನಾಡಯಃ–ನಾಡಿಗಳು,–ರೋಮ–ಕೂದ

ಪಂಚಗುಣಾ ಭೂಮೇಃ ಪ್ರಾಧಾನ್ಯೇನ ಮಯೋದಿತಾಃ ॥೨೫॥ ಮೂ
ತ್ರಂ ಲಾಲಾ ಚ ಶುಕ್ರಂ ಚ ರಕ್ತಂ ಮಜ್ಜಾ ಚ ಪಂಚಮಂ। ಪ್ರೋ
ಕ್ತಾಃ ಅಪಾಂ ಪಂಚಗುಣಾಃ ತೇಜಸೋಪಿ ವದಾಮಿ ತೇ ॥ ೨೬ ॥
ತೃಷ್ಣಾಲಸ್ಯಂ ಕ್ಷುಧಾ ನಿದ್ರಾ ಕಾಂತಿ ಶ್ಚಾಪಿ ಮುನೀಶ್ವರ ।
ತೇಜಃ ಪಂಚ ಗುಣಾಃ ಪ್ರೋಕ್ತಾಃ ದೇಹತತ್ವಾರ್ಥ ವಿತ್ತ
ಮೈಃ ॥೨೭॥ ಆಕುಂಚನಂ ಧಾವನಂ ಚ ಲಂಘನಂ ಚ ಪ್ರಸಾ
ರಣಂ । ವಾಯೋಃ ಪಂಚ ಗುಣಾಃ ಪ್ರೋಕ್ತಾಃ ಚೇಷ್ಟಿತಂ
ಮುನಿಪುಂಗವೈಃ ॥೨೮॥ ಚಿಂತಾ ಘೋಷಶ್ಚ ಶೂನ್ಯತ್ವಂ ಮೋ

ಳು, ಮಾಂಸಂ ಚಾಪಿ-ಮಾಂಸಖಂಡವೂ, ಏತೇ-ಇವು, ಭೂಮೇಃ-ಭೂಮಿ
ಯ, ಪಂಚಗುಣಾಃ-ಐದು ಗುಣಗಳು, ಪ್ರಾಧಾನ್ಯೇನ-ಮುಖ್ಯದಿಂದ,
ಮಯಾ-ನನ್ನಿಂದ, ಉದಿತಾಃ-ಹೇಳಲ್ಪಟ್ಟವು ॥ ॥೨೫॥

ಮೂತ್ರಂ-ಜಲಬಾಧೆಯು, ಲಾಲಾ-ಜೊಲ್ಲು, ಶುಕ್ರಂ-ವೀರ್ಯವು, ರಕ್ತಂ-ಶೋಣಿತವು, ಮಜ್ಜಾ-ಮಜ್ಜೆಯು, ಪಂಚಮಂ-ಇವು ಐದು, ಅಪಾಂ-ನೀರಿನ, ಪಂಚಗುಣಾಃ-ಐದು ಗುಣಗಳೆಂಬದಾಗಿ ಪ್ರೋಕ್ತಾಃ-ಹೇಳಲ್ಪಟ್ಟಿರುವವು, ತೇಜಸೋಪಿ-ಅಗ್ನಿಯ, ಗುಣಾನಪಿ-ಗುಣಗಳನ್ನು, ತೇ-ನಿನಗೆ, ವದಾಮಿ-ಹೇಳುತ್ತೇನೆ ॥ ॥೨೬॥

ಮುನೀಶ್ವರ-ವೈಖಾನಸಮುನಿಯೇ, ತೃಷ್ಣಾ-ಬಾಯಾರಿಕೆ, ಕ್ಷುಧಾ-ಹಸಿವಿಯು, ಆಲಸ್ಯಂ-ಅಲಸತೆಯು, ನಿದ್ರಾ-ನಿದ್ದೆಯು, ಕಾಂತಿಶ್ಚಾಪಿ-ಪ್ರಭೆಯು, ಹೊಳೆಯುವಿಕೆಯು, ದೇಹತತ್ವಾರ್ಥವಿತ್ತಮೈಃ-ದೇಹಲಕ್ಷಣವನ್ನು ತಿಳಿದವರಾದ ದೊಡ್ಡವರಿಂದ, ತೇಜಃಪಂಚಗುಣಾಃ-ಅಗ್ನಿಯ ಐದು ಗುಣಗಳೆಂಬದಾಗಿ, ಪ್ರೋಕ್ತಾಃ-ಹೇಳಲ್ಪಟ್ಟಿರವವು ॥೨೭॥

ಆಕುಂಚನಂ-ಮುದರಿಕೊಳ್ಳುವಿಕೆ, ಪ್ರಸಾರಣಂ-ಚಾಚುವಿಕೆ, ಧಾವನಂ-ಓಡಿಹೋಗುವಿಕೆ, ಲಘನಂ-ಹಾರುವಿಕೆ, ಚೇಷ್ಟಿತಂ-ಇತರ ಚಲನಾತ್ಮಕಕರ್ಮವು, ಮುನಿಪುಂಗವೈಃ-ಋಷಿಶ್ರೇಷ್ಠರಿಂದ, ವಾಯೋಃ-ಗಾಳಿಯ, ಪಂಚಗುಣಾಃ-ಐದು ಗುಣಗಳೆಂಬದಾಗಿ, ಪ್ರೋಕ್ತಾಃ-ಹೇಳಲ್ಪಟ್ಟಿರುವವು ॥ ॥೨೮॥

ಚಿಂತಾ-ಯೋಚನೆಯು, ಘೋಷಶ್ಚ-ಸಮಾಧಿಯ ಕಾಲದ ನಾದವು,

ಹಶ್ಶಬ್ದಶ್ಚಸ್ಸಂಶಯಃ । ಅಂಬರಸ್ಯ ಗುಣಾಃ ಪ್ರೋಕ್ತಾಃ ಪಂ
ಚತತ್ವವಿದಾಂವರ್ಯೈಃ ॥೩೯॥ ಮನೋಬುದ್ಧಿರಹಂಕಾರಶ್ಚಿ
ತ್ತಂಚೇತಿಚತುಷ್ಟಯಂ । ಅಂತಃಕರಣಮಾಖ್ಯಾತಂಪೂ
ರ್ವಕರ್ಮಾನುವಾಸಿತಂ॥೪೦॥ ಶ್ರೋತ್ರಂತ್ವಕ್ಚಕ್ಷುಜಿಹ್ವಾ
ಚಘ್ರಾಣಂ ಜ್ಞಾನೇಂದ್ರಿಯಾಣಿಚ । ವಾಕ್ಪಾಣಿಪಾದಪಾ
ಯೂಪಸ್ಥಾನಿ ಕರ್ಮೇಂದ್ರಿಯಾಣಿಚ ॥ ೪೧ ॥ ದಿಗ್ವಾತಾ
ರ್ಕಪ್ರಚೇತೋಶ್ವಿವಹ್ನೀಂ ದ್ರೋಪೇಂದ್ರ ಮಿತ್ರಕಾಃ ।

ಶೂನ್ಯತ್ವಂ-ಬೈಲಾಗಿರುವಿಕೆಯು, ಮೋಹಃ-ಮೋಹವು, ಶಬ್ದಃ-ಭೇರ್‍ಯಾದಿ ಶಬ್ದಗಳು, ಸಂಶಯಃ-ಸಂದೇಹವು, ಪಂಚ-ಇವು ಐದು, ತತ್ವವಿದಾಂ-ಇಪ್ಪತ್ತೈದು ತತ್ವಗಳನ್ನು ತಿಳಿದವರೊಳಗೆ,ವರ್ಯೈಃ-ಶ್ರೇಷ್ಠರಾದವರಿಂದ, ಅಂಬರಸ್ಯ-ಗಗನದ, ಗುಣಾಃ-ಗುಣಗಳೆಂಬದಾಗಿ, ಪ್ರೋಕ್ತಾಃ-ಹೇಳಲ್ಪಟ್ಟಿರುವವು ॥ ॥೩೯॥

ಮನಃ-ಮನಸ್ಸು, ಬುದ್ಧಿಃ-ಜ್ಞಾನವು,ಚಿತ್ತಂ-ಚಿತ್ತವು, ಅಹಂಕಾರಃ-ಅಭಿಮಾನವು, ಇತಿ-ಹೀಗೆಂದು, ಚತುಷ್ಟಯಂ-ನಾಲ್ಕು, ಪೂರ್ವಕರ್ಮ-ಹಿಂದಿನಜನ್ಮದ ಕರ್ಮದಿಂದ,ಅನುವಾಸಿತಂ-ವಾಸನೆಯುಳ್ಳದ್ದಾದ, ಅಂತಃಕರಣಂ--ಅಂತಃಕರಣವೆಂಬದಾಗಿ, ಆಖ್ಯಾತಂ-ಹೇಳಲ್ಪಟ್ಟಿರುವದು ॥ ॥೪೦॥

ಶ್ರೋತ್ರಂ-ಕಿವಿಯು, ತ್ವಕ್-ತ್ವಗಿಂದ್ರಿಯವು, ಚಕ್ಷು-ಕಣ್ಣು, ಜಿಹ್ವಾ-ನಾಲಿಗೆ, ಘ್ರಾಣಂ-ಮೂಗು, (ಇವು) ಜ್ಞಾನೇಂದ್ರಿಯಾಣಿಚ-ಜ್ಞಾನೇದ್ರಿಯಗಳೆನಿಸುವವು, ವಾಕ್-ಮಾತು, ಪಾಣಿ-ಕೈ, ಪಾದ-ಕಾಲು, ಪಾಯೂಪಸ್ಥಾನಿ-ಗುಪ್ತಸ್ಥಳಗಳು, ಕರ್ಮೇಂದ್ರಿಯಾಣಿಚ-ಕರ್ಮೇಂದ್ರಿಯಗಳೆನಿಸುವವು ॥ ॥೪೧॥

ದಿಕ್--ಪೂರ್ವಾದಿದಿಕ್ಕುಗಳ ಅಭಿಮಾನದೇವತೆಗಳು, ವಾತ-ವಾಯುವು, ಪ್ರಚೇತ-ವರುಣನು, ಅಶ್ವಿ-ಅಶ್ವಿನೀದೇವತೆಗಳು, ವಹ್ನಿ-ಅಗ್ನಿಯು, ಇಂದ್ರ-ದೇವೇಂದ್ರನು,ಉಪೇಂದ್ರ-ವಿಷ್ಣುವು, ಮಿತ್ರಕಾಃ-ಮಿತ್ರಬ್ರಹ್ಮರುಗಳು, ಜ್ಞಾನಕರ್ಮೇಂದ್ರಿಯಾಣಾಂಚ-ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ, ದೇವತಾಃ---ದೇವತೆಗಳೆಂಬದಾಗಿ, ಪರಿಕೀರ್ತಿ

ಜ್ಞಾನ ಕರ್ಮೇಂದ್ರಿಯಾಣಾಂಚ ವೇತ್ತಾಃ ಪರಿಕೀರ್ತಿ
ತಾಃ ॥೪೨॥ ಇಡಾ ಚ ಪಿಂಗಳಾ ಚೈವ ಸುಷುಮ್ನಾ ಖ್ಯಾ ಚ ನಾಡಿ
ಕಾ। ಗಾಂಧಾರೀ ಗಜಜಿಹ್ವಾ ಚ ಪೂಷಾ ಚ ಯಶಸ್ವಿನೀ ॥೪೩॥
ಅಲಂಬುಸಾ ಕುಹೂಶ್ಚಾಪಿ ಶಂಖಿನೀ ದಶಮೀ ತಥಾ॥ ಪಿಂಡಮ
ಧ್ಯೇಸ್ಥಿತಾ ಹ್ಯೇತಾಃ ಪ್ರಧಾನಾ ದಶನಾಡಿಕಾಃ ॥ ೪೪ ॥ ಪ್ರಾ
ಣೋ ಪಾನಸ್ಸಮಾನಶ್ಚ ಉದಾನೋ ವ್ಯಾನ ಸಂಜ್ಞಕಃ ।
ನಾಗಃ ಕೂರ್ಮಶ್ಚ ಕೃಕರಃ ದೇವದತ್ತೋ ಧನಂಜಯಃ ॥ ೪೫ ॥
ಹೃದಿ ಪ್ರಾಣೋ ಗುದೇಪಾನಸ್ಸಮಾನೋ ನಾಭಿಸಂಸ್ಥಿತಃ। ಉ
ದಾನಃ ಕಂಠದೇಶಸ್ಥಃ ವ್ಯಾನಸ್ಸರ್ವಶರೀರಗಃ॥೪೬॥ ಉದ್ಗಾ

ತಾಃ-ಹೇಳಲ್ಪಡುವವು ॥ ॥೪೨॥

ಇಡಾ-ಇಡೆಯೆಂಬ ನಾಡಿಯು, ಪಿಂಗಳಾ-ಪಿಂಗಳೆಯೆಂಬ ನಾಡಿಯು, ಸುಷುಮ್ನಾಖ್ಯಾಚ-ಸುಷುಮ್ನೆಯೆಂಬ, ನಾಡಿಕಾ-ನಾಡಿಯು, ಗಾಂಧಾರಿಯು, ಗಜಜಿಹ್ವೆಯು, ಪೂಷೆಯು, ಯಶಸ್ವಿನಿಯು ॥ ॥೪೩॥

ಅಲಂಬುಸೆಯು, ಕುಹುವು, ಶಖಿನೀ-ಶಂಖಿನಿಯೆಂಬ, ದಶಮೀ-ಹತ್ತನೇ ನಾಡಿಯೂ, ತಥಾ-ಹಾಗೆ, ಪಿಂಡಮಧ್ಯೇ-ಗರ್ಭಪಿಂಡದ ನಡುವೆ, ಪ್ರಧಾನಾಃ-ಮುಖ್ಯಗಳಾದ ದಶನಾಡಿಕಾಃ-ಹತ್ತುನಾಡಿಗಳು, ಸ್ಥಿತಾಃ-ಇರತಕ್ಕವು ॥ ॥೪೪॥

ಪ್ರಾಣಃ-ಪ್ರಾಣವಾಯುವು, ಅಪಾನಃ-ಅಪಾನವಾಯುವು, ಸಮಾನಶ್ಚ-ಸಮಾನವಾಯುವು, ಉದಾನಃ-ಉದಾನವಾಯುವು, ವ್ಯಾನಸಂಜ್ಞಕಃ-ವ್ಯಾನವೆಂಬವಾಯುವು, ನಾಗಃ-ನಾಗವಾಯುವು, ಕೂರ್ಮವು, ಕೃಕರವು, ದೇವದತ್ತವು, ಧನಂಜಯವಾಯುವು ॥ ॥೪೫॥

ಹೃದಿ-ಹೃದಯಸ್ಥಾನದಲ್ಲಿ, ಪ್ರಾಣಃ-ಪ್ರಾಣವಾಯುವು, ಗುದೇ-ಗುದಸ್ಥಾನದಲ್ಲಿ, ಅಪಾನಃ-ಅಪಾನವಾಯುವು ಇರುವದು, ಸಮಾನಃ-ಸಮಾನವಾಯುವು, ನಾಭಿಸಂಸ್ಥಿತಃ-ಹೊಕ್ಕಳಿನ ಪ್ರದೇಶದಲ್ಲಿರುವದು, ಉದಾನಃ-ಉದಾನವಾಯುವು, ಕಂಠದೇಶಸ್ಥಃ-ಕೊರಳಿನಲ್ಲಿ ಇರುವುದು, ವ್ಯಾನಃ-ವ್ಯಾನವಾಯುವು, ಸರ್ವಶರೀರಗಃ-ಸಕಲಶರೀರವನ್ನು ವ್ಯಾಪಿಸಿರುವದು ॥ ॥೪೬॥

ಉದ್ಗಾರೆ-ತೇಗುವುಂಟಾಗುವಾಗ್ಯೆ, ನಾಗಃ-ನಾಗವಾತವೆಂಬದಾಗಿ,

ರೇನಾಗಆಖ್ಯಾತಃಕೂರ್ಮಉನ್ಮೀಲನೇಸ್ಮೃತಃ । ಕೃಕರಃಕ್ಷು
ತ್ಕರೋಜ್ಞೇಯೋದೇವದತ್ತೋವಿಜೃಂಭಣೇ ॥ ೪೭ ॥ ನಜಹಾ
ತ್ಮೃತಂವಾಪಿಸರ್ವವ್ಯಾಪೀಧನಂಜಯಃ। ಕೇವಲಂಭುಕ್ತಮ
ನ್ನಂಹಿಪುಷ್ಟಿದಂಸರ್ವದೇಹಿನಾಂ ॥ ೪೮ ॥ ನಯನೇವ್ಯಾನ
ಕೋವಾಯುಸ್ಸಾರಾಂಶಂಸರ್ವನಾಡಿಷು । ಆಹಾರೋಭುಕ್ತ
ಮಾತ್ರೋಹಿವಾಯುನಾಕ್ರಿಯತೆದ್ವಿಧಾ॥೪೯॥ಸಪ್ರವಿಶ್ಯಗು
ದೇಸವ್ಯಕ್ಪೃಥಗನ್ನಂಪೃಥಗ್ಜಲಂ। ಊರ್ಧ್ವಮಗ್ನೇರ್ಜಲಂ

ಆಖ್ಯಾತಃ-ಹೇಳಲ್ಪಟ್ಟಿತು, ಉನ್ಮೀಲನೇ-ಎಚ್ಚರಿಕೆಯಲ್ಲಿ,ಕೂರ್ಮಃ-ಕೂರ್ಮ ವಾಯುವು ಸ್ಮೃತಃ-ಹೇಳಲ್ಪಡುವದು,ಕೃಕರಃ-ಕೃಕರವೆಂಬ ವಾಯು ವು,ಕ್ಷುತ್ಕರಃ-ಹಶಿವಿಯನ್ನುಂಟು ಮಾಡುವದೆಂಬದಾಗಿ,ಜ್ಞೇಯಃ-ತಿಳಿ ಯತಕ್ಕದ್ದು, ವಿಜೃಂಭಣೆ-ಆಕಳಿಸುವಾಗ್ಯೆ, ದೇವದತ್ತಃ-ದೇವದತ್ತ ವಾಯುವೆಂಬದಾಗಿ, ಸ್ಮೃತಃ-ಹೇಳಲ್ಪಡುವದು ॥ ॥೪೭॥

ಸರ್ವವ್ಯಾಪೀ-ಸಮಸ್ತದೇಹವನ್ನು ವ್ಯಾಪಿಸಿರುವ, ಧನಂಜಯಃ-ಧನಂಜಯವಾಯುವು, ಮೃತಂವಾಪಿ-ಜೀವಾತ್ಮನಿಲ್ಲದೆ ಇರುವ ಶರೀರ ವನ್ನು, ನಜಹಾತಿ-ಬಿಡುವದಿಲ್ಲ ॥ ಕೇವಲಂ-ಮುಖ್ಯವಾಗಿ, ಭುಕ್ತಂ-ತಿನ್ನಲ್ಪಟ್ಟ, ಅನ್ನಂಹಿ-ಆಹಾರವು, ಸರ್ವದೇಹಿನಾಂ-ಸಮಸ್ತ ಶರೀರ ಗಳಿಗೆ, ಪುಷ್ಟಿದಂ-ಪುಷ್ಟಿಯನ್ನುಂಟುಮಾಡುವದು ॥ ॥೪೮॥

ವ್ಯಾನಕಃ-ವ್ಯಾನವೆಂಬ, ವಾಯುವು, ಸರ್ವನಾಡಿಷು-ಸಮಸ್ತನಾಡೀ ಮಾರ್ಗಗಳಲ್ಲಿ,ಸಾರಾಂಶಂ-ಅನ್ನದ ಸ್ಥಿರವಾದರಸವನ್ನು ನಯನೇ-ತೆಗದುಕೊಂಡು ಹೋಗಿ ಶೇರಿಸುವ ವಿಷಯದಲ್ಲಿ ಪ್ರವರ್ತತೇ-ವರ್ತಿಸು ತ್ತಿರುತ್ತೆ ॥ ಆಹಾರಃ-ತಿಂದ ಅನ್ನವು, ಭುಕ್ತಮಾತ್ರೇಣ-ತಿಂದ ಮಾತ್ರ ದಿಂದ ವಾಯುನಾ-ವಾಯುವಿನಿಂದ, ದ್ವಿಧಾ-ಎರಡುವಿಧವಾಗಿ, ಕ್ರಿಯ ತೇ-ಮಾಡಲ್ಪಡುತ್ತೆ ॥ ॥೪೯॥

ಸಃ-ಆವಾಯುವು, ಪ್ರವಿಶ್ಯ-ಹೊಕ್ಕು, ಗುದೆ-ಗುದಸ್ಥಾನದಲ್ಲಿ, ಅನ್ನಂ-ಆಹಾರವನ್ನು, ಪೃಥಕ್-ಬೇರೆಯಾಗಿ, ಜಲಂ-ನೀರನ್ನು, ಪೃಥಕ್-ಬೇರೆಯಾಗಿ, (ಕೃತ್ವಾ-ಮಾಡಿ) ಅಗ್ನೇಃ-ಜಾಠರಾಗ್ನಿಗೆ,ಊರ್ಧ್ವಂ-ಮೇಲೆ, ಜಲಂ-ನೀರನ್ನು,ಕೃತ್ವಾ-ಮಾಡಿ,ಅನ್ನಂ-ಅಂನವನ್ನು,ಜಲೋ

ಕೃತ್ವಾಕೃತ್ವಾನ್ನಂಚಜಲೋಪರಿ||೫೦|| ಅಗ್ನೇಶ್ಚಾಧಃಸ್ವಯಂ
ಪ್ರಾಣಃಸ್ಥಿತ್ವಾಗ್ನಿಂಧಮತೆಶನೈಃ || ವಾಯುನಾಧ್ಮಾಯ
ಮಾನೋಗ್ನಿಃಪೃಥಕ್ಕಿಟ್ಟಂಪೃಥಗ್ರಸಂ |೫೧|| ಕುರುತೆವ್ಯಾ
ನತೋವಾಯುಃ ವಿಷ್ವಸ್ರಂ ಪ್ರಾಪಯೆದ್ರಸಂ | ದ್ವಾರೈರ್
ದ್ವಾದಶಭಿರ್ಭಿನ್ನಂಕಿಟ್ಟಂದೆಹಾದ್ಬಹಿಸ್ರವೆತ್ || ೫೨ || ಕ
ರ್ಣಾಕ್ಷಿನಾಸಿಕಾಜಿಹ್ವಾದಂತಾನಾಭಿರ್ನಖಾಗುದಂ | ಗು

ಪರಿ—ನೀರಿನಮೇಲೆ, ಕೃತ್ವಾ—ಮಾಡಿ | ||೫೦||

ಪ್ರಾಣಃ—ಪ್ರಾಣವಾಯುವು, ಸ್ವಯಂ—ತಾನು, ಅಗ್ನೇಃ—ಜಾಠರಾಗ್ನಿಗೆ, ಅಧಃ—ಕೆಳಗೆ, ಸ್ಥಿತ್ವಾ—ಇದ್ದುಕೊಂಡು, ಶನೈಃ—ಮೆಲ್ಲಗೆ, ಅಗ್ನಿಂ—ಬೆಂಕಿಯನ್ನು, ಧಮತೆ—ಉರಿಯುವಂತೆ ಮಾಡುತ್ತ, ವಾಯುನಾ—ವಾಯುವಿನಿಂದ, ಧ್ಮಾಯಮಾನಃ—ಹುತವಾಗಿಸಾಡಲ್ಪಟ್ಟ, ಅಗ್ನಿಃ—ಬೆಂಕಿಯು, ಕಿಟ್ಟಂ—ಮಲವನ್ನು, ಪೃಥಕ್—ಪ್ರತ್ಯೇಕವಾಗಿ, ರಸಂ—ಅನ್ನರಸವನ್ನು, ಪೃಥಕ್—ಬೇರೆಯಾಗಿ || ||೫೧||

ವ್ಯಾನತಃ—ವ್ಯಾನವಾಯುವಿನ ಕಡೆಯಿಂದ, ಕುರುತೆ ಮಾಡುತ್ತ, ವಾಯುಃ—ವ್ಯಾನವಾಯುವು, ರಸಂ—ಅನ್ನರಸವನ್ನು, ವಿಷ್ವಸ್ರಂ—ದೇಹದಲ್ಲಿ ವ್ಯಾಪಿಸಿರುವ ರಕ್ತವನ್ನು, ಪ್ರಾಪಯೇತ್—ಹೊಂದಿಸುತ್ತದೆ, ದ್ವಾದಶಭಿಃ—ಹನ್ನೆರಡಾದ, ದ್ವಾರೈಃ—ಬಾಗಲುಗಳಿಂದ, ಭಿನ್ನಂ—ತಟಾದ, ಕಿಟ್ಟಂ—ಮಲವು, ದೇಹಾತ್—ಶರೀರದಿಂದ, ಬಹಿಃ—ಹೊರಕ್ಕೆ, ಸ್ರವೇತ್—ಜಾರಿಹೋಗುವುದು || ||೫೨||

ಕರ್ಣ—ಕಿವಿಗಳು, ಅಕ್ಷಿ—ಕಣ್ಣುಗಳು, ನಾಸಿಕಾ—ಮೂಗು, ಜಿಹ್ವಾ—ನಾಲಿಗೆ, ದಂತಾಃ—ಹಲ್ಲುಗಳು, ನಾಭಿಃ—ಹೊಕ್ಕುಳು, ಗುದಂ—ಗುದಸ್ಥಾನವು, ಗುಹ್ಯಂ—ಶಿಶ್ನವು, ಯೋನಿಯು, ಶಿರಃ—ತಲೆಯು, ವಪುಃ—ಶರೀರವು, ರೋಮ—ಕೂದಲುಗಳು, ಇವುಗಳು, ಮಲಸ್ಥಾನಾನಿ—ಮಲವುಂಟಾಗುವಸ್ಥಳಗಳೆಂಬದಾಗಿ, ಚಕ್ಷತೆ—ಹೇಳಲ್ಪಡುವದು. ||ತಾ|| ಕಿವಿಯಲ್ಲಿ, ಗೊಗ್ಗಿಯು, ಕಣ್ಣಿನಲ್ಲಿ ಗೀಜು, ಮೂಗಿನಲ್ಲಿ ಶಿಂಬಳವು, ನಾಲಿಗೆಯಲ್ಲಿ—ಬಂಕೆಯು, ಹಲ್ಲುಗಳಲ್ಲಿ—ಹವುಚಿಯು, ಹೊಕ್ಕುಳಿನಲ್ಲಿ ಕಪ್ಪುಮಲವು, ಉಗುರುಗಳಲ್ಲಿ ಮಣ್ಣು ಮುಂತಾದವುಗಳು, ಗುದದಲ್ಲಿ, ಅಮೇಧ್ಯ

ಹ್ಯಂಶಿ ರೋಮಪುರೋ ಮಮಲಸ್ಥಾನಾನಿಚಕ್ಷತೆ ॥೫೩॥ ಎ
ವಂ ಸರ್ವೆ ಪ್ರವರ್ತಂತೆ ಸ್ವಸ್ವಕರ್ಮಸುವಾಯವಃ । ಉಪಲ
ಭ್ಯಾತ್ಮನಸತ್ತಾಂ ಸೂರ್ಯಾಲೋಕೆ ಯಥಾಜನಾಃ ॥ ೫೪ ॥
ಇದಾನೀಂನರದೆಹಸ್ಯಶ್ರೃಣುರೂಪದ್ವಯಂಮುನೆ ॥ ವ್ಯಾವ
ಹಾರಿಕಮಾದ್ಯಂಸ್ಯಾದ್ವಿತೀಯಂಪಾರಮಾರ್ಥಿಕಂ ॥೫೫॥
ತಿಸ್ರಕ್ಕೋಟ್ಯೊರ್ಥಕೋಟೀಚರೋಮಾಣಿವ್ಯಾವಹಾರಿಕೆ ॥
ಸಪ್ತ ಲಕ್ಷಾಣಿ ಕೇಶಾಸ್ಸ್ಯುರ್ನಖಾಸ್ತು ವಿಂಶತಿ ಸ್ಮೃ
ತಾಃ॥೫೬॥ದ್ವಾತ್ರಿಂಶದ್ದಶನಾಪ್ರೋಕ್ತಾಃ ವೈಖಾನಸಮು

ವು, ಶಿಶ್ನ ಯೊನಿಗಳಲ್ಲಿ ಒಂದು ವಿಧವಾದ ಮಲವು, ತಲೆಯಲ್ಲಿ ಶರೀರದ ಲ್ಲಿ ಕೂದಲುಗಳಲ್ಲಿ ಜೇಡಿಮಣ್ಣಿನಂತೆ ಇರುವ ಮೃತ್ತು, ಇವುಗಳು, ದೇಹದ ಮಲಗಳೆಂಬದಾಗಿ ಹೇಳಲ್ಪಡುತ್ತವೆ ॥ ॥೫೩॥

ಎವಂ–ಈ ರೀತಿಯಾಗಿ. ಸರ್ವೆ–ಸಮಸ್ತವಾದ ವಾಯುಗಳು, ಜ ನಾಃ–ಮನುಷ್ಯರು, ಸೂರ್ಯಾಲೋಕೆ–ಸೂರ್ಯನ ಬೆಳಕಿನಲ್ಲಿ, ಯಥಾ–ಹೇ ಗೆ, ಆತ್ಮನಃ–ತನ್ನ, ಸತ್ತಾಂ–ಸ್ಥಿತಿಯನ್ನು, ಉಪಲಭ್ಯ–ಹೊಂದಿ, ಯ ಥಾ–ಹೇಗೆ ಮಾಡುವರೋ ಹಾಗೆ ಸ್ವಸ್ವಕರ್ಮಸು–ತಮ್ಮತಮ್ಮ ಕೆಲಸ ಗಳಲ್ಲಿ, ಪ್ರವರ್ತಂತೆ–ನಡೆಯುತ್ತಿರುವವು ॥ ॥೫೪॥

ಮುನೆ–ವೈಖಾನಸಮುನಿಯೇ, ಇದಾನೀಂ–ಈಗ, ನರದೇಹಸ್ಯ–ಮ ನುಷ್ಯನ ಶರೀರದ, ರೂಪದ್ವಯಂ–ಎರಡು ರೂಪಗಳನ್ನು, ಶೃಣು– ಕೇಳು, ಆದ್ಯಂ–ಮೊದಲನೇ ರೂಪವು, ವ್ಯಾವಹಾರಿಕಂ–ವ್ಯವಹಾರ ಯೋಗ್ಯವಾದದ್ದಾಗಿರುವದು, ದ್ವಿತೀಯಂ–ಎರಡನೇ ರೂಪವು, ಪಾರ ಮಾರ್ಥಿಕಂ–ಪರಮಾರ್ಥಸಂಬಂಧವಾದದ್ದಾಗಿರುವದು ॥ ॥೫೫॥

ವ್ಯಾವಹಾರಿಕೆ–ವ್ಯವಹಾರಯೋಗ್ಯವಾದ, ರೂಪದಲ್ಲಿ, ತಿಸ್ರಕ್ಕೋ ಟ್ಯರ್ಥಕೋಟೀಚ–ಮೂರೂವರೆ ಕೋಟಿಯ ಸಂಖ್ಯೆಯಾದ, ರೋಮಾ ಣಿ–ರೋಮಕೂಪಗಳು, ಕೇಶಾಃ–ಕೂದಲುಗಳು, ಸಪ್ತಲಕ್ಷಾಣಿ–ಏಳು ಲಕ್ಷಗಳು, ನಖಾಸ್ತು–ಉಗುರುಗಳು, ವಿಂಶತಿಃ–ಇಪ್ಪತ್ತು, ಸ್ಮೃತಾಃ– ಉಂಟಾಗಿರುವವು॥ ॥೫೬॥

ದಶನಾಃ–ಹಲ್ಲುಗಳು, ದ್ವಾತ್ರಿಂಶತ್–ಮುವ್ವತ್ತೆರಡು, ಎಂಬದಾಗಿ,

ಹೇಶ್ವರ ಮಾಂಸಂಪಲಸಹಸ್ರಂತುರಕ್ತಂಪಲಶತಂಸ್ಮೃ
ತಂ ॥೫೨ ॥ ಪಲಾನಿದಶಮೇದಸ್ತುತ್ವಕ್ಪಲಾನಿಚಸಪ್ತತಿಃ।
ಪಲದ್ವಾದಶಕಂ ಮಜ್ಜಾಮಹಾರಕ್ತಂಪಲತ್ರಯಂ ॥೫೩॥
ಶುಕ್ರಂದ್ವಿಕುಡಪಂ ಜ್ಞೇಯಂ ಕುಡಪಂ ಶೋಣಿತಂಸ್ಮೃ
ತಂ। ಷಷ್ಟ್ಯುತ್ತರಂತ್ರಿಶತಮಸ್ಥ್ನಾಂದೇಹೇಪ್ರಕೀರ್ತಿ
ತಂ ॥ ೫೪ ॥ ಗಣೇಶಂಚವಿಧಿಂವಿಷ್ಣುಂಶಿವಂಜೀವಂಗುರುಂ
ತತಃ । ವ್ಯಾಪಕಂಚಪರಂಬ್ರಹ್ಮಕ್ರಮಾಚ್ಚಕ್ರೇಷುಚಿಂತ

ಪ್ರೋಕ್ತಾಃ-ಹೇಳಲ್ಪಟ್ಟಿರುವವು, ವೈಶಾನನಮಹೇಶ್ವರ-ವೈಶಾನನೆ ರುಷಿಯೇ. ಮಾಂಸಂ-ಮಾಂಸಖಂಡಗಳು, ಪಲಸಹಸ್ರಂತು-ಸಾವಿರ ಪಲಪ್ರಮಾಣವುಳ್ಳವಾಗಿರುವವು, ರಕ್ತಂ-ರುಧಿರವು, ಪಲಶತಂ-ನೂರು ಪಲಗಳೆಂಬದಾಗಿ, ಸ್ಮೃತಂ-ಹೇಳಲ್ಪಡುವದು, ಪಲವೆಂದರೆ ಹತ್ತು ವರಹಾ ತೂಕವು ॥ ॥೫೨॥

ಮೇದಃ-ಮೇದಸ್ಸು, ದಶಪಲಾನಿ-ಹತ್ತು ಪಲ ತೂಕವುಳ್ಳದ್ದು, ತ್ವಕ್-ಚರ್ಮವು, ಸಪ್ತತಿಃ-ಎಪ್ಪತ್ತಾದ, ಪಲಾನಿ-ಪಲಗಳು, ಮಜ್ಜಾ-ಮಜ್ಜೆಯು, ಪಲದ್ವಾದಶಕಂ-ಹನ್ನೆರಡು ಪಲಪ್ರಮಾಣವುಳ್ಳದ್ದಾಗಿರುವದು, ಮಹಾರಕ್ತಂ-ಹೃದಯದಲ್ಲಿ ಗಣಿಯಾಗಿರುವ ಮಹಾ ರುಧಿರವು, ಪಲತ್ರಯಂ-ಮೂರು ಪಲಪ್ರಮಾಣವುಳ್ಳದ್ದು ॥ ॥೫೩॥

ದೇಹೇ-ಶರೀರದಲ್ಲಿ, ಶುಕ್ರಂ-ವೀರ್ಯವು, ದ್ವಿಕುಡಪಂ-ಅರುವತ್ತನಾಲ್ಕು ತೊಲಗಳು,ಎಂದು, ಜ್ಞೇಯಂ-ತಿಳಿಯುತಕ್ಕದ್ದು, ಶೋಣಿತಂ-ರಕ್ತವು, ಕುಡಪಂ-ಕುಡಪಪ್ರಮಾಣವುಳ್ಳದ್ದೆಂಬದಾಗಿ, ಸ್ಮೃತಂ-ಹೇಳಲ್ಪಡುವದು.ಅಸ್ಥ್ನಾಂ-ಎಲುವುಗಳ. ಷಷ್ಟ್ಯುತ್ತರಂತ್ರಿಶತಂ-ಮುನ್ನೂರರವತ್ತು ಸಂಖ್ಯೆಯೆಂದು, ಪ್ರಕೀರ್ತಿತಂ-ಹೇಳಲ್ಪಟ್ಟಿತು ॥ ।೫೪॥

ಗಣೇಶಂ-ವಿಘ್ನೇಶ್ವರನನ್ನು, ವಿಧಿಂ-ಬ್ರಹ್ಮನನ್ನು, ವಿಷ್ಣುಂ-ಹರಿಯನ್ನು, ಶಿವಂ-ಹರನನ್ನು, ಜೀವಂ-ಬೃಹಸ್ಪತಿಯನ್ನು. ಗುರುಂ-ಆಚಾರ್ಯನನ್ನು, ತತಃ-ಆಬಳಿಕ. ವ್ಯಾಪಕಂ-ವ್ಯಾಪ್ತವಾಗಿರುವ, ಪರಂಬ್ರಹ್ಮ-ಪರಮಾತ್ಮನನ್ನು, ಕ್ರಮಾತ್-ಕ್ರಮವಾಗಿ, ಚಕ್ರೇಷು-ಮೂಲಾಧಾರಾದಿ ಆರು ಚಕ್ರಗಳಲ್ಲಿ, ಚಿಂತಯೇತ್-ಯೋಚಿಸಬೇಕು, ಅಂದರೆ ಧ್ಯಾನಿ

ಯೇತ್ ॥ ೬೦ ॥ ಏಕವಿಂಶತ್ಸಹಸ್ರಾಣಿಷಟ್ಛತಾನ್ಯಧಿಕಾನಿ ತು । ಅಹೋರಾತ್ರೇಣಶ್ವಾಸಸ್ಯ ಗತಿಸ್ಸೂಕ್ಷ್ಮಾಪ್ರಕೀರ್ತಿತಾ ॥೬೧॥ ಹಕಾರೇಣಬಹಿರ್ಯಾತಿಸಕಾರೇಣವಿಶೇತ್ಪುನಃ ।ಹಂಸಹಂಸೇತಿಮಂತ್ರಸ್ಯಜೀವೋಜಪಪರಾಯಣಃ ॥೬೨॥ ಷಟ್ಛತಂಗಣನಾಥಾಯಷಟ್ಸಹಸ್ರಂತುವೇಧಸೇ । ಷಟ್ಸಹಸ್ರಂಚಹರಯೇಷಟ್ಸಹಸ್ರಂಹರಾಯಚ॥ಜೀವಾತ್ಮನೇಸಹಸ್ರಂಚಸಹಸ್ರಂಗುರವೇತಥಾ।ಚಿದಾತ್ಮನೇಸಹಸ್ರಂಚಜಪಸಂಖ್ಯಾಂ ಸಬೇಕು ॥ ॥೬೦॥

ಶ್ವಾಸಸ್ಯ–ಶ್ವಾಸವಾಯುವಿನ,ಏಕವಿಂಶತ್ಸಹಸ್ರಾಣಿ–ಇಪ್ಪತ್ತೊಂದು ಸಾವಿರದ, ಷಟ್ಛತಾನ್ಯಧಿಕಾನಿತು–ಆರ್ನೂರು, ಅಹೋರಾತ್ರೇಣ–ಒಂದು ದಿನದಲ್ಲಿ, ಸೂಕ್ಷ್ಮಾ–ಸೂಕ್ಷ್ಮವಾದ, ಗತಿಃ–ಗಮನವು, ಎಂಬದಾಗಿ, ಪ್ರಕೀರ್ತಿತಾ–ಹೇಳಲ್ಪಟ್ಟಿರುವದು ॥ ॥೬೧॥

ಹಕಾರೇಣ–ಹವರ್ಣದಿಂದ, ಬಹಿಃ–ಹೊರಕ್ಕೆ,ಯಾತಿ–ಶ್ವಾಸವು ಬರುತ್ತೆ, ಸಕಾರೇಣ–ಸವರ್ಣದಿಂದ, ಪುನಃ–ಮತ್ತು, ವಿಶೇತ್–ಶ್ವಾಸವು ಪ್ರವೇಶವಾಗುವದು, ಹಂಸಹಂಸೇತಿಮಂತ್ರಸ್ಯ–ಹಂಸಹಂಸ ಎನ್ನುವ ಮಂತ್ರದ, ಜಪಪರಾಯಣಃ–ಜಪನಿರತನಾದವನು, ಜೀವಃ–ಜೀವನು. ತಾ॥ ಹಂಸಮಂತ್ರದ ವಿಷಯವನ್ನು ಅದಕ್ಕೆ ಅಧಿಕಾರಿಗಳಾದವರು, ಗುರುಸೇವೆಯಿಂದ ತಿಳಿಯತಕ್ಕದ್ದು, ಅನುಭವಿಯಾದ ಗುರುವು, ಯೋಗ್ಯನಾದ ಅಧಿಕಾರಿಗೆ ತಿಳಿಸುವನು, ಅನಧಿಕಾರಿಗಳು ಮನಸ್ವಿಯಾಗಿ ಪ್ರಯತ್ನಪಟ್ಟರೆ, ವಿಷಯ ಸ್ಫೂರ್ತಿಯಾಗದೆ ಕೆಡುತ್ತಾರೆ ॥ ॥೬೨॥

ಗಣನಾಥಾಯ–ವಿಘ್ನೇಶ್ವರನಿಗೆ, ಷಟ್ಛತಂ–ಆರ್ನೂರನ್ನು, ವೇಧಸೇ–ಬ್ರಹ್ಮನಿಗೆ, ಷಟ್ಸಹಸ್ರಂ–ಆರು ಸಾವಿರವನ್ನು, ಹರಯೇ–ವಿಷ್ಣುವಿಗೆ, ಷಟ್ಸಹಸ್ರಂ–ಆರು ಸಾವಿರವನ್ನು, ಹರಾಯ–ಶಿವನಿಗೆ, ಷಟ್ಸಹಸ್ರಂ–ಆರು ಸಾವಿರವನ್ನು, ಜೀವಾತ್ಮನೆ–ಜೀವಾತ್ಮನಿಗೆ, ಸಹಸ್ರಂಚ–ಸಾವಿರವನ್ನು, ತಥಾ–ಹಾಗೆ, ಗುರುವೆ–ವಿದ್ಯಾಗುರುವಿಗೆ, ಸಹಸ್ರಂ–ಸಾವಿರವನ್ನು, ಚಿದಾತ್ಮನೆ–ಜ್ಞಾನಸ್ವರೂಪನಾದ ಪರಮಾತ್ಮನಿಗೆ, ಸಹಸ್ರಂಚ–ಸಾವಿರವನ್ನು, ಜಪಸಂಖ್ಯಾಂ–ಹಂಸಮಂತ್ರದ ಜಪ ಸಂಖ್ಯೆಯನ್ನು,

ನಿವೇದಯೇತ್ ||೬೩|| ಏತಾನ್ಷಟ್ಚಕ್ರಗತಾನ್ಬ್ರಹ್ಮಮಯೂ
ಖಾನಾತ್ಮನೋಮರಾನ್ | ಸತ್ಸಂಪ್ರದಾಯವೇತ್ತಾರಃಚಿಂ
ತಯಂತ್ಯರುಣಾದಯಃ ||೬೪||ಶುಕಾದ್ಯಾಮುನಯಸ್ಸದ್ಯ
ಶ್ಶಿಷ್ಯಾನುಪದಿಶಂತಿಚ | ಅತಃಪ್ರವೃತ್ತಿಂಮಹತಾಂಜ್ಞಾ
ತ್ವಾಧ್ಯಾಯೇತ್ಸದಾಬುಧಃ ||೬೫|| ಪೂಜಾಂಚಮಾನಸೀಂಕೃ
ತ್ವಾಸರ್ವಚಕ್ರೇಷ್ವನನ್ಯಧೀಃ | ತತೋ ಗುರೂಪದೇಶೇ
ನಗಾಯತ್ರೀಮಜಪಾಂಜಪೇತ್ ||೬೬|| ಅಧೋಮುಖೇತ

ನಿವೇದಯೇತ್–ಸಮರ್ಪಣೆಮಾಡಬೇಕು || ||೬೩||

ಸತ್ಸಂಪ್ರದಾಯ–ಒಳ್ಳೇ ಅನುಷ್ಠಾನ ಸಂಪ್ರದಾಯವನ್ನು, ವೇತ್ತಾರಃ–ತಿಳಿದವರಾದ, ಮುನಯಃ–ವಾಲಿಖಿಲ್ಯಾದಿ ಋಷಿಗಳು, ಅರುಣಾದಯಃ–ಸೂರ್ಯಸಾರಥಿಯೇ ಮೊದಲಾದ ಯೋಗಿಗಳು, ಬ್ರಹ್ಮಮಯೂಖಾನ್–ಆತ್ಮನ ಕಿರಣಗಳಂತೆ ಅಧಿಕಾರಮೂರ್ತಿಗಳಾದ, ಚಕ್ರಗತಾನ್–ಆರು ಚಕ್ರಗಳಲ್ಲಿ ಅಧಿಷ್ಠಾನವಾಗಿರುವವರಾದ, ಏತಾನ್–ಈ, ಅಮರಾನ್–ದೇವತೆಗಳನ್ನು, ಚಿಂತಯಂತಿ–ಧ್ಯಾನಿಸುತ್ತಾರೆ || ||೬೪||

ಶುಕಾದ್ಯಾಃ–ಶುಕಮುನಿಯೇ ಮೊದಲಾದವರಾದ, ಮುನಯಃ–ಋಷಿಗಳು, ಶಿಷ್ಯಾನ್–ಶಿಷ್ಯರನ್ನು, ಕುರಿತು, ಉಪದಿಶಂತಿಚ–ಉಪದೇಶ ಮಾಡುತ್ತಾರೆ, ಅತಃ–ಆದಕಾರಣದಿಂದ, ಮಹತಾಂ–ಸತ್ಪುರುಷರ, ಪ್ರವೃತ್ತಿಂ–ಮಾರ್ಗವನ್ನು, ಜ್ಞಾತ್ವಾ–ತಿಳಿದು, ಸದಾ–ಯಾವಾಗಲೂ, ಬುಧಃ–ಪಂಡಿತನು, ಧ್ಯಾಯೇತ್–ಧ್ಯಾನಿಸಬೇಕು || ||೬೫||

ಸರ್ವಚಕ್ರೇಷು–ಸಮಸ್ತ ಚಕ್ರಗಳಲ್ಲಿಯೂ,ಮಾನಸೀಂ–ಮನಸ್ಸಿನ ಸಂಬಂಧವಾದ,ಪೂಜಾಂ–ಗಣಪತಿಮುಂತಾದ ದೇವರುಗಳ, ಅರ್ಚನೆಯನ್ನು,ಅನನ್ಯಧೀಃ–ಸ್ಥಿರಚಿತ್ತನಾಗಿ, ಕೃತ್ವಾ–ಮಾಡಿ,ತತಃ–ಆಬಳಿಕ,ಗುರೂಪದೇಶೇನ–ಗುರುವು ಅಪ್ಪಣೆಯನ್ನು ಕೊಟ್ಟ ರೀತಿಯಿಂದ,ಅಜಪಾಂ ಗಾಯತ್ರೀಂ–ಅಜಪಾಗಾಯತ್ರಿಯನ್ನು, ಜಪೇತ್–ಪಠಿಸಬೇಕು ||೬೬||

ಅಧೋಮುಖೇ–ಕೆಳಗಿನ ಮುಖವಾಗಿರುವ, ರಂಧ್ರ–ದ್ವಾರದಲ್ಲಿ, ಸಹಸ್ರದಳಪಂಕಜೇ–ಸಾವಿರ ಎಸಳುಗಳುಳ್ಳ ಕಮಲದಲ್ಲಿ, ಹಂಸಗಂ–ಹಂಸಸ್ಥನಾದ, ವರ–ಶ್ರೇಷ್ಠನಾದ, ಅಭಯಕರಾಂಬುಜಂ–ಅಭಯ ಹಸ್ತಕ

ಶಿರೋರಂಧ್ರೇ ಸಹಸ್ರದಳಪಂಕಜೇ । ಹಸಗಂ ಶ್ರೀಗುರುಂ ಧ್ಯಾ
ಯೇದ್ವರಾಭಯಕರಾಂಬುಜಂ ॥೬೭॥ ಕ್ಷಾಳಿತಂ ಚಿಂತಯೇ
ದ್ದೇಹಂ ತತ್ಪಾದಾಮೃತಧಾರಯಾ । ಪಂಚೋಪಚಾರೈ
ಸ್ಸಂಪೂಜ್ಯ ಪ್ರಣಮೇತ್ಸ್ತವೇನ ಚ ॥೬೮॥ ತತಃ ಕುಂಡಲಿ
ನೀಂ ಧ್ಯಾಯೇದಾರೋಹಾದವರೋಹತಃ । ಷಟ್ಚಕ್ರಕೃತ
ಸಂಚಾರಾಂ ಸಾರ್ಧತ್ರಿವಲಯಾಂ ಸ್ಥಿತಾಂ ॥೬೯॥ ತತೋ
ಧ್ಯಾಯೇತ್ಸುಷುಮ್ನಾಖ್ಯಂ ಧಾಮ ರಂಧ್ರಾದ್ವಿನಿರ್ಗತಂ ।
ಯಥಾ ತೇನ ಗತಾ ಯಾಂತಿ ತದ್ವಿಷ್ಣೋಃ ಪರಮಂ ಪದಂ ॥೭೦॥

ಮೂಲವೃಕ್ಷವನಾದ, ಶ್ರೀಗುರುಂ–ಸಂಪದ್ಯುಕ್ತನಾದ ಗುರುಮೂರ್ತಿಯ
ನ್ನು, ಧ್ಯಾಯೇತ್–ಧ್ಯಾನವನ್ನು ಮಾಡಬೇಕು ॥ ॥೬೭॥

ತತ್ಪಾದಾಮೃತಧಾರಯಾ–ಆ ಗುರುವಿನ ಪಾದದಿಂದ ಸ್ರವಿಸುವ ಅ
ಮೃತ ಸಂಪಾತದಿಂದ, ದೇಹಂ–ತನ್ನ ಶರೀರವನ್ನು, ಕ್ಷಾಳಿತಂ–ತೊಳೆ
ಯಲ್ಪಟ್ಟದ್ದನ್ನಾಗಿ, ಚಿಂತಯೇತ್–ಧ್ಯಾನಿಸಬೇಕು, ಪಂಚೋಪಚಾ
ರೈಃ–ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಗಳೆಂಬ ಐದು ಉಪಚಾರ
ಗಳಿಂದ, ಸಂಪೂಜ್ಯ–ಅರ್ಚಿಸಿ, ಸ್ತವೇನ–ಸ್ತೋತ್ರದಿಂದ, ಪ್ರಣಮೇ
ತ್–ನಮಸ್ಕಾರವನ್ನು ಮಾಡುವವನಾಗಬೇಕು ॥ ॥೬೮॥

ತತಃ–ಆಬಳಿಕ, ಷಟ್ಚಕ್ರ–ಆರು ಚಕ್ರಗಳಲ್ಲಿ, ಕೃತ–ಮಾಡಲ್ಪಟ್ಟ,
ಸಂಚಾರಾಂ–ಗಮನವುಳ್ಳದ್ದಾದ, ಸಾರ್ಧತ್ರಿವಲಯಾಂ–ಮೂರುವರೆ
ಸುತ್ತಿನಿಂದ ಕೂಡಿರುವದಾದ, ಸ್ಥಿತಾಂ–ಇರುತ್ತಿರುವ, ಕುಂಡಲಿನೀಂ–
ಕುಂಡಲಿನಿಯನ್ನು, ಆರೋಹಾದವರೋಹತಃ–ಏರಿ ಇಳಿಯುವ ರೀತಿ
ಯಿಂದ, ಧ್ಯಾಯೇತ್–ಧ್ಯಾನವನ್ನು ಮಾಬೇಕು ॥ ॥೬೯॥

ತತಃ–ಆಬಳಿಕ, ರಂಧ್ರಾತ್–ಬಿಲದ್ವಾರದಿಂದ, ವಿನಿರ್ಗತಂ–ಹೊರ
ಡುವ, ಸುಷುಮ್ನಾಖ್ಯಂ–ಸುಷುಮ್ನವೆಂಬ ಹೆಸರುಳ್ಳ, ಧಾಮ–ತೇಜಸ್ಸ
ನ್ನು, ಧ್ಯಾಯೇತ್–ಧ್ಯಾನವನ್ನು ಮಾಡಬೇಕು, ಯಥಾ–ಯಾವ ವಿಧವಾ
ಗಿ, ತೇನ–ಸುಷುಮ್ನಾಮಾರ್ಗದಿಂದ, ಗತಾಃ–ದೇಹವನ್ನು ಬಿಟ್ಟವರು,
ವಿಷ್ಣೋಃ–ನಾರಾಯಣಮೂರ್ತಿಯ, ವ್ಯಾಪಕವಾದ ಬ್ರಹ್ಮದ, ತತ್–
ಆ ಪರಮಂ–ಉತ್ತಮವಾದ, ಪದಂ–ಸ್ಥಾನವನ್ನು, ಯಾಂತಿ–ಹೊಂ
ದುತ್ತಾರೆ ॥ ॥೭೦॥

ತತೋಜ್ಯೋತಿಸ್ಸದಾನಂದಂ ಸನಾತನಮನಾಮಯಂ । ಅ
ನಾದ್ಯನಂತಂಪರಮಂಧ್ಯಾಯೇದ್ರೂಪಂಮಹೋಜ್ವಲಂ॥೭೧॥
ಗುರೂಪದೇಶತಸ್ಸಮ್ಯಜ್ಮನೋ ನಿಶ್ಚಲತಾಂವ್ರಜೇತ್ ।
ನತುಸ್ವೀಯಪ್ರಯತ್ನೇನ ತದ್ವಿನಾಪತನಂಭವೇತ್ ॥ ೭೨ ॥
ಅಂತರ್ಯಾಗಂವಿಧಾಯೇತ್ಥಂಬಹಿರ್ಯಾಗಪರೋಭವ । ಸ್ನಾನ

ತತಃ–ಅನಂತರದಲ್ಲಿ. ಜ್ಯೋತಿಃ–ತೇಜೋರೂಪವಾಗಿಯೂ, ಸದಾ
ನಂದಂ–ಯಾವಾಗಲೂ ಆನಂದಸ್ವರೂಪವಾಗಿಯೂ, ಸನಾತನಂ–ಅ
ನಾದಿಯಾಗಿಯೂ, ಅನಾಮಯಂ–ಬಾಧಾರಹಿತವಾಗಿಯೂ, ಅನಾದಿ–
ಆದಿ ಇಲ್ಲದ್ದಾಗಿಯೂ, ಅನಂತಂ–ಕೊನೆಯಿಲ್ಲದ್ದಾಗಿಯೂ, ಪರಮಂ–
ಶ್ರೇಷ್ಠವಾಗಿಯೂ, ಮಹೋಜ್ವಲಂ–ಅತಿ ಪ್ರಕಾಶಮಾನವಾಗಿಯೂ,
ಇರುವ, ರೂಪಂ–ಸ್ವಸ್ವರೂಪವನ್ನು, ಧ್ಯಾಯೇತ್–ಧ್ಯಾನವನ್ನು ಮಾ
ಡಬೇಕು ॥ ॥೭೧॥

ಮನಃ–ಚಿತ್ತವು, ಗುರೂಪದೇಶತಃ–ಗುರುವಿನ ಉಪದೇಶದಿಂದ, ನಿ
ಶ್ಚಲತಾಂ–ಸ್ಥಿರತ್ವವನ್ನು, ಸಮ್ಯಕ್–ಚನ್ನಾಗಿ, ವ್ರಜೇತ್–ಹೊಂದು
ವುದು, ಸ್ವೀಯ್ಯ–ತನ್ನ, ಪ್ರಯತ್ನೇನ–ಉದ್ಯೋಗದಿಂದ, ನತು–ಲಭಿ
ಸುವದಿಲ್ಲ, ಅಂದರೆ ಮನಸ್ಸು ಸ್ಥೈರ್ಯವಾಗುವದಿಲ್ಲವು, ತದ್ವಿನಾ–ಗುರು
ಬೋಧೆಯಿಲ್ಲದೇ ಹೋದರೆ, ಪತನಂ–ಬೀಳುವಿಕೆಯು, ಬವೇತ್–ಆದೀ
ತು. ॥ತಾ॥ ಗುರೂಪದೇಶವಿಲ್ಲದೆ ಸ್ವಪ್ರಯತ್ನದಿಂದ ಉಂಟಾದ ಅ
ನುಭವವು ಕೆಡಿಸುವುದು, ॥ಶ್ಲೋ॥ ಶಾಸ್ತ್ರದೃಷ್ಟಂಗುರೋರ್ವಾ
ಕ್ಯಂತೃತೀಯ್ಯಂತ್ವಾತ್ಮನಿಶ್ಚಯಂ ॥ ಎಂಬದಾಗಿ ಹೇಳಿರುವದ್ದರಿಂದ,
ಗುರುಬೋಧೆಯಿಂದ ಅನುಭವಕ್ಕೆ ಬಂದದ್ದು ಫಲಿಸುವುದು ॥ ॥೭೨॥

ಇತ್ಥಂ–ಈಗ ಹೇಳಿದ ರೀತಿಯಿಂದ, ಅಂತರ್ಯಾಗಂ–ದೇಹದೊಳಗೆ
ಮಾನಸಿಕ ಉಪಾಸನೆಯನ್ನು, ವಿಧಾಯ–ಮಾಡಿ, ಬಹಿರ್ಯಾಗ ಪರಃ–
ಹೊರಗೆ ಮಾಡಬೇಕಾದ ಕರ್ಮಯಜ್ಞವನ್ನು ಮಾಡುವವನು, ಭವ–ಆ
ಗು, ಸ್ನಾನಸಂಧ್ಯಾದಿಕಂ–ಸ್ನಾನ ಸಂಧ್ಯಾವಂದನೆಗಳೇ ಮೊದಲಾದದ್ದ
ನ್ನು ಕೃತ್ವಾ–ಮಾಡಿ, ಹರಿಹರಾರ್ಚನಂ–ಶಿವವಿಷ್ಣು ಪೂಜೆಗಳನ್ನು,
ಕುರ್ಯಾತ್–ಮಾಡಬೇಕು. ॥ತಾ॥ ದೇಹದೊಳಗೆ ಷಟ್ಚಕ್ರಗಳಲ್ಲಿ ಇ

ಸಂಧ್ಯಾದಿಕಂಕೃತ್ವಾ ಕುರ್ಯಾದ್ಧರಿಹರಾರ್ಚನಂ ॥ ೨೩ ॥
ದೇಹಾಭಿಮಾನಯುಕ್ತಾನಾಂ ವೃತ್ತಿರಾಂತರ್ಯಾಗಾಮಿನೀ ।
ನಜಾಯತೆಂ ತಸ್ತೆಷಾಂ ತುಮದ್ಭಕ್ತಿರ್ಮೋಕ್ಷದಾಯಿ
ನೀ ॥ ೨೪ ॥ ತಪೋಯೋಗಾದಯೋಮಾರ್ಗಾ ಬಹವಸ್ಸಂತಿ
ತೇಷುಚ ॥ ಮಮಭಕ್ತಿಸ್ಸ ಮೀಚಿನಾಸದಾಸಂಸರತಾಂಭು
ವಿ ॥೨೫॥ ಚತುರ್ಮುಖಾದಿಭಿರ್ವಿಜ್ಞೈರ್ನಿಶ್ಚಿತೋಯಂವಿಶೇಷ

ರೂಪ ಗಣಪತಿ ಹರ ಹರಿ ದೇವೀ ಗುರು ಪರಮಾತ್ಮರನ್ನು ಮಾನಸಿಕವಾಗಿ ಈರೀತಿಯಾಗಿ ಸೇವಿಸಿ, ಹೊರಗೆ ದೇಹಶುದ್ಧಿಗಾಗಿಸ್ನಾನಾದಿಗಳನ್ನು ಮಾಡಿ ಆದಿತ್ಯ ಅಂಬಿಕೆವಿಷ್ಣು ಗಣಪತಿಮಹೇಶ್ವರರನ್ನು ಪೂಜಿಸುತ್ತಿರಬೇಕು ॥ ॥೨೩॥

ದೇಹಾಭಿಮಾನ–ಶರೀರದಮೆಲೆಆಶೆಯಿಂದ, ಯುಕ್ತಾನಾಂ–ಕೂಡಿದವರುಗಳ, ವೃತ್ತಿಃ–ರೀತಿಯು, ಆಂತರ್ಯಾಗಾಮಿನೀ–ಒಳಗೆ ಮಾನಸಿಕವೃತ್ತಿಯಲ್ಲಿ ಪ್ರವೇಶಿಸುವಂಥಾದ್ದು, ನಜಾಯತೆ–ಆಗುವದಿಲ್ಲ, ಅತಃ–ಆದ್ದರಿಂದ. ತೇಷಾಂತು–ಅವರುಗಳಿಗಾದರೇನೋ, ಮದ್ಭಕ್ತಿಃ–ನನ್ನ ಮೇಲೆ ಭಕ್ತಿಯು, ಮೋಕ್ಷದಾಯಿನೀ–ಮುಕ್ತಿಯನ್ನು, ಕೊಡುವಂಥಾದ್ದು, (ಭವತಿ–ಆಗುತ್ತೆ) ॥ತಾ॥ ದೇಹಾಭಿಮಾನವನ್ನು ಬಿಡದೆ ವ್ಯವಹಾರದಲ್ಲಿ ಇದ್ದುಕೊಂಡಿರುವವರಿಗೆ, ಮನಸ್ಸುಸ್ಥಿರವಾಗಿ ನಿಲ್ಲುವುದು ಪ್ರಯಾಸವಾದ್ದರಿಂದ, ಅವರುಗಳಿಗೆ ನನ್ನಲ್ಲಿ ಭಕ್ತಿಯೇ, ಮುಕ್ತಿಯನ್ನು ಉಂಟುಮಾಡುವುದು॥ ॥೨೪॥

ತಪೋಯೋಗಾದಯಃ–ಕೃಛ್ರಚಾಂದ್ರಾಯಣಾದಿ ರೂಪವಾದ ತಪಸ್ಸು, ಸಂಪ್ರಜ್ಞಾತ ಸಮಾಧಿರೂಪವಾದ ಯೋಗವೇ ಮೊದಲಾದ, ಮಾರ್ಗಾಃ–ಮೋಕ್ಷಮಾರ್ಗಗಳು, ಬಹವಃ–ಅನೇಕಗಳು, ಸಂತಿ–ಇರುತ್ತವೆ, ತೇಷುಚ–ಅವುಗಳೊಳಗೆ, ಮಮ–ನನ್ನ, ಭಕ್ತಿಃ–ಭಕ್ತಿಯು, ಭುವಿ–ನೆಲದಲ್ಲಿ, ಸದಾ–ಯಾವಾಗಲೂ, ಸಂಸರತಾಂ–ಜನನಮರಣಪ್ರವಾಹರೂಪವಾದ ಸಂಸಾರವನ್ನು ಅನುಭವಿಸುವವರಿಗೆ, ಸಮೀಚೀನಾ–ಯೋಗ್ಯವಾದದ್ದು ॥ ॥೨೫॥

ಚತುರ್ಮುಖಾದಿಭಿಃ–ಬ್ರಹ್ಮನೇ ಮೊದಲಾದ, ವಿಜ್ಞೈಃ–ತಿಳಿದವ

ತಃ । ತ್ರಿಕಾಲಂ ವೇದಶಾಸ್ತ್ರಾಣಿ ಆಲೋಡ್ಯಚ ಪುನಃ ಪು
ನಃ ॥೨೧॥ ಯಜ್ಞಾದಯೋಪಿಸದ್ಧರ್ಮಾಶ್ಚಿತ್ತಶುದ್ಧಿಕರಾಸ್ಸ
ದಾ । ಫಲರೂಪಾಂ ಚಮದ್ಭಕ್ತಿಂ ಲಬ್ಧ್ವಾಸೌ ನಾವಸೀ
ದತಿ ॥೨೨॥ ಸತಾಂಸಂಯೋಗತೋಮರ್ತ್ಯಃಸುಕೃತೀಮು
ನಿಪುಂಗವ ॥ ಏವಂಸಮಾಚರನ್ಭಕ್ತ್ಯಾಮೋಕ್ಷಮಾಪ್ನೋತಿ
ದುಲ್ಲಭಂ ॥ ॥೨೩॥

ಇತಿ ಶ್ರೀ ಭವಿಷ್ಯೋತ್ತರಪುರಾಣೆ ವೆಂಕಟೇಶಮಾಹಾತ್ಮ್ಯೆ
ಉತ್ತರಭಾಗೆ ದಶಮೋಧ್ಯಾಯಃ

---

ರಾದ, ಯೋಗಿಗಳಿಂದ, ವೇದಶಾಸ್ತ್ರಾಣಿ—ವೇದವೇದಾಂಗಗಳನ್ನು, ತ್ರಿಕಾಲಂ—ಮೂರುಸಲ, ಪುನಃ ಪುನಃ—ಬಾರಿಬಾರಿಗೂ, ಆಲೋಡ್ಯ—ಪರಿಶೀಲನೆಮಾಡಿ, ವಿಶೇಷತಃ—ಅತಿಶಯವಾಗಿ, ಅಯಂ—ಈಭಕ್ತಿಯೋಗವು, ನಿಶ್ಚಿತಃ—ಸುಲಭವು ಪುತ್ತಮವೂ ಯೆಂಬದಾಗಿ, ಗೊತ್ತು ಮಾಡಲ್ಪಟ್ಟಿದೆ॥ ॥೨೧॥

ಯಜ್ಞಾದಯಃ—ಯಜ್ಞವೇ ಮೊದಲಾದ, ಸದ್ಧರ್ಮಾಃ—ಉತ್ತಮ ಧರ್ಮಗಳು, ಸದಾ—ಯಾವಾಗಲೂ, ಚಿತ್ತಶುದ್ಧಿಕರಾಃ—ಮಾನಶ್ಶುದ್ಧಿಯನ್ನುಂಟುಮಾಡುತ್ತವೆ, ಫಲರೂಪಾಂ—ಪ್ರಯೋಜನ ಸ್ವರೂಪವಾದ, ಮದ್ಭಕ್ತಿಂ—ನನ್ನ ಭಕ್ತಿಯನ್ನು, ಲಬ್ಧ್ವಾ—ಪಡದು, ಅಸೌ—ಈಮನುಷ್ಯನು, ನಾವಸೀದತಿ—ಕೆಡುವದಿಲ್ಲ ॥ ॥೨೨॥

ಮರ್ತ್ಯಃ—ಮನುಷ್ಯನು, ಸತಾಂ—ಸತ್ಪುರುಷರ, ಸಂಯೋಗತಃ—ಸಂಬಂಧದಿಂದ, ಸುಕೃತೀ—ಪುಣ್ಯಶಾಲಿಯಾಗುತ್ತಾನೆ, ಮುನಿಪುಂಗವ—ಋಷಿಶ್ರೇಷ್ಠನಾದ ವೈಖಾನಸ ಮುನಿಯೇ, ಏವಂ—ಈರೀತಿಯಾಗಿ, ಭಕ್ತ್ಯಾ—ಭಕ್ತಿಯಿಂದ, ಸಮಾಚರನ್—ನಡಿಸುತ್ತಿರುವವನಾದರೆ, ದುಲ್ಲಭಂ—ಹೊಂದಲಸಾಧ್ಯವಾದ, ಮೋಕ್ಷಂ—ಮುಕ್ತಿಯನ್ನು, ಆಪ್ನೋತಿ—ಹೊಂದುತ್ತಾನೆ ॥ ॥೨೩॥

ಇಂತು ಭವಿಷ್ಯೋತ್ತರಪುರಾಣದೊಳು ವೆಂಕಟೇಶಮಹಾ
ತ್ಮ್ಯೆಯುತ್ತರಭಾಗದಲ್ಲಿ ಹತ್ತನೇ ಅಧ್ಯಾಯವು ॥

---

ವೈಖಾನಸಃ ॥ ಶ್ರುತಾ ಮಯಾ ವಿಶೇಷೇಣ ತ್ವಯೋಕ್ತಾ
ಜೀವಸಂಸ್ಕೃತಿಃ। ಇದಾನೀಂ ಶ್ರೋತುಮಿಚ್ಛಾಮಿ ಮೋಕ್ಷೋ
ಪಾಯಂ ಸನಾತನಂ॥೧॥ ಶ್ರೀನಿವಾಸಃ॥ ವಿನಾ ದೇಹೇನ ಕಸ್ಯಾಪಿ
ಪುರುಷಾರ್ಥೋ ನ ವಿದ್ಯತೇ। ತಸ್ಮಾದ್ದೇಹಧನಂ ರಕ್ಷೇತ್ಪುಣ್ಯಕ
ರ್ಮಾಣಿ ಸಾಧಯೇತ್॥೨॥ ಪಾಲಯೇದ್ಯತ್ನತೋತ್ಮಾನಮಾತ್ಮಾ
ಸರ್ವಸ್ಯ ಭಾಜನಂ । ರಕ್ಷಣೇ ಯತ್ನ ಮಾತಿಷ್ಠೇಜ್ಜೀವನ್ಭ

ವೈಖಾನಸಃ—ವೈಖಾನಸಮುನಿಯು ಹೇಳುತ್ತಲಿದ್ದಾನೆ॥ ತ್ವಯಾ—ನಿನ್ನಿಂದ, ಉಕ್ತಾ-ಹೇಳಲ್ಪಟ್ಟ, ಜೀವಸಂಸ್ಕೃತಿಃ—ಜೀವನ ಸಂಸಾರವು, ವಿಶೇಷೇಣ—ಅತಿಶಯವಾಗಿ, ಮಯಾ-ನನ್ನಿಂದ, ಶ್ರುತಾ-ಕೇಳಲ್ಪಟ್ಟಿತು, ಇದಾನೀಂ-ಈಗ, ಸನಾತನಂ—ಅನಾದಿಯಾಗಿ ಬಂದಿರುವ ಮೋಕ್ಷೋಪಾಯಂ—ಮುಕ್ತಿಯಾಗುವದಕ್ಕೆ ಅನುಕೂಲವಾಗುವ ಯುಕ್ತಿಯನ್ನು, ಶ್ರೋತುಂ—ಕೇಳುವದಕ್ಕೆ, ಇಚ್ಛಾಮಿ—ಅಪೇಕ್ಷಿಸುತ್ತೇನೆ. ॥ತಾ॥ ಜೀವನಿಗೆ ಕರ್ಮದಿಂದ ಉಂಟಾಗುವ ಜನನ ಮರಣ ರೂಪವಾದ ಸಂಸಾರ ಸ್ಥಿತಿಯು ಕೇಳಲ್ಪಟ್ಟಿತು, ಈಗ ಮುಕ್ತನಾಗುವದಕ್ಕೆ ಉಪಾಯವನ್ನು ಹೇಳುವವನಾಗು ॥ ॥೧॥

ಶ್ರೀನಿವಾಸಃ—ಶ್ರೀನಿವಾಸನು ಹೇಳುತ್ತಲಿದ್ದಾನೆ॥ ಕಸ್ಯಾಪಿ-ಯಾವನಿಗಾದರೂ, ದೇಹೇನವಿನಾ—ದೇಹವಿಲ್ಲದೆ, ಪುರುಷಾರ್ಥಃ—ಧರ್ಮಕಾಮಾರ್ಥಮೋಕ್ಷರೂಪವಾದ ಫಲವು, ನವಿದ್ಯತೇ—ಇರುವದಿಲ್ಲ, ಅಂದರೆ ಉಂಟಾಗುವದಿಲ್ಲ, ತಸ್ಮಾತ್—ಆದ್ದರಿಂದ, ದೇಹಧನಂ—ಶರೀರವೆಂಬ ದ್ರವ್ಯವನ್ನು, ರಕ್ಷೇತ್—ಕಾಪಾಡಬೇಕು, ಪುಣ್ಯಕರ್ಮಾಣಿ—ಪುಣ್ಯಕರವಾದ ಕೆಲಸಗಳನ್ನು, ಸಾಧಯೇತ್—ಮಾಡಬೇಕು. ॥ತಾ॥ ದೇಹವಿಲ್ಲದೆ ಯಾವ ಪುರುಷಾರ್ಥವನ್ನೂ ಪಡೆಯಲಾಗುವದಿಲ್ಲವಾದ್ದರಿಂದ ಶರೀರವೆಂಬ ಹಣವನ್ನು ಕಾಪಾಡಿಕೊಂಡು ಪುಣ್ಯಕೆಲಸಗಳನ್ನು ಮಾಡುತ್ತಾ ಬರಬೇಕು ॥ ॥೨॥

ಯತ್ನತಃ-ಪ್ರಯತ್ನದಿಂದ, ಆತ್ಮಾನಂ-ಜೀವಾತ್ಮನನ್ನು, ಪಾಲಯೇತ್—ಕಾಪಾಡಬೇಕು, ಆತ್ಮಾ—ಜೀವಾತ್ಮನು, ಸರ್ವಸ್ಯ—ಸಮಸ್ತಕರ್ಮಗಳಿಗೆ, ಭಾಜನಂ-ಆಸರೆಯಾಗಿರುವವನು, ರಕ್ಷಣೆ—ಅಂಥಾ ಜೀವಾ

ಪ್ರಾಣಿಪಶ್ಯತಿ ॥೩॥ ಪುನರ್ಗ್ರಾಮಃಪುನಃಕ್ಷೇತ್ರಂಪುನರ್ವಿ
ತ್ತಂಪುನರ್ಗೃಹಂ । ಪುನಶ್ಶುಭಾಶುಭಂಕರ್ಮನಶರೀರಂಪುನ
ರ್ವರಂ ॥೪॥ ಶರೀರರಕ್ಷಣೋಪಾಯಾಃಕ್ರಿಯಂತೇಸರ್ವದಾ
ಬುಧೈಃ । ನೇಚ್ಛಂತಿಚಪುನಸ್ತ್ಯಾಗಮಪಿ ಕುಷ್ಠಾದಿರೋ
ಗಿಣಃ ॥೫॥ ತದ್ಗೋಪಿತಂಸ್ಯಾದ್ಧರ್ಮಾರ್ಥಂಧರ್ಮೋಜ್ಞಾನಾ

ತ್ಮನನ್ನು ಕಾಪಾಡುವ ವಿಷಯದಲ್ಲಿ, ಯತ್ನಂ–ಪ್ರಯತ್ನವನ್ನು, ಆತಿ ಷ್ಠೇತ್–ಮಾಡಬೇಕು, ಜೀವನ್–ಬದುಕಿರುವವನಾಗಿದ್ದರೆ, ಭದ್ರಾಣಿ–ಶುಭಗಳನ್ನು, ಪಶ್ಯತಿ–ನೋಡುತ್ತಾನೆ. ॥ತಾ॥ ಜೀವಾತ್ಮನು ಈ ದೇಹವನ್ನು ಬಿಟ್ಟುಹೋಗದಂತೆ ಪ್ರಯತ್ನಪುರಸ್ಸರವಾಗಿ ರಕ್ಷಿಸಿಕೊಂಡಿದ್ದರೆ, ಎಂದಿಗಾದರೂ ಒಳ್ಳೇದನ್ನು ಪಡೆಯುತ್ತಾನೆ ॥ ॥೩॥

ಪುನಃ–ಮತ್ತು, ಗ್ರಾಮಃ–ಊರು, ಪುನಃ–ತಿರಿಗಿ, ಕ್ಷೇತ್ರಂ–ಪ್ರದೇಶವು, ಪುನಃ–ತಿರಿಗಿ, ವಿತ್ತಂ–ದ್ರವ್ಯವು. ಪುನಃ–ತಿರಿಗಿ, ಗೃಹಂ–ಮನೆಯು, ಪುನಃ–ಮತ್ತು, ಶುಭಾಶುಭಂ–ಸುಕೃತ ದುಷ್ಕೃತಗಳೆಂಬ, ಕರ್ಮ–ಕಾರ್ಯವು, ಭವತಿ–ಉಂಟಾಗುವದು, ವರಂ–ಶ್ರೇಷ್ಠವಾದ, ಶರೀರಂ–ಮನುಷ್ಯದೇಹವು, ನ–ಬರುವದಿಲ್ಲ. ॥ತಾ॥ ಗ್ರಾಮ, ದೇಶ, ಮನೆ, ಧನ, ಶುಭಾಶುಭಕರ್ಮಗಳು, ಇರುವವು, ಹಾಗೆ, ಮನುಷ್ಯಶರೀರವು ಬಂದು ಇರಲಾರದು ॥ ॥೪॥

ಬುಧೈಃ–ಪಂಡಿತರಿಂದ, ಶರೀರ–ದೇಹವನ್ನು, ರಕ್ಷಣ–ಕಾಪಾಡುವದರಲ್ಲಿ, ಉಪಾಯಾಃ–ಯುಕ್ತಿಗಳು, ಸರ್ವದಾ–ಯಾವಾಗಲೂ, ಕ್ರಿಯಂತೇ–ಮಾಡಲ್ಪಡುತ್ತವೆ,ಕುಷ್ಠಾದಿರೋಗಿಣೋಪಿ–ಕುಷ್ಠಶೂಲೆ ಮುಂತಾದ ಬೇನೆಗಳುಳ್ಳವರೂ ಕೂಡ,ಪುನಃ–ಮತ್ತು, ತ್ಯಾಗಂ–ಶರೀರ ಪತನವನ್ನು,ನೇಚ್ಛಂತಿ–ಬೈಸುವದಿಲ್ಲ. ॥ತಾ॥ ಜ್ಞಾನಿಗಳಾದವರು ಶರೀರವನ್ನು ಕಾಪಾಡಿಕೊಳ್ಳುವ ಯುಕ್ತಿಯನ್ನು ಮಾಡುತ್ತಿರುವರು,ಇದಲ್ಲದೆ ಕುಷ್ಠಾದಿ ರೋಗವುಳ್ಳವರೂ ಪುಣ್ಯಕರ್ಮದಿಂದಲೇ ಬಾಧೆಗಳನ್ನು ಕಳೆಯಬೇಕಾಗಿರುವದ್ದರಿಂದ, ದೇಹವನ್ನು ಬಿಡಲು ಮನಸ್ಕರಿಸುವದಿಲ್ಲ ॥ ॥೫॥

ತತ್–ದೇಹರಕ್ಷಣೆಯು, ಧರ್ಮಾರ್ಥಂ–ಧರ್ಮಸಂಪಾದನೆಗಾಗಿ, ಗೋಪಿತಂ–ರಕ್ಷಿಸಲ್ಪಡತಕ್ಕದ್ದು, ಸ್ಯಾತ್–ಆಗುವದು, ಧರ್ಮಃ–ಧರ್ಮವು. ಜ್ಞಾ

ರ್ಥಂ ಪೋಷಕ । ಜ್ಞಾನಂತು ಧ್ಯಾನಯೋಗಾರ್ಥಂ ತೇನಮು
ಕ್ತೋ ಭವಿಷ್ಯತಿ ॥೬॥ ಆತ್ಮೈವ ಯದಿ ನಾತ್ಮಾನಮಹಿತೇಭ್ಯೋ
ನವಾರಯೇತ್ । ಕೋನ್ಯೋ ಹಿತಕರಸ್ತಸ್ಮಾದಾತ್ಮಾನಂ ತಾ
ರಯಿಷ್ಯತಿ ॥ ೭ ॥ ಇಹೈವ ನರಕ ವ್ಯಾಧೇಶ್ಚಿಕಿತ್ಸಾಂ ನಕ

ನಾರ್ಥಂ-ಜ್ಞಾನವನ್ನು ಸಂಪಾದಿಸುವದಕ್ಕಾಗಿ, ಗೋಪಿತಂ_ಕಾಪಾಡ ಲ್ಪಡಬೇಕಾಗಿರುವದು, ಸ್ಯಾತ್_ಆಗುವದು, ಜ್ಞಾನಂತು-ಜ್ಞಾನವಾದ ರೇನೋ, ಧ್ಯಾನಯೋಗಾರ್ಥಂ_ಈಶ್ವರ ಸ್ವರೂಪಚಿಂತನೆಗೋಸ್ಕರವಾ ಗಿ, ಗೋಪಿತಂ_ಕಾಪಾಡಲ್ಪಡತಕ್ಕದ್ದು, ಸ್ಯಾತ್_ಆಗುವದು, ತೇನ-ಧ್ಯಾನಯೋಗದಿಂದ, ಮುಕ್ತಃ-ಮೋಕ್ಷವನ್ನು ಪಡೆಯುವವನು, ಭವಿ ಷ್ಯತಿ-ಆಗುತ್ತಾನೆ ॥ತಾ॥ ದೇಹರಕ್ಷಣೆಯನ್ನು ಧರ್ಮಸಂಪಾದನೆ ಗಾಗಿಯೂ, ಧರ್ಮವನ್ನು ಜ್ಞಾನವುಂಟಾಗುವದಕ್ಕಾಗಿಯೂ, ಜ್ಞಾನವ ನ್ನು ಧ್ಯಾನಯೋಗವುಂಟಾಗುವದಕ್ಕಾಗಿಯೂ ಪೋಷಿಸುತ್ತಾಬಂದ ಲ್ಲಿ, ಆ ಧ್ಯಾನಯೋಗದಿಂದ ಬ್ರಹ್ಮವಿದ್ಬ್ರಹ್ಮೈವಭವತಿಯೆಂಬಂತೆ,ಬ್ರ ಹ್ಮಾಕಾರವಾಗಿ ಪರಿಣಮಿಸಿ, ಮುಕ್ತನಾಗುವನು ॥ ॥೬॥

ಆತ್ಮೈವ_ಜೀವಾತ್ಮನೇ, ಆತ್ಮಾನಂ_ತನ್ನನ್ನು, ಅಹಿತೇಭ್ಯಃ-ಅನ ರ್ಥಕರಗಳಾದ ಕೆಲಸಗಳಿಂದ, ನವಾರಯೇದ್ಯದಿ-ತಪ್ಪಿಸದೇ ಇದ್ದರೆ, ತಸ್ಮಾತ್_ತನಗಿಂತಲೂ, ಹಿತಕರಃ-ಹಿತವನ್ನು ಮಾಡುವವನಾದ, ಅ ನ್ಯಃ-ಮತ್ತೊಬ್ಬನು, ಕಃ_ಯಾರು, ಆತ್ಮಾನಂ-ತನ್ನನ್ನು, ತಾರಯಿ ಷ್ಯತಿ-ಭಾಧೆಯಿಂದ ಬಿಡಿಸುತ್ತಾನೆ, ಅಂದರೆ ಯಾರೂ ಬಿಡಿಸುವದಿಲ್ಲ. ತಾ॥ ಆತ್ಮನು ತನ್ನನ್ನು ಅನಿಷ್ಟಗಳಿಂದ ತಪ್ಪಿಸದೇ ಹೋದರೆ, ಇತ ರನು ತನಿಗೆ ಉಂಟಾಗುವ ಕೇಡುಗಳನ್ನು ಯಾವನು ತಪ್ಪಿಸುತ್ತಾನೆ॥೭॥

ಇಹೈವ-ಈ ಕರ್ಮಭೂಮಿಯಲ್ಲಿಯೇ, ನರಕವ್ಯಾಧೇಃ_ಮುಂದೆ ಉಂ ಟಾಗುವ ನಿರಯಲೋಕಪ್ರಾಪ್ತಿಯೆಂಬ ರೋಗಕ್ಕೆ, ಚಿಕಿತ್ಸಾಂ_ಔಷಧ ದಿಂದ ಪ್ರತಿಕಾರವನ್ನು, ಯಃ-ಯಾವ ಮನುಷ್ಯನು, ನಕರೋತಿ-ಮಾಡುವದಿಲ್ಲವೋ, ವ್ಯಾಧಿಸ್ಥಃ-ರೋಗದಲ್ಲಿ ಬಿದ್ದಿರುವವನು, ನಿರೌಷ ಧಂ-ರೋಗಕ್ಕೆ ಪ್ರತಿಯಾಗಿ ಶಾಮಕಗಳಾದ ಮೂಲಿಕೆಗಳಿಲ್ಲದ,ದೇಶಂ-ಭೂಮಿಯನ್ನು, ಗತ್ವಾ-ಸೇರಿ, ಕಿಂಕರಿಷ್ಯತಿ_ಅಲ್ಲಿ ರೋಗಕ್ಕೆ ಏನು

ರೋತಿಯಃ । ಗತ್ವಾ ನಿರೌಷಧಂ ಸ್ಥಾನಂ ಸಾನುರುಗ್ಭಿಃ ಕಿಂಕರಿ
ಷ್ಯತಿ॥೭॥ ವ್ಯಾಘ್ರೀವಾಸ್ತೇ ಜರಾ ಚಾಯುರ್ಯಾತಿ ಭಿನ್ನಘ
ಟಾಂಬುವತ್ । ನಿಘ್ನಂತಿ ರಿಪುವದ್ರೋಗಾಸ್ತಸ್ಮಾಚ್ಛ್ರೇ
ಯಸ್ಸಮಾಚರೇತ್ ॥೮॥ ಯಾವನ್ನಾಶ್ರಯತೇ ದುಃಖಂ ಯಾ
ವನ್ನಾಯಾಂತಿ ಚಾಪದಃ । ಯಾವನ್ನೇಂದ್ರಿಯವೈಕಲ್ಯಂ

ಔಷಧವನ್ನು ಮಾಡ್ಯಾನು. ತಾ॥ ಕರ್ಮಭೂಮಿಯಲ್ಲಿ ಇರುವಾಗ್ಯೇ,ನರಕವೆಂಬ ರೋಗಕ್ಕೆ ಪ್ರತಿಕ್ರಿಯೆಯಾದ ಸತ್ಕರ್ಮಗಳನ್ನು ಮಾಡದೇ ಇದ್ದರೆ, ನರಕಕ್ಕೆ ಹೋದಬಳಿಕ ಏನು ಪ್ರತಿಕ್ರಿಯೆಯಾದ ಸುಕರ್ಮವನ್ನು ಮಾಡ್ಯಾನು ಎಂಬ ಭಾವವು ॥ ॥೭॥

ಜರಾ–ಮುಪ್ಪು, ವ್ಯಾಘ್ರೀವಾ–ಹುಲಿಯಂತೆ, ಆಸ್ತೇ–ಇರುತ್ತೆ, ಆಯುಶ್ಚ–ಆಯುಸ್ಸಾದರೋ, ಭಿನ್ನ–ತೂತುಬಿದ್ದಿರುವ, ಘಟ–ಮಡಿಕೆಯಲ್ಲಿರುವ, ಅಂಬುವತ್–ಉದಕದಂತೆ, ಯಾತಿ–ಕಳೆದುಹೋಗುತ್ತಿದೆ, ರಿಪುವತ್–ಶತ್ರುವಿನೋಪಾದಿಯಲ್ಲಿ, ರೋಗಾಃ–ಕಾಸಶ್ವಾಸಜ್ವರಕ್ಷಯಾತಿಸಾರಾದಿ ರೋಗಗಳು, ನಿಘ್ನಂತಿ–ಶರೀರವನ್ನು ಹೊಡೆಯುತ್ತಿವೆ, ತಸ್ಮಾತ್–ಆದ್ದರಿಂದ, ಶ್ರೇಯಃ–ಇಹಪರಗಳಲ್ಲಿ ಕ್ಷೇಮಕರವಾದ ಸುಕರ್ಮವನ್ನು, ಸಮಾಚರೇತ್–ಮಾಡಬೇಕು ॥ ॥೮॥

ದುಃಖಂ–ವ್ಯಸನವು,ಯಾವತ್–ಯಾವುವರೆಗೆ,ನಾಶ್ರಯತೆ–ತನಗೆಘಟಿಸುವದಿಲ್ಲವೋ,ಆಪದಃ–ವಿಪತ್ತುಗಳು ಯಾವತ್–ಯದುವರೆಗೆ,ನಾಯಾಂತಿ–ಬರುವದಿಲ್ಲವೋ,ಇಂದ್ರಿಯ–ಚಕ್ಷುರಾದಿಇಂದ್ರಿಯಗಳಿಗೆ,ವೈಕಲ್ಯಂ–ಅಪಾಟವವು,ನ–ಉಂಟಾಗುವದಿಲ್ಲವೋ, ತಾವತ್–ಅದರೊಳಗಾಗಿ,ಶ್ರೇಯಃ–ಇಹಪರಗಳಲ್ಲಿ ಸುಖಪ್ರದವಾದ ಸುಕರ್ಮವನ್ನು, ಸಮಾರಭೇತ್–ಆರಂಭಿಸಬೇಕು.॥ತಾ॥ಇಹದಲ್ಲಿ ಸಾಂಸಾರಿಕ ದುಃಖವು, ಪರದಲ್ಲಿ ನರಕದುಃಖವು ಇಹದಲ್ಲಿ ಮರಣಾದಿ ವಿಪತ್ತುಗಳು, ಪರದಲ್ಲಿ ದುರ್ಯೋನಿಜನ್ಮಾದಿರೂಪ ವಿಪತ್ತುಗಳು, ಇಹದಲ್ಲಿ ಕಣ್ಣು ಮುಂತಾದ ಇಂದ್ರಿಯಗಳು ಕಾಣದೇ ಕೆಟ್ಟುಹೋಗುವಿಕೆಯು, ಪರಲೋಕದಲ್ಲಿ ಅಂಧಂತಮೋಪ್ರಾಪ್ತಿರೂಪವಾದ ವೈಕಲ್ಯವು, ಯದುವರಿಗೆ ಘಟಿಸುವದಿಲ್ಲವೋ ಅದರೊಳಗಾಗಿ ತನಗೆ ಈ ಭೂಲೋಕದಲ್ಲಿಯೂ, ಪರಲೋಕದಲ್ಲಿಯೂ

ತಾವಚ್ಛ್ರೇಯಸ್ಸಮಾರಭೇತ್ ॥೧೦॥ ಯಾವತ್ತಿಷ್ಠತಿವೆ
ಹೋಯಂತಾವತ್ತತ್ವಂಸಮಭ್ಯಸೇತ್ । ಸಂದೀಪ್ತೇಕೋಣ
ಭವನೇಕೂಪಂಖನತಿಮೂಢಧೀಃ ॥೧೧॥ ಕಾಲೋನಜ್ಞಾಯ
ತೇನಾನಾಕಾರ್ಯೈಸ್ಸಂಸಾರಸಂಭವೈಃ । ಸುಖಂದುಃಖಂಜ
ನೋಹಂತನವೇತ್ತಿಹಿತಮಾತ್ಮನಃ ॥ ೧೨ ॥ ಜಾತಾನಾರ್ತಾ

ಶ್ರೇಯೋಭಿವೃದ್ಧಿಕರವಾದ ಸುಕೃತವನ್ನು ಮಾಡುತ್ತಿರಬೇಕು ॥೧೦॥

ಯಾವತ್–ಯಾವುವರಿಗೆ, ಅಯಂ–ಈ, ದೇಹಃ–ಶರೀರವು, ತಿಷ್ಠತಿ–ಇರುತ್ತದೋ, ತಾವತ್–ಅದುವರಿಗೆ, ತತ್ವಂ––ಸಕಲವೇದಾಗಮ ಪುರಾಣೇತಿಹಾಸತಾತ್ಪರ್ಯಭೂತವಾದ ಆತ್ಮತತ್ವವನ್ನು,ಸಮಭ್ಯಸೇತ್–ಧ್ಯಾನಾದಿಗಳಿಂದ ಅಭ್ಯಾಸಮಾಡಬೇಕು, ಅಥವಾ ತತ್, ತ್ವಂ, ಅಸಿ ಎಂಬುವದಾದ ಅಂದರೆ, ತತ್–ಬ್ರಹ್ಮವು, ತ್ವಂ–ನೀನು, ಅಸಿ–ಆಗಿದ್ದೀಯೆಂಬದಾಗಿ ಆತ್ಮವಿಚಾರಪರನಾಗಿರಬೇಕು, ಸಂದೀಪ್ತ–ಉರಿದುಹೋದ, ಕೋಣಭವನೇ–ಕೊರೆಡಿಯಲ್ಲಿ, ಮೂಢ–ಸ್ತಬ್ಧವಾದ, ಧೀಃ––ಬುದ್ಧಿಯುಳ್ಳವನು, ಕೂಪಂ–ಭಾವಿಯನ್ನು, ಖನತಿ––ಅಗಿಯುತ್ತಾನೆ, ತಾ॥ ಈ ಶರೀರವು ಘಟ್ಟಿಯಾಗಿರುವಾಗಲೇ, ಸ್ವಸ್ವರೂಪಾತ್ಮಾನುಸಂಧಾನವನ್ನು ಮಾಡಬೇಕು, ಹಾಗೆ ಮಾಡದೇ ಹೋದಲ್ಲಿ, ಬೆಂಕಿಯಿಂದ ಚಿಕ್ಕಮನೆಯು ಸುಟ್ಟಬಳಿಕ ಮೂಢನು ಅಲ್ಲಿ ಭಾವಿಯನ್ನು ತೋಡಿದಂತೆ ಆಗುವುದು ॥ ॥೧೧॥

ಸಂಸಾರ–ದಾರಪುತ್ರಾದಿ ಸಂಸಾರದಿಂದ, ಸಂಭವೈಃ–ಉಂಟಾಗುವ, ನಾನಾಕಾರ್ಯೈಃ–ಅನೇಕ ಬಗೆಗಳಾದ ಕೆಲಸಗಳಿಂದ, ಕಾಲಃ––ಹೊತ್ತು, ನಜ್ಞಾಯತೆ–ಗೊತ್ತಾಗುವದಿಲ್ಲ, ಜನಃ–ಜನವು, ಸುಖಂ–ಸುಖವನ್ನು, ದುಃಖಂ–ವ್ಯಸನವನ್ನು, ಆತ್ಮನಃ–ತನಗೆ, ಹಿತಂ–ಯುಕ್ತವಾದದ್ದನ್ನು, ನವೇತ್ತಿ–ತಿಳಿಯುವದಿಲ್ಲ, ಹಂತ–ಅಕಟ. ॥ತಾ॥ ಸಾಂಸಾರಿಕಕಾರ್ಯಗಳಿಂದ ಕಾಲವು ಕಳೆಯುತ್ತಾ ಒರುವದನ್ನು ಜನರು ತಿಳಿಯುವುದಿಲ್ಲ, ಮುಂದೆ ತನಗೆ ಉಂಟಾಗುವ ಸುಖವನ್ನಾಗಲಿ, ದುಃಖವನ್ನಾಗಲಿ, ಯುಕ್ತವಾದದ್ದನ್ನಾಗಲಿ, ಅಯ್ಯೋ ಜನರು ತಿಳಿಯುವವರಾಗುವದಿಲ್ಲ ॥ ॥೧೨॥

ಜಾತಾನ್–ಹುಟ್ಟದವರನ್ನು, ಆರ್ತಾನ್–ಬಾಧೆಪಡುತ್ತಿರುವವರನ್ನು,

ನ್ಮೃತಾನಾಪದ್ಗ್ರಸ್ತಾನ್ದೃಷ್ಟ್ವಾಚದುಃಖಿತಾನ್।ಲೋ
ಕೋಮೋಹಸುರಾಂಪೀತ್ವಾನಭಿಭೇತಿಕದಾಚನ ॥ ೧೩ ॥ ಸಂ
ಪದಸ್ಸ್ವಪ್ನಸಂಕಾಶಾಃ ಯೌವನಂಕುಸುಮೋಪಮಂ ।
ತಟಿಚ್ಚಪಲಮಾಯುಷ್ಯಂಕಸ್ಯಸ್ಯಾಜ್ಜಾನತೋಧೃತಿಃ॥೧೪॥
ಶತಜೀವಿತಮತ್ಯಲ್ಪಂ ನಿದ್ರಾಲಸ್ಯೈಸ್ತದರ್ಧಕಂ । ಬಾ

ಮೃತಾನ್-ಸತ್ತವರನ್ನು, ಆಪದ್ಗ್ರಸ್ತಾನ್-ವಿಪತ್ತಿಗೆ ಗುರಿಯಾದವರನ್ನು, ದುಃಖಿತಾನ್-ಶೋಕಿಸುತ್ತಿರುವವರನ್ನು, ದೃಷ್ಟ್ವಾಚ-ನೋಡುತ್ತಿದ್ದಾಗ್ಯೂ, ಲೋಕಃ-ಜನವು, ಮೋಹ-ಅಜ್ಞಾನವೆಂಬ, ಸುರಾಂ-ಹೆಂಡವನ್ನು, ಪೀತ್ವಾ-ಕುಡಿದು, ಕದಾಚನ-ಒಂದಾನೊಂದು ಕಾಲದಲ್ಲಿಯಾದರೂ, ನಬಿಭೇತಿ-ಭಯಪಡುವದಿಲ್ಲ. ॥ತಾ॥ ಹುಟ್ಟಿದವರನ್ನು, ಸತ್ತವರನ್ನು, ಬಾಧೆಪಡುತ್ತಿರುವವರನ್ನು, ವಿಪತ್ತುಗಳಿಗೆ ಗುರಿಯಾಗಿರುವವರನ್ನು, ವ್ಯಸನಿಗಳನ್ನು ನೋಡುತ್ತಿದ್ದಾಗ್ಯೂ, ಜನವು ಅಜ್ಞಾನವೆಂಬ ಹೆಂಡವನ್ನು ಕುಡಿದು, ಒಂದು ಕಾಲದಲ್ಲಿಯಾದರೂ ಭಯಪಡುವದಿಲ್ಲ ॥ ॥೧೩॥

ಸಂಪದಃ-ಸಂಪತ್ತುಗಳು, ಸ್ವಪ್ನ-ಕನಸಿಗೆ, ಸಂಕಾಶಾಃ-ಸಮಾನಗಳಾಗಿರುವವು, ಯೌವನಂ-ಪ್ರಾಯವು, ಕುಸುಮೋಪಮಂ-ಹೂವಿಗೆ ಸಮಾನವಾಗಿರುವದು ಆಯುಷ್ಯಂ-ಆಯುಸ್ಸು. ತಟಿಚ್ಚಪಲಂ-ಮಿಂಚಿನಂತೆ ತರಳವಾಗಿರುವದು, ಜಾನತಃ-ಇವುಗಳನ್ನು ತಿಳಿದವನಾದ, ಕಸ್ಯ-ಯಾವನಿಗೆ, ಧೃತಿಃ-ಧೈರ್ಯವು, ಸ್ಯಾತ್-ಉಂಟಾಗುವದು ॥ ॥೧೪॥

ಶತಜೀವಿತಂ-ನೂರು ವರ್ಷದವರಿಗೆ ಬದುಕುವದೇ, ಅತ್ಯಲ್ಪಂ-ಬಹಳ ತುಸವಾಗಿರುವದು,ನಿದ್ರಾಲಸ್ಯೈಃ-ನಿದ್ರೆ ಅಲಸಟಿಗಳಿಂದ, ತತ್-ಆ ನೂರು ವರ್ಷಗಳ ಬದುಕುವಿಕೆಯು, ಅರ್ಧಕಂ-ಅರೆಯಾಗುವದು, ಅಂದರೆ ರಾತ್ರಿ ೩೦ ಘಳಿಗೆಯಲ್ಲಿ ನಿದ್ರಾಕಾಲವಾದ್ದರಿಂದ, ಐವತ್ತು ವರ್ಷಗಳು ಹೋಗುವವು, ಬಾಲ್ಯರೋಗಜರಾದುಃಖೈಃ-ಹುಡುಗತನದಿಂದಲೂ, ಬೇನೆಯಿಂದಲೂ, ಮುಪ್ಪಿನಿಂದಲೂ, ವ್ಯಸನಗಳಿಂದಲೂ, ಅಲ್ಪಂ-ಸ್ವಲ್ಪವಾಗಿ ಹೋಗುವದು, ತದಪಿ-ಹಾಗೆ ಉಳಿದ ಅಲ್ಪಕಾಲವು, ನಿಷ್ಫಲಂ-ಸುಕರ್ಮವಿಲ್ಲದೇ ಇರುವದ್ದರಿಂದ, ನಿಷ್ಫಲವಾಗಿ ಹೋಗು

ಲ್ಯರೋಗಜರಾದುಃಖೈರಲ್ಪಂತಪತಿಸಿಷ್ಯಲಂ ॥ ೧೫ ॥ ಪ್ರಾ
ರಬ್ಧವ್ಯೋನಿರುದ್ಯೋಗೋಜಾಗರ್ತವ್ಯಃಪ್ರಸುಪ್ತಕಃ । ವಿ
ಶ್ವಸ್ತವ್ಯೋಭಯಸ್ಥಾನೇಹಾನರಕ್ಕೈಸಹನ್ಯತೇ ॥೧೬॥ ತೋಯ
ಫೇನಸಮೇದೇಹೇಜೀವೇನಾಕ್ರಮ್ಯಸಂಸ್ಥಿತೇ । ಅನಿತ್ಯಪ್ರಿಯ
ಸಂವಾಸೇಕಥಂತಿಷ್ಠತಿನಿರ್ಭಯಃ ॥ ೧೭ ॥ ಅಹಿತೇಹಿತ
ಸಂಜ್ಞಃಸ್ಯಾದಧ್ರುವೋಧ್ರುವಸಂಜ್ಞಕಃ । ಅನರ್ಥೇಚಾರ್ಥ
ವಿಜ್ಞಾನಃಸ್ವಮರ್ಥಂಯೋನವೇತ್ತಿಸಃ ॥ ೧೮ ॥ ಪಶ್ಯನ್ನಪಿ
ಪ್ರಸ್ಖಲತಿಶೃಣ್ವನ್ನಪಿನಬುಧ್ಯತಿ । ಪಠನ್ನಪಿನಜಾನಾತಿ

ಪದ ॥ ॥೧೫॥

ನಿರುದ್ಯೋಗಃ–ಕೆಲಸಮಾಡದವನು, ಪ್ರಾರಬ್ಧವ್ಯಃ–ಆರಂಭಿಸತಕ್ಕವನು, ಪ್ರಸುಪ್ತಕಃ–ಮಲಗಿರುವವನು, ಜಾಗರ್ತವ್ಯಃ–ಎಚ್ಚರವಾಗಿರಬೇಕು, ಭಯಸ್ಥಾನೇ–ಭಯಪಡಬೇಕಾದ ಸಂದರ್ಭದಲ್ಲಿ, ವಿಶ್ವಸ್ತವ್ಯಃ–ಪ್ರೀತಿಸುತ್ತಿರಬೇಕು, ಹಾ–ಅಯ್ಯೋ, ನರಃ–ಮನುಷ್ಯನು,ಕೇನ–ಯಾರಿಂದ, ಹನ್ಯತೇ–ಕೊಲ್ಲಲ್ಪಡುವನು ॥ ॥೧೬॥

ತೋಯ–ನೀರಿನ, ಫೇನ–ಗುಳ್ಳೆಗೆ, ಸಮೇ–ಸರಿಯಾದ, ದೇಹೇ–ಶರೀರದಲ್ಲಿ, ಜೀವೇನ–ಜೀವಾತ್ಮನಿಂದ, ಆಕ್ರಮ್ಯ–ಆಶ್ರಯಿಸಿ, ಸಂಸ್ಥಿತೇ ಸತಿ–ಇರೋಣವಾಗುತ್ತಿರಲು ಅನಿತ್ಯ–ಸ್ಥಿರವಲ್ಲದ, ಪ್ರಿಯಸಂವಾಸೇ–ಇಷ್ಟವಾಗಿ ತೋರುವ ಮನೆಯಲ್ಲಿ, ನಿರ್ಭಯಃ–ಅಂಜಿಕೆಯಿಲ್ಲದವನಾಗಿ, ಕಥಂ–ಹೇಗೆ, ತಿಷ್ಠತಿ–ಇರುತ್ತಾನೆ ॥ ॥೧೭॥

ಅಹಿತಃ–ಹಿತವಲ್ಲದ್ದು, ಹಿತಸಂಜ್ಞಃ–ಇಷ್ಟವಾದದ್ದು, ಸ್ಯಾತ್–ಆಗುವದು, ಅಧ್ರುವಃ–ಅಸ್ಥಿರವಾದದ್ದು, ಧ್ರುವಸಜ್ಞಕಃ–ಸ್ಥಿರವಾದದ್ದಾಗಿ, ಸ್ಯಾತ್–ಆಗುವದು,ಯಃ–ಯಾವ ಮನುಷ್ಯನು,ಸ್ವಮರ್ಥಂ–ತನ್ನ ಪ್ರಯೋಜನವನ್ನು,ನವೇತ್ತಿ–ತಿಳಿಯುವದಿಲ್ಲವೋ ! ಸಃ–ಅವನು, ಅನರ್ಥೇ–ಕೇಡುಂಟುಮಾಡುವದರಲ್ಲಿ, ಅರ್ಥವಿಜ್ಞಾನಃ–ಫಲಜ್ಞಾನವುಳ್ಳವನು, ಸ್ಯಾತ್–ಆಗುವನು ॥ ॥೧೮॥

ದೇವಮಾಯಯಾ–ವಿಷ್ಣುಮಾಯೆಯಿಂದ, ವಿಮೋಹಿತಃ–ಮೋಹವುಳ್ಳವನಾಗಿ, ಪಶ್ಯನ್ನಪಿ–ನೋಡುತ್ತಿರುವವನಾಗಿದ್ದಾಗ್ಯೂ, ಪ್ರಸ್ಖಲತಿ–

ಜಪವಶಾತ್ಪಾಪಿನೋಹಿತಃ ॥ ೧೯ ॥ ಯಾತೇಸಮುಜ್ಜಜ್ಜಗ
ದಂಗಂಭೀರೇಕಾಲಸಾಗರೇ । ಮೃತ್ಯುರೋಗಮಹಾಗ್ರಾಹ್ಯೈ
ರ್ನಕಶ್ಚಿದಪಿಬುಧ್ಯತೇ ॥೨೦॥ ಪ್ರತಿಕ್ಷಣಮಯಂಕಾಲಃ ಕ್ಷೀ
ಯಮಾಣೋನಲಕ್ಷ್ಯತೇ । ಆಮಕುಂಭಮಿವಾಂಭಸ್ಥೋ ವಿ
ಶೀರ್ಣೋನವಿಭಾವ್ಯತೇ ॥ ೨೧ ॥ ಯುಜ್ಯತೇವೇಷ್ಟನಂವಾ
ಯೋರಾಕಾಶಸ್ಯಚಖಂಡನಂ । ಗ್ರಥನಂಚತರಂಗಾಣಾಮಾ
ಸ್ಥಾನಾಯುಷಿಯುಜ್ಯತೇ ॥೨೨॥ ಪೃಥಿವೀದಹ್ಯತೇಯೇನಮೇ

ತಪ್ಪಿಹೋಗುತ್ತಾನೆ, ಶೃಣ್ವನ್ನಪಿ-ಕೇಳುತ್ತಿರುವವನಾದಾಗ್ಯೂ, ನ ಬುಧ್ಯತಿ-ತಿಳಿಯುವವನಾಗುವದಿಲ್ಲ, ಪಠನ್ನಪಿ--ಓದುತ್ತಿರುವವನಾದಾಗ್ಯೂ, ನಜಾನಾತಿ-ತಿಳಿಯುವವನಾಗುವದಿಲ್ಲ ॥ ॥೧೯॥

ಮೃತ್ಯುರೋಗ ಮಹಾಗ್ರಾಹೈಃ-ಮರಣವು ರೋಗವೆಂಬ ಮೊಸಳೆಗಳಿಂದ, (ಯಾತೇ-ಕೂಡಿರುವದಾದ,) ಗಂಭೀರೇ-ಅಗಾಧವಾದ, ಕಾಲಸಾಗರೇ-ಕಾಲವೆಂಬ ಸಮುದ್ರದಲ್ಲಿ, ಸಮುಜ್ಜತ್-ಮುಳುಗುತ್ತಿರುವ, ಇದಂ-ಈ, ಜಗತ್-ಪ್ರಪಂಚವು, (ಇತಿ ಹೀಗೆ-ಜ್ಞಾತ್ವಾಪಿ-ತಿಳಿದೂಸೂ) ನಕಶ್ಚಿತ್-ಒಬ್ಬನಾದರೂ, ಬುಧ್ಯತೇ-ಜ್ಞಾನವಂತನಾಗುವದಿಲ್ಲ ॥೨೦॥

ಪ್ರತಿಕ್ಷಣಂ-ಪ್ರತಿ ನಿಮಿಷವೂ, ಅಯಂ-ಈ, ಕ್ಷೀಯಮಾಣಃ-ಗತಿಸುತ್ತಿರುವ, ಕಾಲಃ-ಹೊತ್ತು, ನಲಕ್ಷ್ಯತೇ-ಜನರಿಂದ. ನೋಡಲ್ಪಡುವದಿಲ್ಲ. ಅಂಭಸ್ಥಃ-ನೀರಿನಲ್ಲಿರುವ. ಆಮಕುಂಭಇವ-ಮಣ್ಣಿನ ಹಸೀಮಡಿಕೆಯಂತೆ, ವಿಶೀರ್ಣಃ-ಕರಗಿಹೋದಂಥಾದ್ದು, ನವಿಭಾವ್ಯತೇ-ಕಾಣುವದಿಲ್ಲ ॥ ॥೨೧॥

ವಾಯೋಃ-ಗಾಳಿಯ, ವೇಷ್ಟನಂ-ಗ್ರಹಣವು, ಆಕಾಶಸ್ಯ-ಅಂಬರದ, ಖಂಡನಂ-ಭಾಗ ಮಾಡುವಿಕೆಯು, ತರಂಗಾಣಾಂ-ಅಲೆಗಳ, ಗ್ರಥನಂ-ಕೂಡಿಸುವಿಕೆಯು, ನಯುಜ್ಯತೇ-ಮಾಡಲಾಗುವದಿಲ್ಲ, ಹಾಗೆ, ಆಸ್ಥಾ-ಆಶೆಯು, ಆಯುಷಿ-ಆಯುಸ್ಸಿನಲ್ಲಿ, ನಯುಜ್ಯತೇ-ಕೂಡುವದಿಲ್ಲ॥ ॥೨೨॥

ಯೇನ-ಯಾವಕಾಲದಿಂದ, ಪೃಥಿವೀ-ಭೂಮಿಯು, ದಹ್ಯತೇ-ಸುಡಲ್ಪಡುವದೋ, ಮೇರುಃ-ಮೇರು ಪರ್ವತವು, ವಿಶೀರ್ಯತಿ-ಒಡೆಯಲ್ಪಡುವದೋ, ಸಾಗರಜಲಂ-ಸಮುದ್ರಜಲವು, ಶುಷ್ಯತೇ-ಒಣಗಿ ಹೋ

ರುಕ್ಪಾಪಿವಿಶೀರ್ಯತೇ । ಶುಷ್ಯತೇಸಾಗರಜಲಂಶರೀರಸ್ಯಚ
ಕಾಕಥಾ ॥೨೩॥ ಅಪತ್ಯಂಮೆಕಳತ್ರಂಮೆಧನಂಮೆಬಾಂಧ
ವಾಶ್ಚಮೆ । ಜಲ್ಪಂತಮಿತಿಮರ್ತ್ಯಾಜಂ ಹಂತಿಕಾಲವೃ
ಕೋಬಲಾತ್॥೨೪॥ಇದಂಕೃತಮಿದಂಕಾರ್ಯಮಿದಮನ್ಯತ್ಕೃ
ತಾಕೃತಂ । ಏವಮೀಹಾಸಮಾಯುಕ್ತಂ ಕೃತಾಂತಃಪರಿ
ಕರ್ಷತಿ ॥೨೫॥ ಶ್ವಃಕಾರ್ಯಮದ್ಯಕುರ್ವೀತಪೂರ್ವಾಹ್ಣೆಚಾ
ಪರಾಹ್ಣಿಕಂ । ನಹಿಮೃತ್ಯುಪ್ರತೀಕ್ಷೇತಕೃತಂವಾಪ್ಯ

ಗುತ್ತದೆಯೋ, ಶರೀರಸ್ಯ-ದೇಹದ, ಕಥಾ-ವೃತ್ತಾಂತವು, ಕಾ-ಯಾ
ವದು ॥ ॥೨೩॥

ಮೆ-ನನ್ನ, ಅಪತ್ಯಂ-ಸಂತಾನವು, ಮಗನನು, ಕಳತ್ರಂ-ಹೆಂಡತಿ
ಯು, ಮೆ-ನನ್ನ, ಧನಂ-ದ್ರವ್ಯವು, ಮೆ-ನನ್ನ, ಬಾಂಧವಾಶ್ಚ-ಬಂಧು
ಗಳು, ಇತಿ-ಹೀಗೆ, ಜಲ್ಪಂತಂ-ಮಾತನಾಡುತ್ತಿರುವ, ಮರ್ತ್ಯಾಜಂ-
ಮನುಷ್ಯನೆಂಬ ಮೇಕೆಯನ್ನು, ಕಾಲವೃಕಃ-ಕಾಲವೆಂಬ ತೋಳವು,
ಬಲಾತ್-ಸಾಮರ್ಥ್ಯದಿಂದ,ಹಂತಿ-ಕೊಲ್ಲುವುದು॥ ॥೨೪॥

ಇದಂ-ಈಕೆಲಸವು, ಕೃತಂ-ಮಾಡಲ್ಪಟ್ಟಿತು, ಇದಂ-ಈಕೆಲಸವು,
ಕಾರ್ಯಂ-ಮಾಡಲ್ಪಡಬೇಕು, ಇದಂ-ಈಕಾರ್ಯವು, ಅನ್ಯತ್-ಇತರಬೇ
ರೆಕೆಲಸವು, ಕೃತಾಕೃತಂ-ಅರ್ಧಾಂತಿಕವಾಗಿ ಮಾಡಲ್ಪಟ್ಟಿತು, ಏವಂ-
ಈರೀತಿಯಾಗಿ, ಈಹಾ-ಕೋರಿಕೆಯಿಂದ, ಸಮಾಯುಕ್ತಂ-ಕೂಡಿರು
ವವನಾದವನನ್ನು, ಕೃತಾಂತಃ-ಯಮನು, ಪರಿಕರ್ಷತಿ-ಶೆಳೆಯು
ತ್ತಾನೆ ॥ ॥೨೫॥

ಶ್ವಃಕಾರ್ಯಂ-ನಾಳೆಮಾಡಬೇಕಾದ ಕೆಲಸವನ್ನು, ಅದ್ಯ-ಈದಿನದಲ್ಲಿ
ಯೇ, ಕುರ್ವೀತ-ಮಾಡಬೇಕು, ಅಪರಾಹ್ಣಿಕಂ-ಮಧ್ಯಾಹ್ನವಾದ
ಮೇಲೆಮಾಡಬೇಕೆಂದು ಯೋಚಿಸಿರುವ ಧರ್ಮಕಾರ್ಯವನ್ನು, ಪೂರ್ವಾ
ಹ್ಣೇ-ಬೆಳಿಗ್ಗೇನೆ, ಕುರ್ವೀತ-ಮಾಡುತ್ತಾಬರಬೇಕು,ಮೃತ್ಯು-ಮೃತ್ಯು
ದೇವತೆಯು, ಕೃತಂವಾ-ಮಾಡಿದವನನ್ನಾಗಲಿ, ಅಥವಾ-ಹಾಗೆ ಅಲ್ಲದೆ,
ಅಕೃತಂ-ಮಾಡದೇಇರುವವನನ್ನಾಗಲಿ,ನಪ್ರತೀಕ್ಷೇತ-ನಿರೀಕ್ಷಿಸಿಕೊಂ

ಧವಾಕ್ಕೃತಂ ॥೬॥ ಜರಾಪರ್ಶಿತಪಂಥಾನಂಪ್ರಚಂಡವ್ಯಾ
ಧಿಸೈನಿಕಂ । ಮೃತ್ಯುಶತ್ರುಮಧಿಷ್ಠಾಸಿತ್ರಾತಾರಂಕಿಂನಪ
ಶ್ಯಸಿ ॥೭॥ ತೃಷ್ಣಾಸೂಚೀವಿನಿರ್ಭಿನ್ನಂಸಿಕ್ತಂವಿಷಯಸ
ರ್ಪಿಷಾ । ರಾಗದ್ವೇಷಾನಲೇಪಕ್ವಂಮೃತ್ಯುರಶ್ನಾತಿಮಾನ
ವಂ ॥೮॥ ಬಾಲಾಂಶ್ಚಯೌವನಸ್ಥಾಂಶ್ಚವೃದ್ಧಾನ್ಗರ್ಭ
ಗತಾನಪಿ । ಸರ್ವಾನಾವಿಶತೇಮೃತ್ಯುರೇವಂಭೂತಮಿದಂಜ
ಗತ್ ॥ ೯ ॥ ಸ್ವದೇಹಮಪಿಜೀವೋಯಂಮುಕ್ತ್ವಾಯಾತಿ

ದಿರುವದಿಲ್ಲ ॥ ॥೬॥

ಜರಾ-ಮುಪ್ಪಿನಿಂದ, ಪರ್ಶಿತ-ತೋರಿಸಲ್ಪಟ್ಟ, ಪಂಥಾನಂ-ದಾರಿ ಯುಳ್ಳವನಾದ, ಪ್ರಚಂಡ-ಕ್ರೂರಗಳಾದ, ವ್ಯಾಧಿ-ರೋಗಗಳೆಂಬ, ಸೈನಿಕಂ-ಸೇನಾಜನವುಳ್ಳವನಾದ, ಮೃತ್ಯುಶತ್ರುಂ-ಮೃತ್ಯುದೇವತೆಯೆಂಬ ಶತ್ರುವನ್ನು, ಅಧಿಷ್ಠಾಸಿ-ಹೊಂದಿರುತ್ತಿ, ತ್ರಾತಾರಂ-ಮೃತ್ಯುವಿನಿಂದ ರಕ್ಷಿಸುವವನನ್ನು, ಕಿಂ-ಏನು, ನಪಶ್ಯಸಿ-ಹುಡಿಕಿ ನೋಡುವದಿಲ್ಲ ॥೭॥

ತೃಷ್ಣಾ-ಆಶೆಯೆಂಬ, ಸೂಚೀ-ಸೂಜಿಯಿಂದ, ವಿನಿರ್ಭಿನ್ನಂ-ಭೇದಿಸಲ್ಪಟ್ಟಿರುವ, ವಿಷಯ-ಸ್ರಕ್ಚಂದನವನಿತಾದಿರೂಪವಾದ ವಿಷಯಗಳೆಂಬ, ಸರ್ಪಿಷಾ-ತುಪ್ಪದಿಂದ, ಸಿಕ್ತಂ-ನೆನಿಸಲ್ಪಟ್ಟವನಾದ, ರಾಗದ್ವೇಷಾನಲೆ-ಅನುರಾಗವಿರೋಧಗಳೆಂಬ ಬೆಂಕಿಯಲ್ಲಿ, ಪಕ್ವಂ-ಬೇಯಿಸಲ್ಪಟ್ಟವನಾದ, ಮಾನವಂ-ಮನುಷ್ಯನನ್ನು, ಮೃತ್ಯುಃ-ಮೃತ್ಯುದೇವತೆಯು, ಅಶ್ನಾತಿ-ತಿನ್ನುತ್ತಿರುವದು ॥ ॥೮॥

ಮೃತ್ಯುಃ-ಮೃತ್ಯುದೇವತೆಯು, ಬಾಲಾನ್-ಹುಡುಗರನ್ನು, ಯೌವನಸ್ಥಾಂಶ್ಚ-ಪ್ರಾಯದವರನ್ನು, ವೃದ್ಧಾನ್-ಮುದುಕರನ್ನು, ಗರ್ಭಗತಾನ್-ಗರ್ಭದಲ್ಲಿ ಇರುವವರನ್ನು, ಸರ್ವಾನ್-ಸಮಸ್ತ ಪ್ರಾಣಿಗಳನ್ನು, ಆವಿಶತೆ-ಪ್ರವೇಶಿಸುವದು, ಇದಂ-ಈ, ಜಗತ್-ಪ್ರಪಂಚವು, ಏವಂಭೂತಂ-ಈ ರೀತಿಯಾಗಿರುವದು ॥ ॥೯॥

ಅಯಂ-ಈ, ಜೀವಃ-ಜೀವಾತ್ಮನು, ಸ್ವದೇಹಮಪಿ-ತನ್ನ ದೇಹವನ್ನು ಕೂಡ, ಮುಕ್ತ್ವಾ-ಬಿಟ್ಟು, ಯಮಾಲಯಂ-ಯಮಪುರವನ್ನು ಕುರಿತು, ಯಾತಿ-ಹೋಗುತ್ತಲಿದ್ದಾನೆ, ಕೇನ-ಯಾವ, ಹೇತುನಾ-ಕಾ

ಯಮಾಲಯಂ । ಸ್ತ್ರೀಮಾತೃಪಿತೃಪುತ್ರಾದಿಸಂಬಂಧಕ್ಕೆ
ನಹೇತುನಾ ॥ ೩೦ ॥ ಸಂಸಾರೋ ದುಃಖಮೂಲಸ್ಸ್ಯಾತ್ಸಯ
ಸ್ಯಾಸ್ತಿಸದುಃಖಿತಃ । ತಸ್ಯತ್ಯಾಗಕ್ಕೃತೋಯೇನಸಸುಖೀ
ನಾಪರಕ್ಕ್ವಚಿತ್ ॥ ೩೧ ॥ ಪ್ರಭವಂಸರ್ವದುಃಖಾನಾಮಾ
ಲಯಂಸಕಲಾಪದಾಂ । ಆಶ್ರಯಂಸರ್ವಪಾಪಾನಾಂಸಂ

ರಣದಿಂದ, ಸ್ತ್ರೀ-ಹೆಂಡತಿ, ಮಾತೃ-ತಾಯಿ,ಪಿತೃ-ತಂದೆ, ಪುತ್ರ-ಮ
ಗನೇ, ಆದಿ-ಮೊದಲಾದವರ, ಸಂಬಂಧಃ-ಸಹವಾಸವು, ಭವೇತ್-ಉಂ
ಟಾದೀತು ॥ ॥೩೦॥

ಸಂಸಾರಃ-ಸಂಸ್ಕೃತಿಯು, ದುಃಖಮೂಲಃ-ದುಃಖವೇ ಬುಡವಾಗುಳ್ಳ
ದ್ದು, ಸ್ಯಾತ್-ಆಗುವದು, ಸಃ-ಆ ಸಂಸಾರವು, ಯಸ್ಯ-ಯಾವನಿಗೆ, ಅ
ಸ್ತಿ-ಇರುವದೋ, ಸಃ-ಅವನು, "ದುಃಖಿತಃ-ವ್ಯಸನವುಳ್ಳವನಾಗುವನು,
ತಸ್ಯ-ಆ ಸಂಸಾರದ, ತ್ಯಾಗಃ-ಪರಿತ್ಯಾಗವು, ಯೇನ-ಯಾವ ಮನು
ಷ್ಯನಿಂದ, ಕೃತಃ-ಮಾಡಲ್ಪಟ್ಟಿರುವದೋ, ಸಃ-ಅವನು, ಸುಖೀ-ಆ
ನಂದವುಳ್ಳವನಾಗುವನು, ಅಪರಃ-ಸಂಸಾರವನ್ನು ಬಿಡದೇ ಇರುವವ
ನು, ಕ್ವಚಿತ್-ಒಂದು ಕಾಲದಲ್ಲಾದಾಗ್ಯೂ, ನ-ಸುಖಿಯಲ್ಲವು. ॥ತಾ॥
ಜನನಮರಣ ಪ್ರವಾಹರೂಪವಾದ ಸಂಸಾರವನ್ನು ಬಿಟ್ಟವನು, ಅಂ
ದರೆ ಸಮಸ್ತ ಸುಕರ್ಮವನ್ನು ಈಶ್ವರಾರ್ಪಣಮಾಡಿ, ನಿರ್ಲಿಪ್ತನಾದವ
ನು, ಸುಖಿಯಾಗುವನು, ಹಾಗೆಯಿಲ್ಲದೆ ಕಾಮಸಂಕಲ್ಪಾದಿಗಳಿಂದ ಕ
ರ್ಮಾಚರಣೆಯನ್ನು ಮಾಡಿ,ಈಶ್ವರಾರ್ಪಣೆಯನ್ನು ಮಾಡದೆ,ಬ್ರಹ್ಮಚಿಂ
ತಕನಲ್ಲದವನು ಸುಖಿಯಾಗುವದಿಲ್ಲ ॥ ॥೩೧॥

ಸರ್ವದುಃಖಾನಾಂ-ಸಮಸ್ತ ವ್ಯಸನಗಳಿಗೆ,ಪ್ರಭವಂ-ಉತ್ಪತ್ತಿಸ್ಥಾ
ನವಾದ, ಸಕಲ-ಸಮಸ್ತವಾದ, ಆಪದಾಂ-ವಿಪತ್ತುಗಳಿಗೆ, ಆಲಯಂ-
ಮನೆಯಾಗಿರುವ, ಸರ್ವ-ಸಮಸ್ತಗಳಾದ, ಪಾಪಾನಾಂ-ಪಾತಕಗಳಿಗೆ,
ಆಶ್ರಯಂ-ಆಕರವಾದ, ಸಂಸಾರಂ-ಕಳತ್ರಮಿತ್ರಬಾಂಧವಾದಿ ರೂಪ
ವಾದ, ಜನನಮರಣ ಪ್ರವಾಹರೂಪವಾದ ಸಂಸ್ಕೃತಿಯನ್ನು, ನರಃ-
ಮನುಷ್ಯನು, ವರ್ಜಯೇತ್-ಬಿಡಬೇಕು. ॥ತಾ॥ ಸಮಸ್ತ ವ್ಯಸನ
ವಿಪತ್ಪಾಪಗಳಿಗೆ ಆಸರೆಯಾಗಿರುವ ಸಂಸಾರವನ್ನು ಬಿಟ್ಟು,ಪರಮಹಂಸ

ಸಾರಂವರ್ಜಯೆನ್ನರಃ ॥೨೧॥ ಲೋಹದಾರುಮಯೈಃಪಾ
ಶೈಃಪುಮಾನ್ಬದ್ಧೋವಿಮುಚ್ಯತೇ। ಪುತ್ರದಾರಮಯೈಃಪಾ
ಶೈರ್ಮುಚ್ಯತೇನಕದಾಚನ ॥ ೨೨ ॥ ಯಾವತಃಕುರುತೇಜಂ
ತುಃ ಸಂಬಂಧಾನ್ಮನಸಃಪ್ರಿಯಾನ್ । ತಾವತೋಸ್ಯನಿಖ

ವೃತ್ತಿಯನ್ನು ಹೊಂದುವವನಾಗಿರಬೇಕೆಂಬ ಭಾವವು ॥ ॥೨೧॥

ಲೋಹದಾರುಮಯೈಃ-ಲೋಹ,ಉಕ್ಕು,ತಾಮ್ರಮುಂತಾದವುಗಳ, ದಾರು-ಮರದ ಸಂಬಂಧವಾದ,ಪಾಶೈಃ-ತಂತಿ ಕೋಳಗಳಿಂದ,ಬದ್ಧಃ-ಕಟ್ಟಲ್ಪಟ್ಟವನು, ನಿರ್ಬಂಧಿಸಲ್ಪಟ್ಟವನಾದ, ಪುಮಾನ್-ಪುರುಷನು, ವಿಮುಚ್ಯತೇ-ಮುಕ್ತನಾಗುವನು, ಅಂದರೆ ಬಿಡುಗಡೆಯನ್ನು ಪಡೆಯುವನು, ಪುತ್ರದಾರಮಯೈಃ-ಹೆಂಡತೀ ಮಕ್ಕಳೆಂಬ, ಪಾಶೈಃ-ಹಗ್ಗಗಳಿಂದ, ಬದ್ಧಃ--ಕಟ್ಟಲ್ಪಟ್ಟವನು, ಕದಾಚನ-ಒಂದು ಕಾಲದಲ್ಲಾದರೂ, ನವಿಮುಚ್ಯತೇ-ಬಿಡುಗಡೆಯನ್ನು ಪಡೆಯುವವನಾಗುವದಿಲ್ಲ. ॥ತಾ॥ ಉಕ್ಕಿನ ತಂತಿ ಮುಂತಾದವುಗಳಿಂದ ಕಟ್ಟಿದ್ದವನು, ಅದನ್ನು ಬಿಡಿಸಿಕೊಳ್ಳಬೇಕೆಂಬ ಮನೋವೃತ್ತಿಯುಳ್ಳವನಾಗಿರುತ್ತಾನೆ,ಆದ್ದರಿಂದ ಯಾವಾಗಲಾದರೂ ಅದಕ್ಕೆ ಬಿಡುಗಡೆಯುಂಟಾಗುವದು. ಪುತ್ರಪತ್ನಿಗಳೆಂಬ ಹಗ್ಗದಿಂದ ಕಟ್ಟಿದ್ದವನು,ಪತ್ನೀಪುತ್ರಾದಿಗಳೇ ಯಾವಾಗಲೂ ತನಿಗೆ ಇರಬೇಕೆಂಬ ಮನೋವೃತ್ತಿಯುಳ್ಳವನಾಗಿರುವದ್ದರಿಂದ, ಆವಾಸನಾಬಲದಿಂದ, ಜನನಮರಣ ಪ್ರವಾಹರೂಪವಾದ ಸಂಸಾರ ಸಮುದ್ರದಲ್ಲಿ ಬಿದ್ದು, ಏಳುತ್ತಾ ಮುಳುಗುತ್ತಾ ಮುಕ್ತನಾಗುವದಿಲ್ಲ. ಆದ್ದರಿಂದ ದಾರಾಪುತ್ರಾದ್ಯಭಿಮಾನವೃತ್ತಿಯನ್ನು ಬಿಟ್ಟು, ಬ್ರಹ್ಮಾಕಾರಾಕಾರಿತವಾಗಿ ವೃತ್ತಿಯುಳ್ಳವನಾಗಿರಬೇಕೆಂಬ ಭಾವವು ॥ ॥೨೨॥

ಜಂತುಃ—ಪ್ರಾಣಿಯು, ಯಾವತಃ-ಎಷ್ಟು, ಮನಸಃ—ಚಿತ್ತಕ್ಕೆ, ಪ್ರಿಯಾನ್-ಹಿತಗಳಾದ,ಸಂಬಂಧಾನ್-ಸಂಬಂಧಗಳನ್ನು,ಕುರುತೇ-ಮಾಡುವದೋ,ತಾವತಃ—ಅಷ್ಟು ಸಂಖ್ಯೆಯುಳ್ಳ, ಶೋಕಶಂಕವಃ—ದುಃಖಗಳೆಂಬ ಮೊಳೆಗಳು, ಅಸ್ಯ-ಈಪ್ರಾಣಿಯ, ಹೃದಯೇ—ಉರದಲ್ಲಿ, ನಿಖನ್ಯಂತೇ—ನೆಡುವವು. ॥ತಾ॥ ಪ್ರಾಣಿಯು ಯಾವದರಮೇಲೆ ಎಷ್ಟೆಷ್ಟು ಪ್ರಿಯವಾದ ಸಂಬಂಧವನ್ನು ಮಾಡುತ್ತಾನೋ,ಅಷ್ಟೆಷ್ಟು ದುಃ

ನ್ಯಂತೆಹೃದಯೆಶೋಕಶಂಕವಃ ॥ ೩೪ ॥ ಮಾಂಸಲುಬ್ಧೊ
ಯಥಾಮತ್ಸ್ಯೊಲೋಹಶಂಕುಂನಪಶ್ಯತಿ । ಸುಖಲುಬ್ಧ
ಸ್ತಥಾದೆಹಿಯಮಬಾಧಾಂನಪಶ್ಯತಿ ॥ ೩೫ ॥ ಹಿತಾಹಿತ
ಮಜಾನಂತೊನಿತ್ಯಮುನ್ಮಾರ್ಗಗಾಮಿನಃ । ಕುಕ್ಷಿಪೂರಣ
ನಿಷ್ಠಾಯೆತೆ ನರಾನಾರಕಾಃಮುನೆ ॥ ೩೬ ॥ ಪ್ರಭಾತೆಮಲ
ಮೂತ್ರಾಭ್ಯಾಂಕ್ಷುತ್ತೃಡ್ಭ್ಯಾಂಮಧ್ಯೆಗೆರವೌ।ರಾತ್ರೌಮ
ದನನಿದ್ರಾಭ್ಯಾಂಬಾಧ್ಯಂತೆಮೂಢಮಾನವಾಃ ॥ ೩೭ ॥ ಸ್ವ
ದೆಹಧನದಾರಾದಿನಿರತಾಃಸ್ಸರ್ವಜಂತವಃ । ಜಾಯಂತೆಚ

ಖಗಳೆಂಬ ಮೊಳೆಗಳು ತನ್ನ ಹೃದಯದಲ್ಲಿ ನೆಡಲ್ಪಡುವವು ॥ ॥೩೪॥

ಮಾಂಸ-ಮಾಂಸದಲ್ಲಿ, ಲುಬ್ಧಃ-ಆಶೆಯುಳ್ಳದ್ದಾದ, ಮತ್ಸ್ಯಃ-ಮೀನು, ಯಥಾ-ಹೇಗೆ, ಲೋಹಶಂಕುಂ-ಉಕ್ಕಿನ ಚಣೆಯನ್ನು, ನಪಶ್ಯತಿ-ನೋಡುವದಿಲ್ಲವೋ, ಸುಖಲುಬ್ಧಃ-ಭೋಗಾಪೇಕ್ಷೆಯುಳ್ಳವನಾದ, ದೇಹೀ-ಶರೀರಿಯು, ಯಮಬಾಧಾಂ-ಯಮನಿಂದ ಉಂಟಾಗುವ, ಬಾಧಾಂ-ತೊಂದರೆಯನ್ನು, ತಥಾ-ಹಾಗೆ, ನಪಶ್ಯತಿ-ನೋಡುವದಿಲ್ಲ॥ ॥೩೫॥

ಹಿತಾಹಿತಂ-ಇಷ್ಟಾನಿಷ್ಟವನ್ನು, ಅಜಾನಂತಃ-ತಿಳಿಯದವರಾದ, ನಿತ್ಯಂ--ಪ್ರತಿದಿನದಲ್ಲಿಯೂ, ಉನ್ಮಾರ್ಗಗಾಮಿನಃ-ಉತ್ಪಥವನ್ನು ಹೊಂದಿ ನಡೆಯುವವರಾದ, ಕುಕ್ಷಿಪೂರಣನಿಷ್ಠಾಃ-ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುವದರಲ್ಲಿ ಆಸಕ್ತರಾದವರು, ಯೆ-ಯಾರು ಇರುವರೋ, ತೆನರಾಃ-ಆ ಮನುಷ್ಯರು, ಮುನೆ-ವೈಖಾನಸಮುನಿಯೇ, ನಾರಕಾಃ-ನರಕವನ್ನು ಹೊಂದತಕ್ಕವರು ॥ ॥೩೬॥

ಪ್ರಭಾತೆ-ಬೆಳಗ್ಗೆ, ಮಲಮೂತ್ರಾಭ್ಯಾಂ-ಮಲ ಜಲಬಾಧೆಗಳಿಂದ, ರವೌ-ಸೂರ್ಯನು, ಮಧ್ಯಗೆ-ಮಧ್ಯಾಹ್ನಕ್ಕೆ ಬರುತ್ತಿರಲು, ಕ್ಷುತ್ತೃಡ್ಭ್ಯಾಂ-ಹಶಿವೆ ಬಾಯಾರಿಕೆಗಳಿಂದ, ರಾತ್ರೌ-ನಿಶಿಯಲ್ಲಿ, ಮದನನಿದ್ರಾಭ್ಯಾಂ-ಕಾಮನಿದ್ದೆಗಳಿಂದ, ಮೂಢ-ವಿವೇಕಿಗಳಲ್ಲದ, ಮಾನವಾಃ-ಮನುಷ್ಯರು, ಬಾಧ್ಯಂತೆ-ಬಾಧೆಪಡುತ್ತಿರುವರು ॥ ॥೩೭॥

ಸರ್ವಜಂತವಃ-ಸಮಸ್ತ ಪ್ರಾಣಿಗಳು, ಸ್ವದೇಹ-ತನ್ನ ಶರೀರವು, ಧನ-ಹಣವು, ದಾರ-ಹೆಂಡತಿಯು, ಆದಿ-ಮೊದಲಾದ ವಸ್ತುಗಳಲ್ಲಿ, ನಿರತಾಃ--ಅಭಿರುಚಿಯುಳ್ಳವರಾಗಿ, ಅಜ್ಞಾನ-ಅವಿವೇಕದಿಂದ, ಮೋಹಿ

ಮ್ರಿಯಂತೇಚಹಾಹಂತಾ ಜ್ಞಾನಮೋಹಿತಾಃ ॥ ೩೪ ॥ ತ
ಸ್ಮಾತ್ಸಂಗಸ್ಸದಾತ್ಯಾಜ್ಯಃಸರ್ವಸ್ತ್ಯಕ್ತುಂನಶಕ್ಯತೇ।ಮ
ಹದ್ಭಿಸ್ಸಹಕರ್ತವ್ಯಃಸಂತಸ್ಸಂಗಸ್ಯಭೇಷಜಂ॥೩೯॥ ಸತ್ಸಂ
ಗಶ್ಚ ವಿವೇಕಶ್ಚ ನೇತ್ರಯುಗ್ಮಂ-ಸುನಿರ್ಮಲಂ । ಯಸ್ಯನಾಸ್ತಿ
ನರಸ್ಸೋಂಧಃಕಥಂನಸ್ಯಾದಮಾರ್ಗಗಃ ॥೮೦॥ ಸಂಸಾರ
ಜಸುಖಾಸಕ್ತಂಬ್ರಹ್ಮಜ್ಞೋಸ್ಮೀತಿವಾದಿನಂ । ಕರ್ಮಬ್ರ

ತಾಃ-ಮೋಹಪುಳ್ಳವರಾಗಿ, ಜಾಯಂತೇ-ಹುಟ್ಟುತ್ತಾರೆ, ಮ್ರಿಯಂತೇ ಚ-ಸಾಯುತ್ತಾರೆ, ಹಾ-ಅಯ್ಯೋ, ಹಂತ-ಅಕಟ ॥ ॥೩೪॥

ತಸ್ಮಾತ್-ಆದಕಾರಣದಿಂದ,ಸರ್ವಃ-ಸಮಸ್ತವೂ,ತ್ಯಕ್ತುಂ-ಬಿಡುವದಕ್ಕೆ, ನಶಕ್ಯತೇ-ಆಗುವದಿಲ್ಲ, ಸಂಗಃ-ಸಮಸ್ತ ವಸ್ತುಗಳಲ್ಲಿ ಅಭಿಮಾನಸಂಬಂಧವು, ತ್ಯಾಜ್ಯಃ-ಬಿಡತಕ್ಕದ್ದು, ಸಂತಃ-ಸತ್ಪುರುಷರು, ಸಂಗಸ್ಯ-ಸಂಸಾರಸಂಬಂಧಕ್ಕೆ, ಭೇಷಜಂ-ಔಷಧವಾಗಿರುವರು, ಮಹದ್ಭಿಃ-ಸತ್ಪುರುಷರಿಂದ, ಸಂಗಃ-ಸಹವಾಸವು, ಕರ್ತವ್ಯಃ-ಮಾಡತಕ್ಕದ್ದು ॥ ॥೩೯॥

ಸತ್ಸಂಗಶ್ಚ-ಸತ್ಪುರುಷರ ಸಹವಾಸವು, ವಿವೇಕಶ್ಚ-ಯುಕ್ತಾಯುಕ್ತ ವಿಚಾರಜ್ಞಾನವು, (ಇವೆರಡು) ಸುನಿರ್ಮಲಂ-ಸ್ವಚ್ಛವಾದ, ನಯನದ್ವಯಂ-ಎರಡುಕಣ್ಣುಗಳಾಗಿರುವದು,ಇದು,ಯಸ್ಯ-ಯಾವಮನುಷ್ಯನಿಗೆ, ನಾಸ್ತಿ-ಇರುವದಿಲ್ಲವೋ,ಸಃ-ಅವನು, ಅಂಧಃ-ಕುರುಡನಾಗಿರುವನು, ಅಮಾರ್ಗಗಃ-ದುರ್ಮಾರ್ಗದಲ್ಲಿ ನಡೆಯುವವನು, ಕಥಂನಸ್ಯಾತ್-ಹೇಗೆ ಆಗದೇ ಇರುತ್ತಾನೆ. ॥ತಾ॥ ಸತ್ಪುರುಷರ ಸಹವಾಸವು, ಯುಕ್ತಾಯುಕ್ತವಿಚಾರಜ್ಞಾನವು ಯಾವ ಮನುಷ್ಯನಿಗೆ ಇರುವದಿಲ್ಲವೋ, ಅವನು ಕುರುಡನಂತೆ ಪಾಪಕರವಾದ ಕೆಟ್ಟ ದಾರಿಯಲ್ಲಿ ನಡಿಯದೇ ಇರುವದಿಲ್ಲವೆಂಬ ಭಾವವು ॥ ॥೮೦॥

ಸಂಸಾರಜ-ದಾರಾಪುತ್ರಾದಿರೂಪ ಸಂಸಾರದಿಂದವುಂಟಾಗುವ, ಸುಖ-ಭೋಗದಲ್ಲಿಮಾತ್ರ, ಆಸಕ್ತಂ-ನಿರತನಾಗಿದ್ದಾಗ್ಯೂ ಬ್ರಹ್ಮಜ್ಞೋಸ್ಮೀತಿ-ಬ್ರಹ್ಮನನ್ನು ತಿಳಿದವನಾಗಿದ್ದೇನೆಂಬದಾಗಿ,ವಾದಿನಂ-ಹೇಳುತ್ತಿರುವವನಾದ,ಕರ್ಮ-ಯಜ್ಞಾತಪೋರೂಪವಾದಕರ್ಮದಿಂದಲೂ,ಬ್ರಹ್ಮ-ವೇ

ಹ್ಯೋಭಯಭ್ರಷ್ಟಂತಂತ್ಯಜೇದಂತ್ಯಜಂಯಥಾ ॥೪೧॥ ಗೃ
ಹಾರಣ್ಯಸಮಾಲೋಕೇಗತವ್ರೀಡಾದಿಗಂಬರಾಃ । ಚರಂತಿಗ
ರ್ದಭಾದ್ಯಾಶ್ಚವಿರಕ್ತಾಸ್ತೇಭವಂತಿಕಿಂ ॥೪೨॥ ಮೃದ್ಭಸ್ಮೋ

ದಾಂತವಾಕ್ಯಶ್ರವಣದಿಂದ ಉಂಟಾದ ಬ್ರಹ್ಮಚಿಂತನದಿಂದಲೂ, ಅಂದ
ರೆ ಉಭಯ-ಕರ್ಮರೂಪವಾದ ಬ್ರಹಚಿಂತನ ರೂಪವಾದ ಎರಡು ಮಾ
ರ್ಗಗಳಿಂದ,ಭ್ರಷ್ಟಂ-ರಹಿತನಾದ,ತಂ-ಆ ಪುರುಷನನ್ನು,ಅಂತ್ಯಜಂ-
ಹೊಲೆಯವನನ್ನು, ಯಥಾ-ಹೇಗೆಬಿಡಬೇಕೋ (ತಥಾ-ಹಾಗೆ,)ತ್ಯಜೇ
ತ್-ಪರಿತ್ಯಜಿಸಬೇಕು॥ತಾ॥ಕರ್ಮಮಾರ್ಗದಲ್ಲಿಇದ್ದುಕೊಂಡು,ಯಜ್ಞದಾ
ನತಪೋರೂಪಕರ್ಮಗಳನ್ನು ಮಾಡುತ್ತಾ ಇದ್ದವನು,ದೇಹಾವಸಾನದಲ್ಲಿ
ಪೂರ್ವದಲ್ಲಿಹೇಳಿರುವಪುಣ್ಯಲೋಕಗಳನ್ನು ಪಡೆದು,ಆಪುಣ್ಯಫಲವುತೀ
ರಿದಬಳಿಕ ಭೂಲೋಕದಲ್ಲಿಉತ್ತಮಜನ್ಮವುಳ್ಳವನಾಗಿ,ಸತ್ಪುರುಷರಕುಲ
ದಲ್ಲಿಅವನ ಕರ್ಮಾನುಗುಣವಾಗಿ ಜನಿಸುತ್ತಾನೆ.ಸಕಲ ಕರ್ಮಗಳನ್ನು ಈ
ಶ್ವರಾರ್ಪಣಬುದ್ಧಿಯಿಂದ ಮಾಡುತ್ತಾ, ವೇದಾಂತವಿಚಾರವನ್ನು ಮಾ
ಡುತ್ತಾ, ಬ್ರಹ್ಮಚಿಂತಕನಾದ ಗ್ರಹಸ್ಥನು ಮುಕ್ತಿಯನ್ನು ಹೊಂದು
ತ್ತಾನೆ. ಸರ್ವಸಂಗ ಪರಿತ್ಯಾಗವಮಾಡಿ, ಪರಮಹಂಸನಾಗಿ, ಆತ್ಮ
ಜ್ಞಾನಯುಕ್ತನಾದ ವೇದಾಂತಿಯು ಮುಕ್ತನಾಗಿ ಹೋಗುವನು. ಈ
ಕರ್ಮಮಾರ್ಗಬ್ರಹ್ಮಮಾರ್ಗಗಳನ್ನು ಬಿಟ್ಟು, ಸಂಸಾರಸುಖದಲ್ಲಿ ಸ್ರ
ಕ್ಚಂದನವನಿತಾದಿ ಭೋಗಗಳನ್ನು ಅನುಭವಿಸುತ್ತಾ, ಡಂಭದಿಂದ ನಾ
ನು ಬ್ರಹ್ಮಜ್ಞನಾಗಿದ್ದೇನೆಂದು ಹೇಳುವವನನ್ನು ಹೊಲೆಯನನ್ನು ಬಿ
ಟ್ಟಂತೆ ದೂರದಲ್ಲಿ ಪರಿತ್ಯಾಗಮಾಡಬೇಕು ॥ ॥೪೧॥

ಲೋಕೇ-ಪ್ರಪಂಚದಲ್ಲಿ,ಗರ್ದಭಾದ್ಯಾಶ್ಚ-ಕತ್ತೆಯೇ ಮೊದಲಾದವು
ಳು, ಗೃಹಾರಣ್ಯ ಸಮಾಃ ಮನೆಯಲ್ಲಿ ಅಡವಿಯಲ್ಲಿಯೂ ಸಮಾನಜ್ಞಾ
ನವುಳ್ಳದ್ದಾಗಿಯೂ, ಗತವ್ರೀಡಾಃ-ನಾಚಿಕೆ ಇಲ್ಲದೇ, ಇರುವವುಗಳಾಗಿ
ಯೂ, ದಿಗಂಬರಾಃ-ವಸ್ತ್ರಾದ್ಯಾವರಣವಿಲ್ಲದ್ದಾಗಿಯೂ,ಚರಂತಿ-ಸಂ
ಚರಿಸುತ್ತವೆ, ತೇ-ಆಕತ್ತೆಗಳು, ವಿರಕ್ತಾಃ-ವೈರಾಗ್ಯವುಳ್ಳವುಗಳು, ಭ
ವಂತಿಕಿಂ-ಆಗುತ್ತವೆ ಏನು, ಎಂದಿಗೂ ಆಗುವದಿಲ್ಲ ॥ ॥೪೨॥

ಮೃದ್ಭಸ್ಮೋದ್ಧೂಳನಾದೇವ-ಮಣ್ಣನ್ನು ಬೂದಿಯನ್ನು, ಹಣೆಗೆ

ದ್ಘೋಳನಾದೇವ ಮುಕ್ತಾಸ್ಸ್ಯುರ್ಯದಿಮಾನವಾಃ | ಮೃದ್ಭ
ಸ್ಮವಾಸೀನಿತ್ಯಂಶ್ವಾನಃಕಿಂಮುಕ್ತೋಭವಿಷ್ಯತಿ ‖೪೩‖ ತೃ
ಣಪರ್ಣೋದಕಾಹಾರಾಃ ಸತತಂವನವಾಸಿನಃ | ಜಂಬು
ಕಾಖುಮೃಗಾದ್ಯಾಶ್ಚ ತಾಪಸಾಸ್ತೇಭವಂತಿಕಿಂ‖ ೪೪ ‖ಆಜ
ನ್ಮಮರಣಾಂತಂಚಗಂಗಾದಿತಟಿನೀಸ್ಥಿತಾಃ | ಮಂಡೂಕ
ಮತ್ಸ್ಯಪ್ರಮುಖಾಃಯೋಗಿನಸ್ತೇಭವಂತಿಕಿಂ ‖ ೪೫ ‖ ಪಾ
ರಾವತಾಶ್ಶಿಲಾಹಾರಾಃಕದಾಚಿದಪಿಚಾತಕಾಃ | ನಪಿಬಂತಿ

ಹಚ್ಚಿಕೊಳ್ಳುವ ಮಾತ್ರದಿಂದಲೆ, ಮಾನವಾಃ–ಮನುಷ್ಯರು, ಮು
ಕ್ತಾಃ–ಮುಕ್ತಿಯನ್ನು ಪಡದವರು, ಸ್ಯುಃಯದಿ—ಆಗುವರಾದಪ್ಪ,
ಶ್ವಾ–ನಾಯಿಯು, ನಿತ್ಯಂ–ಪ್ರತಿದಿನದಲ್ಲಿಯೂ, ಮೃದ್ಭಸ್ಮವಾಸೀ–
ಮಣ್ಣಿನಲ್ಲಿಯೂ ಭಸ್ಮದಲ್ಲಿಯೂ ಮಲಗಿ ಇರುವದಾದ ಸಃ–ಆನಾ
ಯಿಯು, ಮುಕ್ತಃ–ಮೋಕ್ಷವನ್ನು ಹೊಂದಿದ್ದು, ಬವಿಷ್ಯತಿಕಿಂ–ಆಗು
ತ್ತೇಯೇನು ‖ ‖೪೩‖

ಜಂಬುಕಾಖು ಮೃಗಾದ್ಯಾಶ್ಚ–ನರಿಗಳು ಇಲಿಗಳುಹುಲ್ಲೇಮೊದಲಾ
ದ ಮೃಗಗಳು ತೃಣಪರ್ಣೋದಕಾಹಾರಾಃ–ಹುಲ್ಲು ಎಲೆ ನೀರೇ ಆಹಾ
ರವಾಗಿವುಳ್ಳವುಗಳಾಗಿದ್ದಾಗ್ಯೂ, ಸತತಂ–ನಿರಂತರವು, ವನವಾಸಿನಃ–
ಅರಣ್ಯಗಳಲ್ಲಿ, ತೋಟಗಳಲ್ಲಿ ಇರುವವುಗಳಾಗಿದ್ದಾಗ್ಯೂ, ತೇ–ಅವುಗಳು,
ತಾಪಸಾಃ–ರುಷಿಗಳು, ಭವಂತಿಕಿಂ–ಆಗುತ್ತವೇ ಏನು ‖ ‖೪೪‖

ಆಜನ್ಮ–ಹುಟ್ಟಿದ್ದು ಮೊದಲಾಗಿ, ಮರಣಾಂತಂಚ–ಸಾಯುವವ
ರಿಗೂ, ಗಂಗಾದಿ–ಗಂಗಾನದಿಯೇ ಮೊದಲಾದ, ತಟಿನೀ–ನದಿಗಳಲ್ಲಿ,
ಸ್ಥಿತಾಃ–ಇರುವವುಗಳಾದ, ಮಂಡೂಕ–ಕಪ್ಪೆಗಳು, ಮತ್ಸ್ಯ–ಮೀನು
ಗಳೇ, ಪ್ರಮುಖಾಃ–ಮೊದಲಾದವುಗಳು, ತೇ–ಅವುಗಳು, ಯೋಗಿ
ನಃ–ಧ್ಯಾನಯೋಗಿಗಳು, ಭವಂತಿಕಿಂ–ಆಗುತ್ತವೇ ಏನು ‖ ‖೪೫‖

ಪಾರಾವತಾಃ–ಪಾರಿವಾಳ ಪಕ್ಷಿಗಳು, ಶಿಲಾಹಾರಾಃ–ಕಲ್ಲನ್ನು ನುಂ
ಗುವವು, ಚಾತಕಾಃ–ಚಾತಕ ಪಕ್ಷಿಗಳು, ಕದಾಚಿದಪಿ–ಒಂದು ಕಾಲದ
ಲ್ಲಿಯಾದಾಗ್ಯೂ, ಮಹೀತೋಯಂ–ನೆಲದಲ್ಲಿ ಬಿದ್ದ ನೀರನ್ನು, ನಪಿಬಂ
ತಿ–ಕುಡಿಯುವದಿಲ್ಲ, ತೇ–ಅವುಗಳು, ವ್ರತಿನಃ–ಚಾಂದ್ರಾಯಣಾದಿವ್ರತ

ಮಹೀತೋಯಾಂಪ್ರತಿನಸ್ತಿಭವಂತಿಕಿಂ ||೪೬|| ತಾವತ್ತಪೋ
ವ್ರತಂತೀರ್ಥಂ ಜಪಹೋಮಾರ್ಚನಾದಿಕಂ | ವೇದಶಾ
ಸ್ತ್ರಾಗಮಕಥಾಯಾವತ್ತತ್ವಂನವಿಂದತಿ ||೪೭|| ತಸ್ಮಾ
ದ್ಜ್ಞಾನೇನಾತ್ಮತತ್ವಂವಿಜ್ಞೇಯಂಶ್ರೀಗುರೋರ್ಮುಖಾತ್|
ಸುಖೇನಮುಚ್ಯತೇಪ್ರಾಣೀಘೋರಸಂಸಾರಬಂಧನಾತ್||೪೮||
ಯಥಾಮೃತೇನ ತೃಪ್ತಸ್ಯ ಆಹಾರೇಣಪ್ರಯೋಜನಂ | ತ
ತ್ವಜ್ಞಸ್ಯಹಿಶಾಸ್ತ್ರೇಣವೈಖಾನಸಮುನೇಫಲಂ ||೪೯|| ದೃ
ಢವೈರಾಗ್ಯಮಾಸಾದ್ಯಭಜತೇಮಾಮನನ್ಯಧೀಃ | ಪೂರ್ಣ

ಗಳುಳ್ಳವುಗಳು, ಭವಂತಿಕಿಂ–ಆಗುತ್ತವೆ, ಆಗುವದಿಲ್ಲ|| ||೪೬||

ಯಾವತ್–ಯದುವರಿಗೆ, ತತ್ವಂ–ಬ್ರಹ್ಮತತ್ವವನ್ನು, ನವಿಂದತಿ–ಪಡೆಯುವದಿಲ್ಲವೋ, ತಾವತ್–ಅದುವರಿಗೆ, ತಪಃ–ಕೃಛ್ರಚಾಂದ್ರಾಯಣಾನಶನಾದಿ ರೂಪವಾದ ತಪಸ್ಸು, ವ್ರತಂ–ನಿಯಮವು, ತೀರ್ಥಂ–ಗಂಗಾದಿ ಪುಣ್ಯತೀರ್ಥವು, ಜಪ–ಮಂತ್ರಜಪವು, ಹೋಮಃ–ಹೋಮವು, ಅರ್ಚನಾದಿಕಂ ಪೂಜೆಯುಮೊದಲಾದವುಗಳು, ವೇದ–ಋಗಾದಿ ವೇದಗಳ, ಶಾಸ್ತ್ರ–ಮೀಮಾಂಸಾದಿ ಶಾಸ್ತ್ರಗಳ, ಆಗಮ–ವೈಷ್ಣವ ಶೈವಾದ್ಯಾಗಮಗಳ, ಕಥಾ–ಪ್ರಸಕ್ತಿಯು, (ಬೇಕಾಗಿರುವದು)||೪೭||

ತಸ್ಮಾತ್–ಆದಕಾರಣದಿಂದ, ಆತ್ಮತತ್ವಂ–ಬ್ರಹ್ಮಸ್ವರೂಪವನ್ನು, ಶ್ರೀಗೋರೋರ್ಮುಖಾತ್–ಸದ್ಗುರುವಿನ ಕಡೆಯಿಂದ, ವಿಜ್ಞೇಯಂ–ತಿಳಿಯತಕ್ಕದ್ದು, ಪ್ರಾಣೀ–ಮನುಜನು, ಸುಖೇನ–ಅನಾಯಾಸದಿಂದ, ಘೋರಸಂಸಾರ ಬಂಧನಾತ್–ಕ್ರೂರವಾದ ಸಂಸಾರದ ನಿರ್ಬಂಧದಿಂದ, ಮುಚ್ಯತೇ–ಬಿಡುಗಡೆಯಾಗುತ್ತಾನೆ || ||೪೮||

ಅಮೃತೇನ–ಸುಧೆಯಿಂದ, ತೃಪ್ತಸ್ಯ–ಹೊಟ್ಟೆತುಂಬಿದವನಿಗೆ, ಆಹಾರೇಣ–ಅನ್ನಾದ್ಯಾಹಾರದಿಂದ, ಪ್ರಯೋಜನಂ–ಫಲವು, ಯಥಾ–ಹೇಗೋ, ತಥಾ–ಹಾಗೆ, ತತ್ವಜ್ಞಸ್ಯ–ಆತ್ಮತತ್ವವನ್ನು ತಿಳಿದವನಿಗೆ, ವೈಖಾನಸಮುನೇ–ವೈಖಾನಸ ಮುನಿಯೇ, ಫಲಂ–ಪ್ರಯೋಜನವು, ವುಂಟಾಗುವದು || ||೪೯||

ದೃಢ–ಸ್ಥಿರವಾದ, ವೈರಾಗ್ಯಂ–ವಿರಾಗತೆಯನ್ನು, ಆಸಾದ್ಯ–ಹೊಂ

ದೃಷ್ಟಿಃ ಪ್ರಸನ್ನಾತ್ಮಾಸ ವೈಮುಕ್ತಿ ಮವಾಪ್ನುಯಾ
ತ್ ॥೫೦॥ ತ್ಯಕ್ತ್ವಾಗೃಹಂತುಯಸ್ತೀರ್ಥೇನಿವಸೇನ್ಮರಣೋ
ತ್ಸುಕಃ । ಮುಕ್ತಿಕ್ಷೇತ್ರೇಮೃತಿಂಪ್ರಾಪ್ಯಮೋಕ್ಷಮಾಪ್ನೋ
ತ್ಯಸಂಶಯಂ॥೫೧॥ ಇತಿತೇಕಥಿತೋಮೋಕ್ಷಧರ್ಮಶ್ಚಾಪಿಸನಾ
ತನಃ । ಜ್ಞಾನವೈರಾಗ್ಯ ಸಂಯುಕ್ತಃ ಶ್ರುತ್ವಾಮೋಕ್ಷಮ
ವಾಪ್ನುಯಾತ್॥೫೨॥ ಬ್ರಹ್ಮತತ್ವವಿದೋಮೋಕ್ಷಂಧಾರ್ಮಿಕಾ

ಧಿ, ಅನನ್ಯಧೀಃ-ಮತ್ತೊಂದು ಕಡೆಬುದ್ಧಿಚಂಚಲವಿಲ್ಲದವನಾಗಿ, ಮಾಂ-ನನ್ನನ್ನು, ಭಜತೆ-ಸೇವಿಸುತ್ತಾನೋ, ಸಃ-ಅಂಥಾವನಾದ, ಪೂರ್ಣದೃಷ್ಟಿಃ-ಕಾಣಿಸುತ್ತಿರುವ ವಸ್ತುಗಳೆಲ್ಲವೂ ಬ್ರಹ್ಮಾಕಾರವಾಗಿ ಕಾಣುವ ರೂಪವಾದ ಸಂಪೂರ್ಣದೃಷ್ಟಿಯುಳ್ಳವನಾದ, ಪ್ರಸನ್ನಾತ್ಮಾ--ಮನೋನೈರ್ಮಲ್ಯ ಉಳ್ಳವನಾದ ಮನುಷ್ಯನು, ಮುಕ್ತಿಂ-ಮೋಕ್ಷವನ್ನು, ಅವಾಪ್ನುಯಾತ್-ಪಡೆಯುತ್ತಾನೆ ॥ ॥೫೦॥

ಯಃ-ಯಾವ ಮನುಷ್ಯನು, ಗೃಹಂ-ಮಂದಿರವನ್ನು, ತ್ಯಕ್ತ್ವಾ-ಬಿಟ್ಟು, ತೀರ್ಥೆ-ಗಂಗೆಯೇ ಮೊದಲಾದ ಪುಣ್ಯಕರವಾದ ಜಲದಬಳಿಯಲ್ಲಿ, ಮರಣೋತ್ಸುಕಃ-ಮರಣಾಪೇಕ್ಷೆಯುಳ್ಳವನಾಗಿ, ನಿವಸೇದ್ಯದಿ-ಇರುವವನಾದರೆ, ಮುಕ್ತಿಕ್ಷೇತ್ರೇ-ಅಂಥಾ ಮೋಕ್ಷವನ್ನೀಯ್ಯುವ ದೇಶದಲ್ಲಿ, ಅಂದರೆ ಅಯೋಧ್ಯೆ, ಮಧುರೆ, ಮಾಯೆ, ಕಾಶೀ, ಕಾಂಚೀ, ಅವಂತಿಕೆ, ದ್ವಾರವತೀ ಮುಂತಾದ ಪುಣ್ಯದೇಶಗಳಲ್ಲಿ, ಮೃತಿಂ-ಮರಣವನ್ನು, ಪ್ರಾಪ್ಯ-ಹೊಂದಿ, ಅಸಂಶಯಂ-ಸಂದೇಹವಿಲ್ಲದೆ, ಮೋಕ್ಷಂ-ಮುಕ್ತಿಯನ್ನು, ಆಪ್ನೋತಿ-ಪಡೆಯುತ್ತಾನೆ ॥ ॥೫೧॥

ಇತಿ-ಈ ರೀತಿಯಾಗಿ, ತೇ-ನಿನಗೆ, ಸನಾತನಃ-ಅನಾದಿಯಾಗಿ ಬಂದಿರುವದಾದ, ಜ್ಞಾನ--ಜ್ಞಾನದಿಂದಲೂ, ವೈರಾಗ್ಯ-ವಿರಾಗದಿಂದಲೂ, ಸಂಯುಕ್ತಃ-ಕೂಡಿರುವದಾದ, ಮೋಕ್ಷಧರ್ಮಶ್ಚ-ಮುಕ್ತಿಯನ್ನು ಪಡೆಯಲರ್ಹವಾದ ಧರ್ಮಗಳು, ಕಥಿತಃ-ಹೇಳಲ್ಪಟ್ಟಿತು, ಶ್ರುತ್ವಾ-ಈ ಮೋಕ್ಷಧರ್ಮಗಳನ್ನು ಕೇಳಿದವನಾದರೆ, ಮೋಕ್ಷಂ-ಮುಕ್ತಿಯನ್ನು, ಅವಾಪ್ನುಯಾತ್-ಪಡೆಯುತ್ತಾನೆ ॥ ॥೫೨॥

ಬ್ರಹ್ಮತತ್ವವಿದಃ-ಬ್ರಹ್ಮಸ್ವರೂಪವನ್ನು ತಿಳಿದವರು, ಮೋಕ್ಷಂ-

ಯಾಂತಿಸ್ವರ್ಗತಿಂ । ಕ್ಲೇಶಿನೋದುರ್ಗತಿಂಯಾಂತಿಸಂಸ
ರಂತಿಮೃಗಾದಯಃ ॥೫೭॥ ಏವಂಮಯೋದಿತಂನಿತ್ಯಂಧ್ಯಾ
ಯನ್ವೇಂಕಟಪರ್ವತೇ । ಮಾಮರ್ಚಯಾಂತೇಸುಗತಿಂದುರ್ಲ
ಭಾಂಸಮವಾಪ್ಸ್ಯಸಿ ॥೫೮॥ ಇತ್ಯುಕ್ತ್ವಾಂತರ್ದಧೇಶ್ರೀ
ಶೋಮುನಿರ್ವೈಖಾನಸಸ್ತದಾ। ಅರ್ಚಯಾಮಾಸದೇವೇಶಂವೇಂ
ಕಟೇಪರ್ವತೋತ್ತಮೇ ॥ ೫೯ ॥ ಸೂತಃ॥ ಭವತಾಂ-ಶ್ರೀನಿ

ಮುಕ್ತಿಯನ್ನು, ಧರ್ಮಿಕಾಃ-ಧರ್ಮನಿರತರಾದವರು, ಅಂದರೆ ಪುಣ್ಯಶಾಲಿಗ
ಳು, ಸ್ವರ್ಗತಿಂ-ಇಂದ್ರಸ್ವರ್ಗಾದಿ ಲೋಕಗಳ ಗತಿಯನ್ನು, ಯಾಂ
ತಿ-ಪಡೆಯುತ್ತಾರೆ, ಕ್ಲೇಶಿನಃ-ಪಾಪನಿರತರಾದವರು, ದುರ್ಗತಿಂ-ಕೆ
ಟ್ಟ ನರಕಗತಿಯನ್ನು, ಕುರಿತು, ಯಾಂತಿ-ಹೋಗುತ್ತಲಿದ್ದಾರೆ, ಮೃ
ಗಾದಯಃ-ಸಿಹ್ಮಾದಿಮೃಗಗಳು ಪಕ್ಷಿಗಳು, ಸಂಸರಂತಿ-ಹುಟ್ಟುತ್ತಾ,
ಸಾಯುತ್ತಾ ಇರುತ್ತವೆ ॥ ॥೫೭॥

ಏವಂ-ಈ ರೀತಿಯಾಗಿ, ಮಯಾ-ನನ್ನಿಂದ, ಉದಿತಂ-ಹೇಳಲ್ಪಟ್ಟ
ದ್ದನ್ನು, ನಿತ್ಯಂ-ಪ್ರತಿದಿನದಲ್ಲಿಯೂ, ವೇಂಕಟಪರ್ವತೇ-ಈ ವೇಂಕಟಾ
ದ್ರಿಯಲ್ಲಿ, ಧ್ಯಾಯನ್-ಚಿಂತಿಸುತ್ತಿರುವವನಾಗಿ, ಮಾಂ-ನನ್ನನ್ನು, ಅ
ರ್ಚಯ-ಪೂಜಿಸುತ್ತಿರುವವನಾಗು, ಅಂತೇ-ದೇಹಾವಸಾನದಲ್ಲಿ, ದುರ್ಲ
ಭಾಂ-ಹೊಂದಲಸಾಧ್ಯವಾದ, ಸುಗತಿಂ-ಒಳ್ಳೇ ಗತಿಯನ್ನು, ಅಂದರೆ
ಮೋಕ್ಷವನ್ನು, ಸಮವಾಪ್ಸ್ಯಸಿ-ಪಡೆಯುತ್ತೀ ॥ ॥೫೮॥

ಶ್ರೀಶಃ-ಶ್ರೀನಿವಾಸಮೂರ್ತಿಯು, ಇತಿ-ಹೀಗೆ, ಉಕ್ತ್ವಾ-ಹೇಳಿ,
ಅಂತರ್ದಧೇ-ಅಂತರ್ಧಾನವಾದನು, ತದಾ-ಆಗ, ಮುನಿಃ-ಮನನಶೀಲ
ನಾದ, ವೈಖಾನಸಃ-ವೈಖಾನಸರುಷಿಯು, ವೇಂಕಟೇ-ವೇಂಕಟವೆಂಬ ಹೆ
ಸರುಳ್ಳ, ಪರ್ವತೋತ್ತಮೇ-ಶ್ರೇಷ್ಠವಾದ ಬೆಟ್ಟದಲ್ಲಿ, ದೇವೇಶಂ-ಬ್ರ
ಹ್ಮಇಂದ್ರರುದ್ರಾದಿದೇವತೆಗಳಿಗೆ ಸ್ವಾಮಿಯಾದ, ಶ್ರೀನಿವಾಸನನ್ನು,
ಅರ್ಚಯಾಮಾಸ-ಪೂಜೆಯನ್ನು ಮಾಡುತ್ತಿದ್ದನು. ॥ತಾ॥ ಆ ಶ್ರೀನಿ
ವಾಸದೇವರಿಂದ ವೈಖಾನಸ ವಂಶೀಯರಾದವರು ವೇಂಕಟಾಚಲದಲ್ಲಿ ಅ
ರ್ಚಿಸುತ್ತಿರುವರು. ವೈಖಾನಸರುಷಿಗಳ ಉತ್ಪತ್ತಿಕ್ರಮವನ್ನು ಆರಣ್ಯ
ಕಭಾಷ್ಯದಲ್ಲಿ ನೋಡಿದರೆ ಗೊತ್ತಾಗುವದು ॥ ॥೫೯॥

ಸೂತಃ-ಸೂತಮುನಿಯು, ಶೌನಕಾದಿರುಷಿಗಳಿಗೆ ಹೇಳುತ್ತಲಿದ್ದಾ

ವಾಸಸ್ಯಚರಿತಂಪರಮಾದ್ಭುತಂ । ಯಥಾವ್ಯಾಸಾಚ್ಛ್ರುತಂ
ಪೂರ್ವಂತಥಾಸಮ್ಯಙ್ನಿರೂಪಿತಂ ॥೫೭॥ ಶ್ರೀನಿವಾಸಸ್ಯ
ಕಲ್ಯಾಣಂಶ್ರುತ್ವಾಕಲ್ಯಾಣಮಾಪ್ನುಯಾತ್॥ ತೊಂಡಮಾ
ನಸ್ಯಭೂಪಸ್ಯವೃತ್ತಾಂತಂಶೃಣುಯಾದ್ಯದಿ । ಸಂಸಾರ
ದುಃಖನಿರ್ಮುಕ್ತಃಭಕ್ತಿಮಾಞ್ಛ್ಚಭವಿಷ್ಯತಿ ॥ ಜನಕಸ್ಯಾ
ನುಜಪ್ರಾಪ್ತಿಂಶ್ರುತ್ವೇಷ್ಟಾರ್ಥಂಸಮಾಪ್ನುತೆ ॥೫೮॥ ಗೀತಾಂ
ಚಶ್ರೀನಿವಾಸಸ್ಯ ಸರ್ವಶಾಸ್ತ್ರಾರ್ಥಸಂಯುತಾಂ । ವೈ
ಖಾನಸಾಯಸಂಪ್ರೋಕ್ತಾಂ ಶೃಣ್ವನ್‌ಭಕ್ತೋನಿರಂತರಂ ॥

ನೆ, ಭವತಾಂ–ನಿಮ್ಮಗಳಿಗೆ, ಶ್ರೀನಿವಾಸಸ್ಯ–ವಿಷ್ಣುವಿನ, ಪರಮಾದ್ಭು
ತಂ–ಅತ್ಯಾಶ್ಚರ್ಯಕರವಾದ, ಚರಿತಂ–ವೃತ್ತಾಂತವು, ಯಥಾ–ಹೇಗೆ,
ಪೂರ್ವಂ–ಹಿಂದಕ್ಕೆ, ವ್ಯಾಸಾತ್–ವ್ಯಾಸಮುನಿಯಿಂದ, ಶ್ರುತಂ–ಕೇಳ
ಲ್ಪಟ್ಟಿತೋ, ತಥಾ–ಹಾಗೆ, ಸಮ್ಯಕ್–ಚನ್ನಾಗಿ, ನಿರೂಪಿತಂ–ಹೇಳ
ಲ್ಪಟ್ಟಿತು ॥ ॥೫೭॥

ಶ್ರೀನಿವಾಸಸ್ಯ–ಲಕ್ಷ್ಮೀಪತಿಯ, ಕಲ್ಯಾಣಂ–ಪದ್ಮಾವತಿಯ ವಿವಾ
ಹವನ್ನು. ಶ್ರುತ್ವಾ–ಕೇಳಿ, ಕಲ್ಯಾಣಂ–ಶುಭವನ್ನು, ಆಪ್ನುಯಾತ್–ಪಡೆ
ಯುತ್ತಾನೆ, ತೊಂಡಮಾನಸ್ಯ–ತೊಂಡಮಾನನೆಂಬ, ಭೂಪಸ್ಯ–ಧೊರೆ
ಯ, ವೃತ್ತಾಂತಂ–ಚರಿತ್ರೆಯನ್ನು, ಶೃಣುಯಾದ್ಯದಿ––ಕೇಳಿದವನಾದ
ರೆ, ಸಂಸಾರದುಃಖ––ಸಂಸೃತಿಯೆಂಬ ದುಃಖದಿಂದ, ನಿರ್ಮುಕ್ತಃ–ಬಿ
ಡುಗಡೆಯುಳ್ಳವನಾಗಿ, ಭಕ್ತಿಮಾನ್––ಭಗವದ್ಭಕ್ತಿಯುಳ್ಳವನೂ, ಭವಿ
ಷ್ಯತಿ–ಆಗುತ್ತಾನೆ, ಜನಕಸ್ಯ–ಜನಕರಾಯನಿಗೆ, ಅನುಜಪ್ರಾಪ್ತಿಂ–
ಕುಶಧ್ವಜನು ಬದುಕಿಬಂದದ್ದನ್ನು, ಶ್ರುತ್ವಾ–ಕೇಳಿ,ಇಷ್ಟಾರ್ಥಂ–ಕೋ
ರಿದ ಕೋರಿಕೆಯನ್ನು, ಸಮಾಪ್ನುತೆ–ಪಡೆಯುತ್ತಾನೆ ॥ ॥೫೮॥

ಸರ್ವ–ಸಮಸ್ತಗಳಾದ, ಶಾಸ್ತ್ರಾರ್ಥ–ಶಾಸ್ತ್ರಾಭಿಪ್ರಾಯದಿಂ
ದ, ಸಂಯುತಾಂ–ಕೂಡಿರುವದಾದ, ಶ್ರೀನಿವಾಸಸ್ಯ–ಶ್ರೀನಿವಾಸದೇವ
ರ, ವೈಖಾನಸಾಯ–ವೈಖಾನಸಮುನಿಗೆ, ಸಂಪ್ರೋಕ್ತಾಂ–ಬೋಧಿಸಿ
ದ್ದಾದ, ಗೀತಾಂ–ಗೀತೆಯನ್ನು, ಶೃಣ್ವನ್–ಕೇಳುತ್ತಿರುವವನಾಗಿ, ಭ
ಕ್ತಃ–ದೇವರ ಸೇವಕನಾದವನು, ನಿರಂತರಂ–ಅಡ್ಡಿಯಿಲ್ಲದೆ, ಸದಾ–

ಸದಾಪುಣ್ಯರತೋ ಭೂತ್ವಾದೇಹಾಂತೇ ಮುಕ್ತಿಮಾಪ್ನುಯಾ
ತ್ ॥ ೫೮ ॥ ಏತಚ್ಚರಿತ್ರಂಪರಮಂ ಜ್ಞಾನದಂವೇಂಕಟೇಶಿ
ತುಃ । ಭುಕ್ತಿಮುಕ್ತಿಪ್ರದಂತಸ್ಮಾತ್ಪಠಧ್ವಂಮುನಯೋನಿ
ಶಂ ॥ ೫೯ ॥ ಕಾಮ್ಯಕರ್ಮಸುಸರ್ವತ್ರಕಲ್ಯಾಣಂವೇಂಕಟೇಶಿ
ತುಃ। ಪಠನೀಯ್ಯಂವಿಶೇಷೇಣಭೂತಿಕಾಮೇನಭೂತಲೇ ॥೬೦॥
ಭೋಗಮೋಕ್ಷಾರ್ಥಿನಾಸರ್ವಂ ಪಠನೀಯ್ಯಂದಿನೇದಿನೇ । ಪ
ಠತಾಂ ಸರ್ವಪಾಪಘ್ನಂ ನಪಾಪೇರಮತೇಮನಃ ॥ ೬೧ ॥

ಯಾವಾಗಲೂ, ಪುಣ್ಯರತಃ–ಪುಣ್ಯಕರ್ಮಾಸಕ್ತನಾಗಿ, ದೇಹಾಂತೇ–ಶರೀ
ರಾವಸಾನದಲ್ಲಿ, ಮುಕ್ತಿಂ—ಮೋಕ್ಷವನ್ನು, ಆಪ್ನುಯಾತ್–ಪಡೆಯು
ವನು ॥ ॥೫೮॥
ವೇಂಕಟೇಶಿತುಃ–ವೇಂಕಟ ಪರ್ವತಕ್ಕೆ ಸ್ವಾಮಿಯಾದ ಶ್ರೀನಿವಾಸನ,
ಪರಮಂ–ಉತ್ಕೃಷ್ಟವಾದ, ಜ್ಞಾನದಂ–ವಿವೇಕವನ್ನು ಉಂಟುಮಾಡು
ವದಾದ, ಏತಚ್ಚರಿತ್ರಂ–ಈಕಥೆಯು, (ಯಸ್ಮಾತ್–ಯಾವಕಾರಣದಿಂದ,)
ಭುಕ್ತಿಮುಕ್ತಿ ಪ್ರದಂ–ಇಹಪರಸುಖಗಳನ್ನು ಕೊಡುವಂಥಾದ್ದಾಗಿರುವ
ದೋ, ತಸ್ಮಾತ್–ಆಕಾರಣದಿಂದ, ಮುನಯಃ–ಋಷಿಗಳಿರಾ, ಅನಿಶಂ–
ಯಾವಾಗಲೂ, ಪಠಧ್ವಂ–ಪಾರಾಯಣವನ್ನು ಮಾಡುವವರಾಗಿರಿ ॥೫೯॥
ಕಾಮ್ಯಕರ್ಮಸು–ಇಷ್ಟಾರ್ಥಪ್ರಾಪ್ತಿಯಾಗಬೇಕಾದ ಕೆಲಸಗಳಲ್ಲಿ,
ಸರ್ವತ್ರ–ಯಲ್ಲಿಯೂ, ವೇಂಕಟೇಶಿತುಃ–ಶ್ರೀನಿವಾಸಮೂರ್ತಿಯ, ಕ
ಲ್ಯಾಣಂ–ವಿವಾಹವು ಭೂತಲೇ–ಭೂಮಿಯಲ್ಲಿ ಭೂತಿಕಾಮೇನ–ಐಶ್ವರ್ಯಾ
ಪೇಕ್ಷೆವುಳ್ಳವನಿಂದ ವಿಶೇಷೇಣ–ಅತಿಶಯವಾಗಿ, ಪಠನೀಯ್ಯಂ–ಪಾರಾ
ಯಣ ಮಾಡತಕ್ಕದ್ದು ॥ ॥೬೦॥
ಭೋಗಮೋಕ್ಷಾರ್ಥಿನಾ–ಐಹಿಕಸುಖವೂ ಮುಕ್ತಿಯೂ ಬೇಕೆಂಬ
ಕೋರಿಕೆಯುಳ್ಳವನಿಂದ, ದಿನೇದಿನೇ–ಪ್ರತಿದಿನದಲ್ಲಿಯೂ, ಸರ್ವಂ–ಸಮ
ಸ್ತವೂ ಪಠನೀಯ್ಯಂ–ಪಾರಾಯಣಮಾಡತಕ್ಕದ್ದು, ಪಠತಾಂ–ಹಾಗೆ
ಪಾರಾಯಣಮಾಡುವವರಿಗೆ, ಸರ್ವಪಾಪಘ್ನಂ–ಸಮಸ್ತ ಪಾತಕಗಳ
ನ್ನು ಹೋಗಲಾಡಿಸುವಂಥಾದ್ದಾಗಿರುವದು, ಮನಃ–ಚಿತ್ತವು, ಪಾಪೇ–
ಪಾತಕಕೃತ್ಯದಲ್ಲಿ, ನರಮತೇ–ಅನುಮೋದಿಸುವದಿಲ್ಲವು ॥ ॥೬೧॥

ರುಷಯಃ ॥ ಸೂತಸೂತಮಹಾಭಾಗತಾರಿತಾಸ್ಮವಯಂ
ತ್ವಯಾ । ಇತ್ಯುಕ್ತ್ವಾಸೂತಮಾ ಲಿಂಗ್ಯಯಯುಸ್ಸರ್ವೇ
ಮಹರ್ಷಯಃ ॥ * * * ॥೬೨॥

ಇತಿ ಶ್ರೀ ಬವಿಷ್ಯೋತ್ತರಪುರಾಣೆ ವೆಂಕಟೆಶಮಾಹಾ
ತ್ಮ್ಯೆ ಉತ್ತರಭಾಗೆ ಜ್ಞಾನಯೊಗೆ ಕಥನಂ
ನಾಮ ಏಕಾದಶೋಧ್ಯಾಯಃ ॥

---

ರುಷಯಃ–ಶೌನಕಾದಿ ರುಷಿಗಳು, ಹೇಳುತ್ತಾರೆ, ಮಹಾಭಾಗ–ಮಾ
ಹನೀಯ್ಯನಾದ,ಸೂತಸೂತ–ಎಲೈ ಸೂತಮುನಿಯೇ ಸೂತಮುನಿಯೇ,
ವಯಂ–ನಾವು, ತ್ವಯಾ–ನಿನ್ನಿಂದ, ತಾರಿತಾಸ್ಮಃ–ಉದ್ಧರಿಸಲ್ಪಟ್ಟವ
ರಾದೆವು, ಇತಿ–ಹೀಗೆಂದು, ಉಕ್ತ್ವಾ–ಹೇಳಿ, ಸೂತಂ–ಸೂತಮುನಿ
ಯನ್ನು, ಆಲಿಂಗ್ಯ–ಅಪ್ಪಿಕೊಂಡು, ಸರ್ವೆ–ಸಮಸ್ತರಾದ, ಮಹರ್ಷ
ಯಃ–ಮುನಿಗಳು, ಯಯುಃ–ಹೊರಟು ಹೋದರು ॥ ॥೬೨॥

ಇಂತು ಭವಿಷ್ಯೋತ್ತರ ಪುರಾಣದೊಳು ವೆಂಕಟೇ
ಶಮಹಾತ್ಮ್ಯೆಯ ವುತ್ತರಭಾಗದಲ್ಲಿ ಜ್ಞಾನ
ಯೊಗ ಕಥನವೆಂಬ ಹನ್ನೊಂದನೇ
ಅಧ್ಯಾಯವು ॥

---